# ಮಾನವ ಧರ್ಮಶಾಸ್ತ್ರ

ಮತ್ತು

# ಮಹಿಳೆಯರು

ವಿ|| ಎನ್. ರಂಗನಾಥ ಶರ್ಮಾ

ಶ್ರೀ ಭಗವತ್ಪಾದ ಪ್ರಕಾಶನ

ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನ

ಮಠದೇವಳ, ಶಿರಸಿ - ೫೮೧೩೩೬

ದೂರವಾಣಿ . (೦೮೩೮೪) ೨೭೯೩೧೧

**"Manava Dharmashastra mattu Mahileyaru"** written by
Vidwan N. Ranganath Sharma, 896, 4th main Road, Vijayanagar
Bangalore-40

Published by :
Shri Bhagavatpad Prakashana, Shri Sonda Swarnavalli
Mahasamsthanam, Mathadevala, Tq.: Sirsi (U. K.) - 581 336

First Impression: August - 2004

Pages : X + 166

Copies : 1000

Price Rs. **90/-**



ಪ್ರಥಮ ಮುದ್ರಣ : ಅಗಸ್ಟ್ - ೨೦೦೪ ಪ್ರತಿಗಳು : ೧೦೦೦
ಬೆಲೆ : ರೂ. ೯೦-೦೦ ಪುಟಗಳು : X + ೧೬೬

ಮುದ್ರಕರು :
ದಿ ಚೇತನಾ ಪ್ರಿಂಟಿಂಗ್ ಆ್ಯಂಡ್ ಪಬ್ಲಿಶಿಂಗ್ ಕೋ-ಒಪರೇಟಿವ್ ಸೊಸೈಟಿ ಲಿಮಿಟೆಡ್, ಶಿರಸಿ
ಸಿ. ಪಿ. ಬಝಾರ, ಶಿರಸಿ - 581 401 (ಉ. ಕ.) ✆: (08384) 227002

श्री लक्ष्मीनृसिंहः



श्री नारायणः

ತಾರಣಸಂ।। ಶ್ರಾವಣಕೃ.೬
ಶುಕ್ರವಾರ, ೬-೮-೨೦೦೪

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ, ಪದವಾಕ್ಯಪ್ರಮಾಣ ಪಾರಾವಾರಪಾರೀಣ
ಯಮನಿಯಮಾಸನ ಪ್ರಾಣಾಯಾಮಪ್ರತ್ಯಾಹಾರಧ್ಯಾನಧಾರಣ ಸಮಾಧ್ಯಂಷ್ಟಾಂಗಯೋಗಾನುಷ್ಠಾನನಿಷ್ಠ,
ಷಣ್ಮತವ್ಯವಸ್ಥಾಪನಾಚಾರ್ಯ, ತಪಶ್ಚಕ್ರವರ್ತ್ಯನಾದ್ಯವಿಚ್ಛಿನ್ನ ಶ್ರೀ ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಶಿಷ್ಯ
ಶ್ರೀ ಭಾಸ್ಕರೇಂದ್ರ ಸರಸ್ವತೀ ಕರಕಮಲ ಸಂಜಾತ ಶ್ರೀ ಶ್ರೀಮತ್ ವಿಶ್ವವಂದ್ಯ ಸರಸ್ವತೀ
ಗುರುಪರಂಪರಾಪ್ರಾಪ್ತ ಸಕಲನಿಗಮಾಗಮಸಾರಹೃದಯ ಸಾಂಖ್ಯತ್ರಯಪ್ರತಿಪಾದಕ
ಕ್ರಮಾಗತಶ್ರೌತಸ್ಮಾರ್ತಕರ್ಮಮಾರ್ಗವ್ಯವಸ್ಥಾಪಕ, ಅಶೇಷತ್ರಯ್ಯಂತಾದ್ಯದ್ವೈತಸಿದ್ಧಾಂತಪ್ರಬಂಧ
ಪ್ರವರ್ತಕ ಆದಿರಾಜಧಾನೀ ವಿದ್ಯಾನಗರ ಮಹಾರಾಜಧಾನೀ ಶ್ರೀಮತ್ ಸುಧಾಪುರವರಸಿಂಹಾಸನಾಧೀಶ್ವರ
ಸರ್ವತಂತ್ರಸ್ವತಂತ್ರ ವ್ಯಾಖ್ಯಾನ ಸಿಂಹಾಸನಾಧಿಷ್ಠಿತ, ರಾಜಾಧಿರಾಜದೇಶಿಕ ಗೋಕರ್ಣಮಂಡಲಾಧೀಶ,
ಸಹ್ಯಾದ್ರಿಪುರವರಾಧೀಶ್ವರ, ಶಾಲ್ಮಲೀತೀರವಾಸ, ಶ್ರೀಮಲ್ಲಕ್ಷ್ಮೀನೃಸಿಂಹ
ಚಂದ್ರಮೌಳಿಪದಪಂಕೇರುಹರಸಗ್ರಾಸಾಳಿವಸ್ಮಾನಸ ಶ್ರೀ ಲಲಿತಾಚರಣದಾಸ ಶ್ರೀಮತ್ ಸೋಂದಾ ಸ್ವರ್ಣವಲ್ಲೀ
ಮಹಾಸಂಸ್ಥಾನಾಧೀಶ್ವರ ಶ್ರೀ ಶ್ರೀಮತ್ ಸರ್ವಜ್ಞೇಂದ್ರ ಸರಸ್ವತೀ ಶ್ರೀಸ್ವಾಮಿಕರಕಮಲಸಂಜಾತ

## ಶ್ರೀ ಶ್ರೀಮತ್ ಗಂಗಾಧರೇಂದ್ರ ಸರಸ್ವತೀ ಶ್ರೀ ಸ್ವಾಮಿಭಿಃ

**ಕ್ರಿಯಂತೇ ನಾರಾಯಣ ಸ್ಮೃತಯಃ**

ಶ್ರೀ ರಂಗನಾಥ ಶರ್ಮಾರು ಬರೆದ **''ಮಾನವ ಧರ್ಮಶಾಸ್ತ್ರ ಮತ್ತು ಮಹಿಳೆಯರು''** ಗ್ರಂಥ ರೂಪದಿಂದ ಹೊರಬರುತ್ತಿರುವುದು ಸಂತೋಷದ ವಿಷಯ.

**''ಯದ್ವೈ ಕಿಂಚ ಮನುರವದತ್ ತದ್ಭೇಷಜಂ''** ಎಂದು ವೇದ ವಚನ. ಮನುವಿನ ಮಾತು ಮಾನವರಿಗೆ ಹಿತಕರ, ಔಷಧದಂತೆ. ಔಷಧವು ಸಿಹಿಯೇ ಆಗಿರುತ್ತದೆಯೆಂದು ಹೇಳಲು ಸಾಧ್ಯವಿಲ್ಲ. ಕಹಿಯೂ ಆಗಿರಬಹುದು. ಆದರೂ ಹಿತವೇ ಆಗಿರುತ್ತದೆ. ಯಾವಾಗ? ಯೋಗ್ಯರಾದ ವೈದ್ಯರ ಸಲಹೆಯ ಮೇರೆಗೆ ತೆಗೆದುಕೊಂಡಾಗ. ಮನು ಮಹರ್ಷಿಗಳು ಔಷಧಗಳನ್ನು ತಯಾರಿಸಿಟ್ಟಿದ್ದಾರೆ. ಆದರೆ ಅದನ್ನು ಯಾರು ಹೇಗೆ ತೆಗೆದುಕೊಳ್ಳಬೇಕೆಂದು ಅಧಿಕೃತವಾಗಿ ಸಲಹೆ ನೀಡುವ ವೈದ್ಯರು ಈ ಕಾಲಕ್ಕೆ ಅವಶ್ಯ ಬೇಕಾಗಿದ್ದಾರೆ. ಆ ವೈದ್ಯ ಪದವಿಗೆ ಶ್ರೀ ರಂಗನಾಥ ಶರ್ಮಾರು ಅರ್ಹರೆನಿಸುತ್ತಾರೆ. ಮನುಸ್ಮೃತಿಯನ್ನು ಕುರಿತು ಯದ್ವಾ ತದ್ವಾ ವ್ಯಾಖ್ಯಾನಗಳಾಗುತ್ತಿರುವ ಇವತ್ತಿನ ದಿನಗಳಲ್ಲಿ, ಮನುಸ್ಮೃತಿಯ ಸತ್ಯ - ತತ್ತ್ವ - ಸತ್ವಗಳನ್ನು ಎತ್ತಿ ಹಿಡಿಯುವ ಕೆಲಸ ಸುಲಭವೇನಲ್ಲ. ಆದರೂ ರಂಗನಾಥ ಶರ್ಮಾರು ತಮ್ಮ ಪಾಂಡಿತ್ಯ - ಪ್ರತಿಭೆಗಳನ್ನುಪಯೋಗಿಸಿ ಈ ಕೆಲಸವನ್ನು ಯೋಗ್ಯವಾಗಿಯೇ ಮಾಡಿದ್ದಾರೆ.

ನಾವು ಹಿಂದೆ ವಿದ್ಯಾರ್ಥಿಯಾಗಿದ್ದಾಗ ಗಮನಿಸಿದ್ದೇವೆ - ನಗರಗಳಲ್ಲಿ ಮನುಮಹರ್ಷಿಗಳನ್ನು ಬೈಯ್ಯುವುದೇ ಒಂದು **''ಫ್ಯಾಶನ್''.** ಅವರಿವರು ಬೈಯ್ಯುತ್ತಾರೆಂದು

ಯುವಕರು ಅದನ್ನೇ ಅನುಸರಿಸುತ್ತಿದ್ದುದನ್ನೂ ಕಂಡಿದ್ದೇವೆ. ಅವರಲ್ಲಿ ಒಬ್ಬರೂ ಮನುಸ್ಮೃತಿಯನ್ನು ಓದಿದವರಲ್ಲ! ಓದದೇ, ತಿಳಿಯದೇ, ಅವರಿವರು ಮಾತಾಡಿದ್ದನ್ನು ಕೇಳಿ, ಅದನ್ನೇ ತಾನು ಅನುಕರಿಸುವುದಾದರೆ ಅದನ್ನು **''ಅಂಧಶ್ರದ್ಧೆ''** **''ಮೂಢನಂಬಿಕೆ''** ಎಂದೇ ಕರೆಯುವುದು ಯೋಗ್ಯವಾಗಬಹುದು.

ವಿಶೇಷವಾಗಿ ಈ ಗ್ರಂಥವು ಮಹಿಳೆಯರ ಬಗ್ಗೆ ಮನುವಿನ ದೃಷ್ಟಿಯನ್ನು ಎತ್ತಿ ಹಿಡಿಯಲು ಹೊರಟಿದೆ. ಸಮಾಜದ ವ್ಯವಸ್ಥೆ, ಕುಟುಂಬ ವ್ಯವಸ್ಥೆ ಸುಸ್ಥಿರವಾಗಿ ನಿಂತರೇನೇ ಧರ್ಮದ ಉಳಿವು ಸಾಧ್ಯ. ಈ ಎರಡು ವ್ಯವಸ್ಥೆಗಳೂ ಉಳಿಯಲು ಸ್ತ್ರೀಯರು ನಿರ್ವಹಿಸಬೇಕಾದ ಕರ್ತವ್ಯಗಳಿಗೆ ಮಹತ್ವವಿದೆ. ಇವತ್ತಿನ ಪರಿಸ್ಥಿತಿಯಲ್ಲಂತೂ ಸ್ತ್ರೀಗೆ ತನ್ನ ತಾಯಿಯ ಗರ್ಭದಲ್ಲಿರುವಾಗಿನಿಂದಲೇ ಅಪಾಯಗಳು ಬಂದೊದಗುತ್ತಿವೆ. (ಸ್ತ್ರೀ ಭ್ರೂಣ ಹತ್ಯೆ) **''ಸ್ತ್ರೀಯರನ್ನು ರಕ್ಷಿಸಿ''** ಎಂಬಿತ್ಯಾದಿ ಕೂಗುಗಳು ಕೇಳಿ ಬರುತ್ತಿವೆ. ಸಾಮಾಜಿಕ ಬದುಕಿನಲ್ಲಂತೂ ಸ್ತ್ರೀಯರಿಗೆ ಹಿಂದೆಂದಿಗಿಂತಲೂ ಹೆಚ್ಚಿನ ರಕ್ಷಣೆಯ ಅವಶ್ಯಕತೆ ಇಂದು ಅನಿವಾರ್ಯವೆನಿಸುತ್ತದೆ. ಇಂಥ ಸಂದರ್ಭದಲ್ಲಿ ಮನುವಿನ ಶಿರೋಧಾರ್ಯ ವಚನವಿದು **-''ಸ್ತ್ರಿಯಃ ಶ್ರೀಯಶ್ಚ ಗೇಹೇಷು ನವಿಶೇಷೋಽಸ್ತಿ ಕಶ್ಚನ''- ''ಸ್ತ್ರೀಗೂ ಜಗನ್ಮಾತೆಯಾದ ಲಕ್ಷ್ಮೀಗೂ ಅಂತರವಿಲ್ಲ''**. ಮನುವಿನ ಅಭಿಪ್ರಾಯಗಳನ್ನು ಅರ್ಥಮಾಡಿಕೊಂಡರೆ ಬದುಕು ಹಸನಾಗುವುದರಲ್ಲಿ ಸಂಶಯವಿಲ್ಲ. ಈ ಗ್ರಂಥದಿಂದ ಆರಂಭದಲ್ಲಿ ವಿಚಾರವಂತರು ಉಪಕೃತರಾಗಲಿ. ಅವರ ಮೂಲಕ ಸಮಾಜಕ್ಕಿದು ದಕ್ಕಲಿ. ಪಂಡಿತರಾಜ ಶ್ರೀ ರಂಗನಾಥ ಶರ್ಮಾರಂಥ ವಿದ್ವಾಂಸರು ಸಮಾಜದಲ್ಲಿ ಹೆಚ್ಚಲಿ.

**ಲೋಕಾಃ ಸಮಸ್ತಾಃ ಸುಖಿನೋ ಭವಂತು.**

**ನಾರಾಯಣ** **ನಾರಾಯಣ** **ನಾರಾಯಣ**



# ಪ್ರಕಾಶಕರ ನುಡಿ

ಭಾರತದ ಸಾಂಸ್ಕೃತಿಕ ಪ್ರಪಂಚದ ಮಹಾಚೇತನವಾದ ಆದಿ ಶಂಕರಾಚಾರ್ಯರು ಅಂದು (ಕ್ರಿ. ಶ. ೭೮೮-೮೨೦) ಬೆಳಗಿದ ಧರ್ಮದೀಪವು ಇಂದಿಗೂ ಸ್ವರ್ಣವಲ್ಲಿಯ ತಪೋಭೂಮಿಯಲ್ಲಿ ಪ್ರಜ್ವಲಿಸುತ್ತಿದೆ.

ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲೂಕಿನ ಸುಂದರ ನಿಸರ್ಗ ಪರಿಸರದ ರಮ್ಯತಾಣದಲ್ಲಿರುವ ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನವು ಅದ್ವೈತ ಮತದ ಮಹಾ ಗುರುಪೀಠವಾಗಿ ಪ್ರಸಿದ್ಧವಾಗಿದೆ. ಸುಮಾರು ಹನ್ನೆರಡುನೂರು ವರ್ಷಗಳ ಭವ್ಯವಾದ ಇತಿಹಾಸ ಶ್ರೀಮಠಕ್ಕಿದೆ. ಶ್ರೀ ವಿಶ್ವವಂದ್ಯ ಸರಸ್ವತಿಗಳಿಂದ ಆರಂಭವಾಗಿ ಇಂದಿನ ಪೀಠಾಧಿಪತಿಗಳಾದ ಶ್ರೀ ಗಂಗಾಧರೇಂದ್ರ ಸರಸ್ವತಿಗಳವರೆಗೆ ೫೪ ಯತಿವರ್ಯರು ಶ್ರೀಮಠದ ಸಂಸ್ಕೃತಿ ಪರಂಪರೆಯನ್ನು ಮುನ್ನಡೆಸಿಕೊಂಡು ಬಂದಿದ್ದಾರೆ. ಗೋಕರ್ಣ ಮಂಡಲಕ್ಕೆ ಗುರುಪೀಠವಾಗುವುದರ ಜೊತೆಗೆ ಘಟ್ಟದ ಮೇಲಿನ ಹದಿನಾರು ಸೀಮೆಗಳು ಹಾಗೂ ಘಟ್ಟದ ಕೆಳಗಿನ ಕೆಲಭಾಗಗಳು ಶ್ರೀಮಠದ ವ್ಯಾಪ್ತಿಯಲ್ಲಿದ್ದು ನಾಡಿನಾದ್ಯಂತ ಅಪಾರ ಸಂಖ್ಯೆಯ ಭಕ್ತಕೋಟಿಯನ್ನು ಶ್ರೀಮಠವು ಪಡೆದಿದೆ.

ಸ್ವರ್ಣವಲ್ಲೀ ಮಹಾಸಂಸ್ಥಾನವು ಭಾರತೀಯ ಸಂಸ್ಕೃತಿಯ ಪ್ರಸಾರ ಮಾಡುತ್ತಿದ್ದು, ವೇದವಿದ್ಯಾ ವ್ಯಾಸಂಗ ಕೇಂದ್ರವಾಗಿ ಪ್ರಸಿದ್ಧವಾಗಿದೆ. ವೈದಿಕ ಸಂಸ್ಕೃತಿ - ಸಂಸ್ಕಾರಗಳನ್ನು ಪ್ರಚುರಪಡಿಸುವುದು, ಆದಿಶಂಕರರ ವೇದಾಂತ ಸಾರವನ್ನು ಮನೆ ಮನಗಳಿಗೆ ತಲುಪಿಸುವುದು, ಧಾರ್ಮಿಕ ವಿಧಿ ವಿಧಾನಗಳನ್ನು, ಕರ್ಮಾನುಷ್ಠಾನ, ಯೋಗವನ್ನು ನಿರಂತರವಾಗಿ ನಡೆಸುತ್ತ ಶ್ರೀಮಠವು ಭಕ್ತಕೋಟಿಯ ಕಣ್ಮಣಿಯಾಗಿ ಬೆಳೆದಿದೆ. ವಿದ್ಯಾದಾನ, ಅನ್ನದಾನ, ಅಭಯದಾನವನ್ನು ನೀಡಿ ಭಕ್ತರ ಬದುಕಿನ ಸಮಸ್ಯೆಗಳಿಗೆ ನಿರಂತರವಾಗಿ ಸ್ಪಂದಿಸುತ್ತಲಿರುವ ಈ ಮಹಾಸಂಸ್ಥಾನವು ಭಾರತೀಯ ಸಂಸ್ಕೃತಿಯ ಪ್ರಸಾರ ಕಾರ್ಯ ಮಾಡುತ್ತಿದೆ. ಸರ್ವಧರ್ಮಸಮಭಾವ, ಭಾವೈಕ್ಯತೆ ಸಾರುವುದು ಅದರ ಗುರಿಯಾಗಿದೆ.

ಸಮಾಜದ ಓರೆ - ಕೋರೆಗಳನ್ನು ತಿದ್ದುವಲ್ಲಿ, ಧಾರ್ಮಿಕ ಭಾವನೆಗಳನ್ನು ಜನಮಾನಸದಲ್ಲಿ ಬಿತ್ತುವಲ್ಲಿ ಮತ್ತು ಜ್ಞಾನ ಪ್ರಸಾರದ ಕಾರ್ಯದಲ್ಲಿ, ಪತ್ರಿಕಾ ಮಾಧ್ಯಮದ ಮಹತ್ವವನ್ನು ಮನಗಂಡ ಪೂಜ್ಯ ಶ್ರೀಗಳು ಪ್ರಕಾಶನ ಸಂಸ್ಥೆಯೊಂದನ್ನು ಸ್ಥಾಪಿಸಲೇಬೇಕೆಂಬ ದೃಢ ನಿರ್ಧಾರಕ್ಕೆ ಬಂದರು. ಅವರ ಸಂಕಲ್ಪ ಸಾಕಾರಗೊಂಡದ್ದು ಶ್ರೀ ಭಗವತ್ಪಾದ ಪ್ರಕಾಶನದ ರೂಪದಲ್ಲಿ. ಈ ಸಂಸ್ಥೆಯು ೨೦ ಕ್ಕೂ ಹೆಚ್ಚು ಧಾರ್ಮಿಕ ಗ್ರಂಥಗಳನ್ನು ಹೊರತಂದದ್ದಲ್ಲದೇ 'ಸ್ವರ್ಣವಲ್ಲೀಪ್ರಭಾ' ಎಂಬ ಮಾಸ ಪತ್ರಿಕೆಯನ್ನು ಪ್ರಕಟಿಸುತ್ತಿದೆ.

ಧರ್ಮಶಾಸ್ತ್ರದ ನೆಲಗಟ್ಟಿನಲ್ಲಿ ಸಮಾಜದಲ್ಲಿ ಮಹಿಳೆಯರ ಸ್ಥಾನ ಕುರಿತಾಗಿ ಮತ್ತು

ಚಾತುರ್ವರ್ಣ್ಯ ಕುರಿತಾಗಿ ೩೬ ಬಿಡಿ ಲೇಖನಗಳು ಸ್ವರ್ಣವಲ್ಲೀ ಪ್ರಭಾ ಮಾಸ ಪತ್ರಿಕೆಯಲ್ಲಿ ಪ್ರಕಟವಾಗಿವೆ. ವಿವೇಕಿಗಳಲ್ಲಿ ವಿದ್ವಜ್ಜನರಲ್ಲಿ ಈ ಕುರಿತಾಗಿ ಚಿಂತನೆ ನಡೆಯುವಂತಹ ಆಹಾರ ಸಾಮಗ್ರಿಗಳನ್ನು ತುಂಬಿದ ಲೇಖಕರು, ಖ್ಯಾತ ವಿದ್ವಾನ್ ರಂಗನಾಥ ಶರ್ಮಾ ಅವರು . ಆ ಎಲ್ಲ ಲೇಖನಗಳನ್ನೂ ಸಂಕಲಿಸಿ ಗ್ರಂಥರೂಪದಲ್ಲಿ ಪ್ರಕಟಿಸಲು ಒಪ್ಪಿಗೆ ನೀಡಿದ ವಿದ್ವಾನ್ ರಂಗನಾಥ ಶರ್ಮಾ ಅವರಿಗೆ ನಮ್ಮ ಅಭಿನಂದನೆಗಳು.

ಪೂಜ್ಯ ಶ್ರೀ ಶ್ರೀಗಳವರು ಆಶೀರ್ವದಿಸಿ, ಪ್ರೋತ್ಸಾಹಿಸಿದ್ದಾರೆ. ಅವರಿಗೆ ನಮ್ಮ ಕೃತಜ್ಞತಾಪೂರ್ವಕ ಸಾಷ್ಟಾಂಗ ವಂದನೆಗಳು. ಬಿಡಿ ಲೇಖನಗಳ ಸಂಪಾದಕ ಕ್ರಿಯೆಯಲ್ಲಿ ಅತ್ಯುತ್ಸಾಹದಿಂದ ತಮ್ಮನ್ನು ತೊಡಗಿಸಿಕೊಂಡು, ಆ ಕಾರ್ಯವನ್ನು ಶಿಸ್ತುಬದ್ಧವಾಗಿ ಪೂರೈಸಿದವರು ಸ್ವರ್ಣವಲ್ಲೀ ಪ್ರಭಾ ಮಾಸಪತ್ರಿಕೆಯ ಸಂಪಾದಕರೂ, ಯಲ್ಲಾಪುರ ತಾಲೂಕಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ, ೨೦೦೩-೨೦೦೪ ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ರಾಜ್ಯ ಪ್ರಶಸ್ತಿ ಪುರಸ್ಕೃತರೂ ಆದ ನಾ. ಸು. ಭರತನಹಳ್ಳಿಯವರು. ಅವರಿಗೆ ನಮ್ಮ ತುಂಬು ಹೃದಯದ ಕೃತಜ್ಞತೆಗಳು. ಇದಲ್ಲದೇ ಮುಖಪುಟದ ವಿನ್ಯಾಸಕ್ಕೆ ಅವರಿಂದ ದೊರೆತ ಸಲಹೆಗಳನ್ನು ನಾವು ಮರೆಯಲಾರೆವು.

ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ, ಶಿರಸಿಯ ಚೇತನಾ ಸಹಕಾರಿ ಆಫ್‌ಸೆಟ್ ಮುದ್ರಣದ ಶ್ರೀ ಪಿ. ವಿ. ಹೆಗಡೆ ಹಾಗೂ ಸಿಬ್ಬಂದಿಗಳಿಗೆ ಕೃತಜ್ಞತೆಗಳು.

ಸಹೃದಯೀ ಜನಮಾನಸದಲ್ಲಿ ಮಹಿಳೆಯರ ಕುರಿತಾಗಿ, ಮನುವಿನ ವಿಚಾರಧಾರೆ ಬಿತ್ತುವಲ್ಲಿ ಈ ಗ್ರಂಥ ಪ್ರಮುಖ ಪಾತ್ರ ವಹಿಸಲಿ ಎಂಬುದೇ ನಮ್ಮ ಆಶಯ.

ಶ್ರೀ ಭಗವತ್ಪಾದ ಪ್ರಕಾಶನದ ಪರವಾಗಿ,

ಸ್ವರ್ಣವಲ್ಲೀ ಮಹಾಸಂಸ್ಥಾನ
ದಿನಾಂಕ : ೭-೮-೨೦೦೪

**ಡಾ|| ಜಿ. ಎಂ. ಹೆಗಡೆ, ಧಾರವಾಡ**
**ಪ್ರೊ|| ಪಿ. ಆಯ್. ಹೆಗಡೆ** (ಕಾರ್ಯದರ್ಶಿ)

# ಮೊದಲ ಮಾತು

ಭಾರತ ದೇಶವು ಬ್ರಿಟಿಷರ ಹಿಡಿತದಿಂದ ಬಿಡಿಸಿಕೊಂಡು ಸ್ವತಂತ್ರವಾದ ಮೇಲೆ ನಮ್ಮ ದೇಶದಲ್ಲಿ ಅಕ್ಷರಸ್ಥರ ಮತ್ತು ರಾಜಕೀಯಸ್ಥರ ಸಂಖ್ಯೆ ಬೆಳೆಯತೊಡಗಿತು. ಹಣದುಬ್ಬರವು ಹೆಚ್ಚುತ್ತ ಹೋದಂತೆ ಶಾಲಾ ಕಾಲೇಜುಗಳ ಸಂಖ್ಯೆಯೂ ಹೆಚ್ಚತ್ತೊಡಗಿತು. ಆದರೆ ವಿದ್ಯೆಯ ಮೌಲ್ಯವು ಕುಸಿಯಿತು. ಜನರ ಆಸೆಗಳು ಹೆಚ್ಚಿದವು. ನೀತಿ ನಿಯಮಗಳು ಗಾಳಿಗೆ ತೂರಿ ಹೋದವು. ವಿದೇಶೀಯರಿಂದ ಪ್ರಾಪ್ತವಾದ ಶಾರೀರಿಕ ದಾಸ್ಯವು ಹೋದರೂ ಮಾನಸಿಕ ದಾಸ್ಯವು ತೊಲಗಲಿಲ್ಲ. ತೊಲಗುವುದಕ್ಕೆ ಬದಲಾಗಿ ಇನ್ನೂ ಬೆಳೆದು ಗಟ್ಟಿಯಾಗಿ ನೆಲೆಯೂರಿತು.

ನಮಗೆ ವಾಕ್ ಸ್ವಾತಂತ್ರ್ಯವು ದೊರೆತೊಡನೆ, ಶಾಲೆಯು ಮುಗಿದೊಡನೆ ಮಕ್ಕಳು ಅತ್ತಿಂದಿತ್ತ ಹಾರುತ್ತ ಓಡುವಂತೆ, ಅಕ್ಷರಸ್ಥರ ಮುಖದಿಂದ ಭಾಷಣಗಳು ಭಷಣಗಳಾಗಿ ಮೆರೆದವು. ಐರೋಪ್ಯರು ಬರೆದ ಲೇಖನ ವೇದವಾಯಿತು. ನಮ್ಮವರು ಹೇಳಿದ ವೇದವು ನಿರ್ವೇದವನ್ನು ತಾಳಿ ಮೂಲೆಗೆ ಸರಿಯಿತು. **ಆರ್ಯ** ಎಂಬ ಒಂದು ಜನಾಂಗವು ವಿದೇಶದಿಂದ ಭಾರತ ದೇಶಕ್ಕೆ ಬಂದು ನೆಲೆಸಿತೆಂದೂ, ಇಲ್ಲಿಯ ಮೂಲನಿವಾಸಿಗಳು ದ್ರಾವಿಡರೆಂದೂ ಪಾಶ್ಚಾತ್ಯರು ಬರೆದರು. ಆ ವಿಷಯವು ನಮ್ಮ ಶಾಲೆಗಳ ಪಠ್ಯಪುಸ್ತಕದಲ್ಲಿ ಸೇರಿತು. ನಮ್ಮ ವಿದ್ಯಾರ್ಥಿಗಳು ಅದನ್ನು ವೇದದಂತೆ ಕಂಠಪಾಠ ಮಾಡಿದರು. ಸಂಸ್ಕೃತವು ಆರ್ಯರ ಭಾಷೆಯೆಂದೂ, ವೇದ-ಧರ್ಮಶಾಸ್ತ್ರ ಮುಂತಾದ ಸಂಸ್ಕೃತ ಗ್ರಂಥಗಳು ವಿದೇಶದಿಂದ ಬಂದ ಆರ್ಯರಿಗೆ ಸಂಬಂಧಿಸಿದವಾದ್ದರಿಂದ ಅವೆಲ್ಲವೂ ತಿರಸ್ಕಾರಯೋಗ್ಯವೆಂದೂ, ಈಗಿನ ಭಾರತೀಯರೇ ಚಳವಳಿಯನ್ನು ಹುಟ್ಟುಹಾಕಿದರಲ್ಲದೆ, ಬ್ರಾಹ್ಮಣರೇ ಆರ್ಯರೆಂದು ನಿಶ್ಚಯಿಸಿದರು. ವಿದ್ವಾಂಸರಾದ ಇತಿಹಾಸಕಾರರು ಪರಿಶೋಧಿಸಿ **ಆರ್ಯ** ಎಂಬ ಶಬ್ದವು ಜನಾಂಗವಾಚಿಯೇ ಅಲ್ಲವೆಂದು, ವೇದಾದಿಗ್ರಂಥಗಳು ಸನಾತನ ಭಾರತೀಯರದೇ ಎಂದೂ ಘೋಷಿಸಿದರು. ಮಾನಸಿಕ ದಾಸ್ಯವು ಪಿಶಾಚಿಯಂತೆ ಬಿಗಿದಪ್ಪಿಕೊಂಡದ್ದರಿಂದ ಆಧುನಿಕ ವಿಚಾರವಾದಿಗಳು ಅದನ್ನೊಪ್ಪಲಿಲ್ಲ. ಪಠ್ಯಪುಸ್ತಕದಲ್ಲಿ ಬರೆದಿದ್ದ ಪಾಶ್ಚಾತ್ಯರ ವೇದಕ್ಕೆ ಸಂಮತವಾಗದಿದ್ದುದೇ ಇದಕ್ಕೆ ಕಾರಣ.

ಆರ್ಯರೆಂದರೆ ಬ್ರಾಹ್ಮಣರು ಮಾತ್ರ ಎಂದು ತಿಳಿದಿದ್ದುದೇ ಈ ದ್ವೇಷವ್ಯವಹಾರಕ್ಕೆ ನಿಮಿತ್ತ. ವೇದಾದಿ ಶಾಸ್ತ್ರಗಳು ಗೊತ್ತು ಮಾಡಿದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಚಾತುರ್ವರ್ಣ್ಯದಲ್ಲಿ ಶೂದ್ರವರ್ಗವೂ ಸೇರಿದೆ. ಆದ್ದರಿಂದ ಶೂದ್ರವರ್ಗದವರೂ ಆರ್ಯರೇ ಆಗಿದ್ದಾರೆ. ಆರ್ಯರು ವಿದೇಶದಿಂದ ಬಂದಿದ್ದರೆ, ಶೂದ್ರರೂ ವಿದೇಶದಿಂದ ಬಂದವರೇ. ಇದನ್ನರಿಯದೇ ವಿಚಾರವಾದಿಗಳೆಂದು ಹೆಸರಿಟ್ಟುಕೊಂಡ ಕೆಲವರು ದ್ವೇಷಾಸೂಯೆಗಳಿಂದ ತೋರಿದ್ದನ್ನು ಬರೆಯುತ್ತಾ, ವಿಚಾರಶೂನ್ಯರಾಗಿ ಹೇಳುತ್ತಾ ಸಮಾಜದಲ್ಲಿ ಒಡಕನ್ನುಂಟುಮಾಡುತ್ತಿದ್ದಾರೆ. ಇವರ ಅವಿವೇಕವು ಸಮಾಜವನ್ನು ಒಡೆಯುತ್ತದೆ, ಕಟ್ಟುವುದಿಲ್ಲ.

**'' ಅವಿವೇಕಃ ಪರಮಾಪದಾಂ ಪದಂ''**

ಮನುಸ್ಮೃತಿಯನ್ನು ಆಗಾಗ ತರಾಟೆಗೆ ತೆಗೆದುಕೊಂಡು ನಿಂದಿಸಿದರೆ ಇವರಿಗೆ ಸಂತೋಷವಾಗುತ್ತದೆ. **'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ'** ಎಂಬ ವಾಕ್ಯವನ್ನು ಎಲ್ಲಿಯೋ ಕೇಳಿ ತಿಳಿದುಕೊಂಡು ಮನುಸ್ಮೃತಿಯ ಮೇಲೆ ಧಾಳಿ ಮಾಡುತ್ತಾರೆ. ವಿಪ್ರರಿಗೆ ಮನುವಾದಿಗಳೆಂಬ ಹೆಸರನ್ನು ಕೊಟ್ಟು ಗೌರವಿಸುತ್ತಾರೆ.

ಜಗತ್ತಿನಲ್ಲಿರುವ ಮನುಷ್ಯರೆಲ್ಲರೂ ಮನುವಿನ ವಂಶದವರೆಂದು ಶಾಸ್ತ್ರವು ಹೇಳುತ್ತದೆ. ತನ್ನ ಸಂತತಿಯವರ ಹಿತಕ್ಕಾಗಿ , ಶ್ರೇಯಸ್ಸಿಗಾಗಿ ಮನು ಮಹಾತ್ಮನು ಬರೆದ ಧರ್ಮಶಾಸ್ತ್ರವೇ ಮನುಸ್ಮೃತಿ. ಅದು ಮಾನವ ಧರ್ಮಶಾಸ್ತ್ರ.

ಮಹಿಳೆಯರನ್ನು ಮನುಸ್ಮೃತಿ ತುಚ್ಛವಾಗಿ ಕಂಡಿದೆ - ಎಂಬ ಆಪಾದನೆ ಬುಡವಿಲ್ಲದ್ದು, ಹುರುಳಿಲ್ಲದ್ದು. ಇದನ್ನು ಸ್ಫುಟಗೊಳಿಸುವುದಕ್ಕಾಗಿ ನಾನು ಕೆಲವು ಲೇಖನಗಳನ್ನು ಬರೆಯಲಾರಂಭಿಸಿದೆ. ಅವು '' ಸ್ವರ್ಣವಲ್ಲೀಪ್ರಭಾ '' ಮಾಸಪತ್ರಿಕೆಯಲ್ಲಿ ಕ್ರಮವಾಗಿ ಪ್ರಕಟವಾದವು. ಮೂರು ನಾಲ್ಕು ಲೇಖನಗಳು ಸಾಕಾಗಬಹುದೆಂದು ನನ್ನ ಆಲೋಚನೆಯಾಗಿತ್ತು. ಬರೆಯುತ್ತ ಹೋದಂತೆ ಪೀಠಿಕೆಯು ವಿಸ್ತೃತವಾಯಿತು. ಹೊಸದಾಗಿ ನೀತಿ ಸಂಹಿತೆ, ಅಧ್ಯಾತ್ಮ ವಿಚಾರಗಳು ಸೇರಿದವು. ಒಟ್ಟು ಮೂರು ವರ್ಷಗಳಲ್ಲಿ ಮೂವತ್ತಾರು ಲೇಖನಗಳಾದವು. ಹೀಗಾದುದು ಸಂಪೂರ್ಣ ಮನುಸ್ಮೃತಿಯ ಒಂದು ಸಂಕ್ಷಿಪ್ತ ಸಮೀಕ್ಷೆಯೇ ಆಯಿತು. ಇಷ್ಟು ಲೇಖನಗಳಿಗೆ ಅವಕಾಶವನ್ನಿತ್ತು ಉಪಕರಿಸಿದ '' ಸ್ವರ್ಣವಲ್ಲೀ ಪ್ರಭಾ '' ಪತ್ರಿಕೆಯ ಸಂಪಾದಕ ಮಹಾಶಯರಿಗೆ ನಾನು ಕೃತಜ್ಞನಾಗಿದ್ದೇನೆ.

ಹೀಗೆ ಮೂವತ್ತಾರು ಸಂಚಿಕೆಗಳಲ್ಲಿ ಹರಡಿಹೋದ ಈ ಲೇಖನಗಳನ್ನು ಒಂದುಗೂಡಿಸಿ ಒಂದು ಪುಸ್ತಕವನ್ನಾಗಿಸಿ ಪ್ರಕಟಿಸಿದರೆ ವಾಚಕರಿಗೆ ಪ್ರಯೋಜನವಾದೀತೆಂದು ತೋರಿತು. ಶ್ರೀ ಸ್ವರ್ಣವಲ್ಲೀ ಮಠಾಧೀಶರಾದ ಪರಮಪೂಜ್ಯ ಶ್ರೀ ಶ್ರೀ ಶ್ರೀ ಗಂಗಾಧರೇಂದ್ರ ಸರಸ್ವತೀ ಸ್ವಾಮಿಗಳವರಲ್ಲಿ ಈ ವಿಷಯವನ್ನು ವಿಜ್ಞಾಪಿಸಿಕೊಂಡಾಗ ಅವರು ಒಡನೆಯೇ ಸಂಮತಿಸಿ ಅನುಗ್ರಹಿಸಿದರು. ಅದರ ಫಲವಾಗಿ ಈ ಗ್ರಂಥವು ಪ್ರಕಟವಾಗಿದೆ.

ಬೇರೆ ಬೇರೆ ಸಮಯದಲ್ಲಿ ಲೇಖನಗಳನ್ನು ಬರೆದದ್ದರಿಂದ ಅಲ್ಲಲ್ಲಿ ಪುನರುಕ್ತಿಯೂ ವಿಷಯಸಾಂಕರ್ಯವೂ ಆಗಿರಬಹುದು. ಸಹೃದಯರಾದ ವಾಚಕರು ಮನ್ನಿಸಬೇಕು.

ಈ ಹೊತ್ತಿಗೆಯನ್ನು ಪ್ರಕಟಿಸಿದ ಶ್ರೀ ಭಗವತ್ಪಾದ ಪ್ರಕಾಶನದ ಅಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳವರಿಗೆ ನನ್ನ ಸಾಷ್ಟಾಂಗ ಪ್ರಣಾಮಗಳನ್ನರ್ಪಿಸುತ್ತೇನೆ. ಈ ಪುಸ್ತಕದ ಕರಡನ್ನು ತಿದ್ದುವಾಗ ಸಹಕರಿಸಿದ ಶ್ರೀಯುತ ವಿದ್ವಾನ್ ರಾಮಚಂದ್ರ ಶರ್ಮಾ, ತ್ಯಾಗಲಿಯವರ ಉಪಕಾರವು ಸ್ಮರಣೀಯವಾದದ್ದು. ಶ್ರೀ ಭಗವತ್ಪಾದ ಪ್ರಕಾಶನದ ಕಾರ್ಯದರ್ಶಿಗಳೇ ಮೊದಲಾದ ಕಾರ್ಯಕರ್ತರಿಗೆ ನನ್ನ ವಂದನೆಗಳು ಸಲ್ಲುತ್ತವೆ. ಓದುಗರಿಗೆ ಮನುಸ್ಮೃತಿಯ ವಿಷಯದಲ್ಲಿರಬಹುದಾದ ತಪ್ಪು ಕಲ್ಪನೆ ಹೋಗಿ ಗೌರವ ಭಾವನೆ ಉದಿಸಿದರೆ ನನ್ನ ಪ್ರಯತ್ನವು ಸಾರ್ಥಕವಾಗುತ್ತದೆ.

**ಬೆಂಗಳೂರು**

**15-06-2004** **ಎನ್. ರಂಗನಾಥ ಶರ್ಮಾ**

# ವಿಷಯಾನುಕ್ರಮಣಿಕೆ

# ಶ್ರೀ ಭಗವತ್ಪಾದ ಪ್ರಕಾಶನ (ರಿ.)

## ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನ

ಅಂಚೆ : ಮಠದೇವಳ, ಶಿರಸಿ (ಉ. ಕ.) - ೫೮೧ ೩೩೬

### ಮಾರಾಟಕ್ಕೆ ಲಭ್ಯವಿರುವ ಪುಸ್ತಕಗಳ ಮತ್ತು ಕ್ಯಾಸೆಟ್‌ಗಳ ವಿವರ

| | | |
|---|---|---|
| ೧. | ಬೋಧಾಯನೋಕ್ತ ಸಂಧ್ಯಾವಿಧಿಃ | ರೂ. ೨೦-೦೦ |
| ೨. | ಸ್ವರ್ಣವಲ್ಲೀ ಮಹಾಸಂಸ್ಥಾನ (ಚರಿತ್ರೆ) | ರೂ. ೧೦೦-೦೦ |
| ೩. | ವಿವಾಹ ಸಂಸ್ಕಾರ | ರೂ. ೨೫-೦೦ |
| ೪. | ಗಾಯತ್ರೀ ಜಪಯಜ್ಞ | ರೂ. ೨೫-೦೦ |
| ೫. | ಸ್ವರ್ಣವಲ್ಲೀ ಸುಧಾ ಕುಸುಮ - ೧ | ರೂ. ೧೦-೦೦ |
| ೬. | ಸ್ವರ್ಣವಲ್ಲೀ ಸುಧಾ ಕುಸುಮ - ೨ | ರೂ. ೧೦-೦೦ |
| ೭. | ಭಗವದ್ಗೀತ ಅಧ್ಯಾತ್ಮ ವಿದ್ಯ ಸಂಪುಟ - ೧ | ರೂ. ೧೦೦-೦೦ |
| ೮. | ಕೃಷ್ಣ ಯಜುರ್ವೇದ ಸ್ವಾಹಾಕಾರವಿಧಿಃ ಭಾಗ - ೧ | ರೂ. ೧೮೦-೦೦ |
| ೯. | ಶ್ರೀ ಸರ್ವಜ್ಞೇಂದ್ರ ಸರಸ್ವತೀ | ರೂ. ೨೫-೦೦ |
| ೧೦. | ಗಾಯತ್ರೀ ಮಹತ್ವ (ಕ್ಯಾಸೆಟ್) | ರೂ. ೩೦-೦೦ |
| ೧೧. | ಬೋಧಾಯನೋಕ್ತಸಂಧ್ಯಾವಂದನೆ (ಕ್ಯಾಸೆಟ್) | ರೂ. ೩೦-೦೦ |
| ೧೨. | ಶ್ರೀ ಲಕ್ಷ್ಮೀನೃಸಿಂಹ ಕಲ್ಪೋಕ್ತ ಪೂಜಾ ವಿಧಿಃ | ರೂ. ೫೦-೦೦ |
| ೧೩. | ಶಂಕರಾಚಾರ್ಯರ ಸ್ತೋತ್ರರತ್ನಮಾಲೆ | ರೂ. ೪೦-೦೦ |
| ೧೪. | ಕೃಷ್ಣ ಯಜುರ್ವೇದ ಸ್ವಾಹಾಕಾರ ವಿಧಿಃ ಭಾಗ - ೨ | ರೂ. ೪೫೦-೦೦ |
| ೧೫. | ವಿಭೂತಿ ಪುರುಷ ವಿದ್ಯಾರಣ್ಯರು | ರೂ. ೬೫-೦೦ |
| ೧೬. | ಶ್ರೀ ಬೃಹತ್ ಗಂಗಾಧರೇಂದ್ರ ಸರಸ್ವತೀ | ರೂ. ೭೦-೦೦ |
| ೧೭. | ಶ್ರೀ ಸರ್ವಜ್ಞೇಂದ್ರರು | ರೂ. ೪೫-೦೦ |
| ೧೮. | ಶ್ರೀ ಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿಗಳ ಸಂದೇಶ ನುಡಿ | ರೂ. ೭೫-೦೦ |
| ೧೯. | ಶ್ರೀ ಸ್ವರ್ಣವಲ್ಲೀ ಗುರುವಂಶ ಚರಿತಂ | ರೂ. ೧೦೦-೦೦ |
| ೨೦. | ಶ್ರೀ ಶಂಕರಾಚಾರ್ಯರ ಅದ್ವೈತದರ್ಶನ | ರೂ. ೧೨೦-೦೦ |
| ೨೧. | ನಮ್ಮ ಪ್ರೀತಿಯ ಸ್ವಾಮೀಜಿ | ರೂ. ೧೦೦-೦೦ |
| ೨೨. | ಪೀಠಾರೋಹಣ ದಶಮಾನೋತ್ಸವ ಸ್ಮರಣ ಸಂಪುಟ | ರೂ. ೯೦-೦೦ |
| ೨೩. | ಕನ್ನಡದಲ್ಲಿ ಶತಕ ಸಾಹಿತ್ಯ | ರೂ. ೨೪೦-೦೦ |
| ೨೪. | ಧರ್ಮ ಸಂದೇಶ | ರೂ. ೬೦-೦೦ |
| ೨೫. | ತಂತ್ರ ಸಮುಚ್ಚಯ | ರೂ. ೬೦೦-೦೦ |

# ೧ - ಪೀಠಿಕೆ

'ಧರ್ಮ' ಎಂಬ ಸಂಸ್ಕೃತ ಶಬ್ದಕ್ಕೆ ಸಮಾನವಾದ ಅರ್ಥವನ್ನು ಕೊಡುವ ಪರ್ಯಾಯ ಪದವು ಇನ್ನು ಯಾವ ಭಾಷೆಯಲ್ಲಿಯೂ ಇಲ್ಲವೆಂದು ಭಾಷಾತಜ್ಞರು ಹೇಳಿದ್ದಾರೆ. ಬಳಸುವ ವಸ್ತುಗಳನ್ನು ಕಂಡೂ ಅನುಭವಿಸುವ ಗುಣಕ್ರಿಯಾ ಭಾವನೆಗಳನ್ನು ಹೇಳುವ ಪದಗಳು ಆಯಾ ಜನರಾಡುವ ಭಾಷೆಗಳಲ್ಲಿ ಇದ್ದೇ ಇರುತ್ತವೆ. ನೀರು, ಗಾಳಿ, ಮನೆ, ಮಳೆ, ಸಿಟ್ಟು, ಸುಳ್ಳು, ಬಾ, ಹೋಗು ಮೊದಲಾದ ಅರ್ಥಗಳಿರುವ ಪದಗಳು ಯಾವ ಭಾಷೆಯಲ್ಲಿಲ್ಲ? ನಾವು ಯಾವುದನ್ನು ಕಾಣುತ್ತಿಲ್ಲವೋ ಅದರ ವಾಚಕ ಶಬ್ದವು ನಮ್ಮ ಭಾಷೆಯಲ್ಲಿರಲು ಶಕ್ಯವಿಲ್ಲ. ಉದಾಹರಣೆಗೆ- ಕಾಂಗರೂ, ಜೀಬ್ರಾ ಎಂಬ ಪ್ರಾಣಿಗಳು. ಇವು ಭಾರತದೇಶದಲ್ಲಿ ಇಲ್ಲವಾದ್ದರಿಂದ ನಮ್ಮ ಭಾಷೆಗಳಲ್ಲಿ ವಾಚಕ ಶಬ್ದಗಳೂ ಇಲ್ಲ. ಧರ್ಮ ಎಂಬ ಅರ್ಥದ ಶಬ್ದವಿಲ್ಲವೆಂದರೆ ಆ ಭಾಷೆಗಳನ್ನಾಡುವ ಜನರಿಗೆ ಅದರ ಪರಿಕಲ್ಪನೆಯೇ ಇಲ್ಲವೆಂದು ಸ್ವತಃ ಸಿದ್ಧವಾಗುತ್ತದೆ. ವಿದೇಶಗಳ ಪರಿಸ್ಥಿತಿ ಹಾಗಾಯಿತು. ಆದರೆ ಭಾರತ ದೇಶದಲ್ಲಿರುವ ದೇಶೀಯ ಭಾಷೆಗಳಲ್ಲಿಯೂ 'ಧರ್ಮ' ಶಬ್ದಕ್ಕೆ ಪರ್ಯಾಯ ಶಬ್ದವಿಲ್ಲವೆನ್ನುವುದು ಚೋದ್ಯವಾಗಿದೆ. ಎಲ್ಲರೂ ಧರ್ಮವೆಂಬ ಸಂಸ್ಕೃತ ಶಬ್ದವನ್ನೇ ಬಳಸಬೇಕಾಗಿದೆ. ಇದರ ತಾತ್ಪರ್ಯವೇನಾಗುತ್ತದೆ ಎಂದರೆ - ಧರ್ಮದ ಸ್ವರೂಪವನ್ನು ಮಾನವನಿಗೆ ತಿಳಿಸಿಕೊಟ್ಟದ್ದು ಸಂಸ್ಕೃತ ಸಾಹಿತ್ಯ, ಅದರಲ್ಲಿಯೂ ಅತಿ ಪ್ರಾಚೀನವಾದ ವೇದ ಎಂದು ಸಿದ್ಧವಾಗುತ್ತದೆ. **'ಸತ್ಯಂ ವದ,**

**ಧರ್ಮಂ ಚರ'** ಎಂಬ ತೈತ್ತಿರೀಯ ವಾಕ್ಯವನ್ನು ಯಾರು ಕೇಳಿಲ್ಲ? ವೇದದಲ್ಲಿ ಈ ಶಬ್ದವು ವಿಪುಲವಾಗಿ ಪ್ರಯುಕ್ತವಾಗಿದೆ.

ಈ ಶಬ್ದದ ಅರ್ಥವಾದರೂ ಏನು? ಧಾರಣ ಪೋಷಣಗಳೆಂಬ ಅರ್ಥವನ್ನೀಯುವ **'ಧೃ'** ಧಾತುವಿನಿಂದ ಈ ಶಬ್ದವು ನಿಷ್ಪನ್ನವಾಗಿದೆ. **'ಯಾವುದು ಜನತೆಯನ್ನು ಧರಿಸಿ ಪೋಷಿಸುತ್ತದೆಯೋ ಅದು ಧರ್ಮ'**. ಎಲ್ಲ ನೀತಿ ಸಂಹಿತೆಗಳೂ, ಕರ್ಮಕಾಂಡ, ಜ್ಞಾನಕಾಂಡಗಳೂ ವಿಶಾಲವಾದ ಧರ್ಮದ ತೆಕ್ಕೆಯಲ್ಲಿ ಸೇರಿಕೊಂಡು ಬಿಡುತ್ತವೆ.

ಧರ್ಮಸ್ವರೂಪದ ಅರಿವಿಲ್ಲದೆಯೇ ದೇಶಾಂತರಗಳಲ್ಲಿ ಪ್ರಜೆಗಳು ಬದುಕಿ ಬಾಳಿಲ್ಲವೆ? ಧರ್ಮದ ಹೆಚ್ಚುಗಾರಿಕೆಯಾದರೂ ಏನು? ಹೌದು; ಯಾವ ತಿಳುವಳಿಕೆಯೂ ಇಲ್ಲದ ಮೂಕಜಂತುಗಳಾದ ಪಶುಪಕ್ಷಿಗಳೂ, ಕ್ರಿಮಿ ಕೀಟಗಳೂ ಮನುಷ್ಯರಂತೆಯೇ ಬದುಕಿ ಬಾಳುತ್ತಿರುವಾಗ ಮನುಷ್ಯನ ಹೆಚ್ಚುಗಾರಿಕೆಯೇನು? ಜ್ಞಾನ ವಿಶೇಷವಿರುವ ತನ್ನ ಹೆಚ್ಚುಗಾರಿಕೆಯನ್ನರಿತುಕೊಂಡೇ ಮಾನವ ಸಮಾಜವು ತನ್ನ ಸುಖದ ಉಳಿವಿಗಾಗಿ ಕೆಲವು ನೀತಿ ನಿಯಮಗಳನ್ನು ಗೊತ್ತುಮಾಡಿಕೊಂಡಿದೆ. ಸುಳ್ಳು ಹೇಳಬಾರದು. ಸತ್ಯವನ್ನೇ ನುಡಿಯಬೇಕು, ಕದಿಯಬಾರದು, ಕೊಲ್ಲಬಾರದು ಇತ್ಯಾದಿ. ಈ ನೀತಿ ಸಂಹಿತೆಯು ಧರ್ಮದ ಪರಿಧಿಯಲ್ಲಿ ಸೇರಿ ಧರ್ಮದ ಒಂದಂಶವೇ ಆಗಿದೆ. ಇದೂ ಇಲ್ಲದೇ ಹೋಗಿದ್ದರೆ ಮನುಷ್ಯನು ಕಾಡು ಪ್ರಾಣಿಗೆ ಸಮವಾಗಿ ಬಿಡುತ್ತಿದ್ದ. ಜರತೂಷ್ಟ್ರ, ಕ್ರೈಸ್ತ ಮೊದಲಾದ ಸಂತರು ಇನ್ನೂ ಅಧಿಕವಾದ ನೀತಿ ವಚನಗಳನ್ನು ಬೋಧಿಸಿದರು. ಇದರಿಂದ ಜನಜೀವನದಲ್ಲಿ ಬಹುಮಟ್ಟಿಗೆ ಸುಧಾರಣೆಯೂ ಆಯಿತು. ಇದೆಲ್ಲವೂ **ಧರ್ಮದ ಒಂದಂಶ. ಧರ್ಮದ ಸಮಗ್ರತೆಯನ್ನು ತಿಳಿಸಿಕೊಟ್ಟಿದ್ದು ವೇದ ಒಂದೇ.** ಋಷಿಗಳು **'ವೇದೋಽಖಿಲೋ ಧರ್ಮಮೂಲಂ'** ಎಂದರು. ಈ ಧರ್ಮಮೂಲವನ್ನರಿತು ವಿಸ್ತರಿಸಿ ಮಾನವ ಹಿತಕ್ಕಾಗಿ ಧರ್ಮಶಾಸ್ತ್ರವನ್ನು ರಚಿಸಿದರು. ಹಿಂದಿನ ಕಾಲದಲ್ಲಿ ವಿದ್ಯೆಯು ಹದಿನಾಲ್ಕು ಬಗೆಯೆಂದು ವಿಂಗಡಿಸಲಾಗಿತ್ತು ಅದರಲ್ಲಿ ಧರ್ಮಶಾಸ್ತ್ರವೂ ಒಂದು ವಿದ್ಯೆ ವೇದ ಬೋಧಿತವಾದುದರ ಸ್ಮೃತಿಯಿಂದ ವಿಸ್ತರಿಸಿ ರಚಿತವಾದ ಕಾರಣ, ಧರ್ಮಶಾಸ್ತ್ರಕ್ಕೆ ಸ್ಮೃತಿಯೆಂಬ ಹೆಸರು ಪ್ರಸಿದ್ಧವಾಗಿದೆ. ಹೀಗೆ ರಚಿತವಾದ ಸ್ಮೃತಿಗ್ರಂಥಗಳಲ್ಲಿ ಹದಿನೆಂಟು ಸ್ಮೃತಿಗಳು ಪ್ರಸಿದ್ಧವಾದವು. ಇವುಗಳಲ್ಲದೆ ಧರ್ಮಶಾಸ್ತ್ರವು ಸೂತ್ರರೂಪವಾಗಿಯೂ ಉಂಟು. ಬೋಧಾಯನ ಧರ್ಮಸೂತ್ರ, ಆಪಸ್ತಂಬ ಧರ್ಮಸೂತ್ರ ಇತ್ಯಾದಿ ನಾಮಗಳೂ ಆ ಗ್ರಂಥಗಳೂ ಪ್ರಸಿದ್ಧವಾಗಿವೆ.

ಕಾಲಾನುಸಾರವಾಗಿ ಜನರ ಆಚರಣ ಶಕ್ತಿ, ಅಭಿರುಚಿ, ಸೌಕರ್ಯ ಮೊದಲಾದವು ಏರುಪೇರಾಗುತ್ತವೆ. ಕೃತಯುಗದಲ್ಲಿ ತಪಸ್ಸು, ತ್ರೇತಾಯುಗದಲ್ಲಿ ಯಜ್ಞ, ದ್ವಾಪರದಲ್ಲಿ ಅರ್ಚನೆ, ಕಲಿಯುಗದಲ್ಲಿ ನಾಮಜಪ - ಇವು ಸಮಾನ ಫಲವುಳ್ಳವು ಎಂದು ಉಕ್ತಿಯಿದೆ. ಅಲ್ಲದೆ-

**''ಕೃತೇ ತು ಮಾನವೋ ಧರ್ಮಸ್ತ್ರೇತಾಯಾಂ ಗೌತಮಃ ಸ್ಮೃತಃ ।**
**ದ್ವಾಪರೇ ಶಂಖಲಿಖಿತೌ ಕಲೌ ಪಾರಾಶರೀ ಸ್ಮೃತಿಃ ॥''**

ಎಂಬ ವಚನವೂ ಆಯಾ ಕಾಲಾನುಸಾರವಾಗಿ ಧರ್ಮಭೇದವಿದೆಯೆಂದು ಸೂಚಿಸುತ್ತದೆ.

ಭರತಖಂಡವು ಕರ್ಮಭೂಮಿ. ಧರ್ಮ ಶಾಸ್ತ್ರೋಕ್ತವಾದ ವಿಧಿಯನ್ನು ಆಚರಿಸಲು ಪ್ರಶಸ್ತವಾದ ದೇಶ ಇದೊಂದೇ. ಉಳಿದ ರಾಷ್ಟ್ರಗಳು ಭೋಗಭೂಮಿಗಳು. ಅಲ್ಲಿಯ ಜನರಿಗೆ ಅಹಿಂಸೆ, ಅಸ್ತೇಯ ಮುಂತಾದ ಸಾಮಾನ್ಯ ಧರ್ಮಗಳೇ ಹೊರತು ವರ್ಣಾಶ್ರಮೋಚಿತವಾದ ಕರ್ಮವಿಲ್ಲವೆಂದು ಧರ್ಮಶಾಸ್ತ್ರಗಳು ಹೇಳುತ್ತವೆ. ಭರತಖಂಡವು ಅತ್ಯಂತ ವಿಶಾಲವಾದ ದೇಶವಾದ್ದರಿಂದ ಧರ್ಮಾಚರಣೆಯಲ್ಲಿ ಸಹ ಅನೇಕ ಭೇದಗಳುಂಟಾದವು. ದೇಶಧರ್ಮ, ಕುಲಧರ್ಮ, ಜಾತಿಧರ್ಮ, ಆಶ್ರಮಧರ್ಮ, ಗುಣಧರ್ಮ, ಕಾಲಧರ್ಮ, ಆಪದ್ಧರ್ಮ, ನೈಮಿತ್ತಿಕ ಧರ್ಮ - ಇತ್ಯಾದಿ ಭೇದಗಳಾದವು.

ಧರ್ಮಶಾಸ್ತ್ರಗಳಲ್ಲಿ ಸೂತ್ರ ಗ್ರಂಥಗಳೇ ಪ್ರಾಚೀನವಾದವುಗಳೆಂದು ಇತಿಹಾಸಕಾರರ ಅಭಿಪ್ರಾಯವಿದೆ. ಅವರ ಪ್ರಕಾರ ಬೋಧಾಯನ ಧರ್ಮಸೂತ್ರವು ಅತ್ಯಂತ ಪ್ರಾಚೀನವಾದದ್ದು. ಅದರ ನಿರ್ಮಾಣಕಾಲ ಕ್ರಿ. ಪೂ. ೫೦೦. ಗೌತಮ ಧರ್ಮಸೂತ್ರವು ಅದಕ್ಕಿಂತಲೂ ಹಿಂದೆ ರಚಿತವಾದದ್ದೆಂದು ಕೆಲವರ ಅಭಿಪ್ರಾಯವಿದೆ. ಆಪಸ್ತಂಬ ಧರ್ಮಸೂತ್ರವಂತೂ ಕ್ರಿ. ಶ. ೩೦೦ ರದ್ದು ಎನ್ನುತ್ತಾರೆ. ಅನಂತರ ಹಿರಣ್ಯಕೇಶೀ, ವಸಿಷ್ಠ, ವಿಷ್ಣು, ಹಾರೀತ, ಕಶ್ಯಪ, ಗಾರ್ಗ್ಯ, ದೇವಲ, ಬೃಹಸ್ಪತಿ - ಮೊದಲಾದವರು ಧರ್ಮ ಸೂತ್ರಗಳನ್ನು ರಚಿಸಿದರೆಂದು ತಿಳಿದುಬರುತ್ತದೆ.

ಮನುಸ್ಮೃತಿಯು ಕ್ರಿ. ಪೂ. ೩೦೦ ದ್ದೆಂದು ಈ ಜನರ ಅಭಿಪ್ರಾಯವಿದೆ. ಯಾಜ್ಞವಲ್ಕ್ಯ ಸ್ಮೃತಿಯು ಕ್ರಿ. ಶ. ೨೦೦ ರಲ್ಲಿ ಪರಾಶರಸ್ಮೃತಿ ಕ್ರಿ. ಶ. ೧೦೦ ರದ್ದು - ಈ ರೀತಿಯಲ್ಲಿ ಇವರ ಹೇಳಿಕೆಗಳುಂಟು. ಇನ್ನು ನಾರದ, ದಕ್ಷ, ಲೋಗಾಕ್ಷಿ, ದೇವಲ, ಗೋಭಿಲ, ವಸಿಷ್ಠ ಮೊದಲಾದವರ ಹೆಸರುಗಳಲ್ಲಿಯೂ ಧರ್ಮಶಾಸ್ತ್ರಗಳು ಪ್ರವೃತ್ತವಾಗಿವೆ. ಅವೆಲ್ಲ ಈಚಿನವೆಂದು ಇವರ ಆಶಯ. ಋಷಿಗಳ ಹೆಸರಿನಲ್ಲಿ ಇತರರು

ಗ್ರಂಥಗಳನ್ನು ರಚಿಸಿ ಸೇರಿಸಿಬಿಟ್ಟಿದ್ದಾರೆಂಬ ಅಪವಾದವನ್ನು ತಳ್ಳಿಹಾಕಲಾಗುವುದಿಲ್ಲ.

ಆದರೂ ಮನುಸ್ಮೃತಿಯು ಆಧುನಿಕವೆಂಬುದನ್ನು ಒಪ್ಪಲಾಗುವುದಿಲ್ಲ. ಧರ್ಮಶಾಸ್ತ್ರದ ಇತಿಹಾಸದಲ್ಲಿಯೇ ಮನುಸ್ಮೃತಿಯು ಅತ್ಯಂತ ಪ್ರಾಚೀನವಾದದ್ದು. **''ಯದ್ವೈಕಿಂಚ ಮನುರವದತ್ ತದ್ಭೇಷಜಮ್''** ಎಂಬ ತೈತ್ತಿರೀಯ ಸಂಹಿತಾವಾಕ್ಯವು ಮನುವು ಸ್ಮೃತಿಕಾರನಾಗಿದ್ದನೆಂಬುದನ್ನು ಸೂಚಿಸುತ್ತದೆ. ಹಾಗೆ ನೋಡಿದರೆ ಸೃಷ್ಟಿಯ ಆದಿಯಲ್ಲಿಯೇ ಮನುವಿದ್ದನು. ಮನುಷ್ಯ, ಮನುಜ, ಮಾನವ ಶಬ್ದಗಳು ಈ ಮನುಷ್ಯ ಜಾತಿಯು ಮನುವಿನಿಂದ ಹುಟ್ಟಿತೆಂಬುದನ್ನು ಹೇಳುತ್ತದೆ. ಇಂಗ್ಲೀಷಿನ MAN ಪದವು ಮಾನವ ಶಬ್ದದಿಂದ ಬಂದದ್ದು. ಸ್ವಾಯಂಭುವ ಮೊದಲಾದ ಹದಿನಾಲ್ಕು ಮಂದಿ ಮನುಗಳು ಬ್ರಹ್ಮನ ಮಾನಸ ಪುತ್ರರೆಂದು ಪುರಾಣಗಳಲ್ಲಿ ವರ್ಣನೆ ಇದೆ. ಚತುರ್ಯುಗಗಳು ಎಷ್ಟೋ ಸಲ ಸುತ್ತಿದ ಮೇಲೆ ಒಬ್ಬೊಬ್ಬ ಮನುವಿನ ಆಧಿಪತ್ಯವು ಮುಗಿಯುತ್ತದೆ. ಈಗ ನಡೆಯುತ್ತಿರುವುದು ಏಳನೆಯವನಾದ ವೈವಸ್ವತ ಮನುವಿನ ಆಧಿಪತ್ಯವಾದ್ದರಿಂದ ಈ ಕಾಲಕ್ಕೆ ವೈವಸ್ವತ ಮನ್ವಂತರವೆಂದು ಹೆಸರು.

ಇದು ಹೇಗಾದರೂ ಇರಲಿ, ಸ್ಮೃತಿಗಳಲ್ಲಿ ಮನುಸ್ಮೃತಿಯು ವಿಖ್ಯಾತವಾಗಿದ್ದು ಸಕಲ ಪ್ರಾಮಾಣಿಕರ ಗೌರವವನ್ನು ಪಡೆದಿದೆ. ಭರತಖಂಡದಲ್ಲಿ ವರ್ಣಾಶ್ರಮ ಧರ್ಮಗಳನ್ನು ಉಳಿಸುವುದರಲ್ಲಿ ಇದು ಮುಖ್ಯವಾದ ಪಾತ್ರವನ್ನು ವಹಿಸಿದೆ. **''ಮನುಸ್ಮೃತೇರ್ವಿರುದ್ಧಾ ಯಾ ಸಾ ಸ್ಮೃತಿರ್ನೈವ ಶಸ್ಯತೇ''** ಮನುಸ್ಮೃತಿಗೆ ವಿರುದ್ಧವಾಗಿರುವ ಸ್ಮೃತಿಯು ಪ್ರಶಸ್ತವಾದುದ್ದಲ್ಲ ಎಂದು ಶಾಸ್ತ್ರಜ್ಞರ ಹೇಳಿಕೆ ಇದೆ. ಒಟ್ಟಿನಲ್ಲಿ ಎಲ್ಲ ಸ್ಮೃತಿ ಗ್ರಂಥಗಳೂ ಭಾರತೀಯ ಸಂಸ್ಕೃತಿಯನ್ನು ರೂಪಿಸಿ, ಈ ನೆಲದಲ್ಲಿ ಗಟ್ಟಿಯಾಗಿ ನಿಲ್ಲುವಂತೆ ಮಾಡಿದ ವಿದ್ಯೆಗಳಲ್ಲಿ ಅಗ್ರಸ್ಥಾನವನ್ನು ಪಡೆಯುತ್ತವೆ.

ಮನು, ಯಾಜ್ಞವಲ್ಕ್ಯ ಮುಂತಾದವರ ಪುರಾತನಗಳಾದ ಸ್ಮೃತಿಗಳು ಅಖಿಲ ಭಾರತದಲ್ಲಿ ಮನ್ನಣೆಯನ್ನು ಗಳಿಸಿಕೊಂಡವು. ಇವುಗಳ ಪ್ರಮೇಯಗಳನ್ನು ಜನತೆಗೆ ಸ್ಪಷ್ಟವಾಗಿ ತಿಳಿಸಿಕೊಡುವುದಕ್ಕಾಗಿ ವಿದ್ವಾಂಸರು ಪ್ರೌಢವಾದ ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ಈ ವ್ಯಾಖ್ಯಾನಗಳೂ ವಿಪುಲವಾಗಿವೆ. ಇವರೆಲ್ಲರೂ ಪ್ರತಿಪಾದಿಸಿದ ಧಾರ್ಮಿಕ ವಿಚಾರಗಳನ್ನು ಅಭ್ಯಾಸ ಮಾಡಿ ಧಾರ್ಮಿಕ ಕಾರ್ಯಗಳಲ್ಲಿ ಆಚರಿಸಬೇಕಾದ ವಿಧಾನಗಳನ್ನು ಕ್ರಮವಾಗಿ ನಿರ್ಣಯಿಸಿಕೊಟ್ಟಿರುವ ನಿರ್ಣಯಸಿಂಧು, ಧರ್ಮಸಿಂಧು, ಹೇಮಾದ್ರಿಯ ಚತುರ್ವರ್ಗಚಿಂತಾಮಣಿ ಮೊದಲಾದ ನಿಬಂಧನೆಗಳಿಂದಾದ ಉಪಕಾರಗಳೂ ಅಸಾಧಾರಣವಾದವು.

ಹೀಗೆ ಅಪಾರಸಂಖ್ಯೆಯಲ್ಲಿ ಬೆಳೆದ ಧಾರ್ಮಿಕ ಗ್ರಂಥಗಳು ಅಖಿಲ

ಭಾರತೀಯರ ಜೀವನದಲ್ಲಿ ಹಾಸುಹೊಕ್ಕಾಗಿ ಪ್ರವೇಶಿಸಿ, ಬದುಕಿನ ರೀತಿ , ನೀತಿ, ಚಿಂತನೆಗಳ ಮೇಲೆ ಅಗಾಧವಾದ ಪ್ರಭಾವವನ್ನು ಬೀರಿದವು. ಈ ಗ್ರಂಥಗಳೆಲ್ಲವೂ ವೈದಿಕ ಧರ್ಮಗ್ರಂಥಗಳೆಂಬುದನ್ನು ಮರೆಯಬಾರದು. ಈ ರಾಷ್ಟ್ರದಲ್ಲಿ ಜೈನ, ಬೌದ್ಧಾದಿ ಕೆಲವು ಅವೈದಿಕ ಮತಗಳು ಹುಟ್ಟಿದರೂ ಈ ಧಾರ್ಮಿಕ ಗ್ರಂಥಗಳ ಪ್ರಭಾವವು ಕೆಲವು ಅಂಶಗಳಲ್ಲಿ ಉಳಿದುಕೊಂಡೇ ಇದೆ. ಈ ಪ್ರಕಾರವಾಗಿ ಧಾರ್ಮಿಕ ಗ್ರಂಥ ಪರಂಪರೆ ಜಗತ್ತಿನ ಇನ್ನಾವ ರಾಷ್ಟ್ರದಲ್ಲಿಯೂ ಉದಿಸಲೇ ಇಲ್ಲ. ಧರ್ಮಸ್ವರೂಪವನ್ನೂ, ಅದರ ಆವಶ್ಯಕತೆಯನ್ನೂ ಅವು ಮನಗಾಣದೇ ಹೋದದ್ದೇ ಇದಕ್ಕೆ ಕಾರಣವಾಗಿರಬೇಕು. ಇದೊಂದು ಅಧ್ಯಯನಯೋಗ್ಯವಾದ ವಿಷಯ.

ಇರಲಿ ; ಪ್ರಕೃತವಾದ ಮನುಸ್ಮೃತಿಯ ವ್ಯಾಖ್ಯಾನಗಳಲ್ಲಿ ಮೇಧಾತಿಥಿಯ ಭಾಷ್ಯವೇ ಪ್ರಾಚೀನವಾದದ್ದು. ಇದರ ಕಾಲ ಕ್ರಿ. ಶ. ಒಂಬತ್ತನೆಯ ಶತಮಾನ. ಮೇಧಾತಿಥಿಯ ಈ ವ್ಯಾಖ್ಯಾನ ಗ್ರಂಥವು ವೈದುಷ್ಯ ಪೂರ್ಣವೂ, ವಿಸ್ತೃತವೂ ಆದದ್ದು. ಅನಂತರ ಬಂದ ವ್ಯಾಖ್ಯಾನಗಳಲ್ಲಿ ಕುಲ್ಲೂಕಭಟ್ಟನ ಮನ್ವರ್ಥಮುಕ್ತಾವಳಿಯು ಪ್ರಶಂಸನೀಯವಾದದ್ದು. ಇದರ ಕಾಲವು ಕ್ರಿ. ಶ. ಹದಿಮೂರನೆಯ ಶತಮಾನವಿರಬಹುದು. ಈತನು ವಾದವಿವಾದಗಳಿಗೆ ತೊಡಗದೆ ತನ್ನ ನಿರ್ಣಯವನ್ನು ಸರಳ ಶೈಲಿಯಲ್ಲಿ ಪ್ರಾಮಾಣಿಕವಾಗಿ ನಿರೂಪಿಸುತ್ತಾನೆ. ಇದಿಷ್ಟು ಹಿನ್ನೆಲೆ.

ನಮ್ಮ ದೇಶದಲ್ಲಿ ಆಂಗ್ಲಪದ್ಧತಿಯಂತೆ ವಿದ್ಯಾಭ್ಯಾಸವು ತೊಡಗಿಕೊಂಡ ಮೇಲೆ ಭಾರತೀಯರ ಧಾರ್ಮಿಕ ವಿಚಾರದಲ್ಲಿ ಸ್ಪಂದನ ಉಂಟಾಯಿತು. ವಿಚಾರ ಪದ್ಧತಿಯು ಸ್ವಲ್ಪ ಅಲ್ಲಾಡತೊಡಗಿತು. ಗಾಳಿಯ ಹೊಡೆತಕ್ಕೆ ಮರವು ಅಲ್ಲಾಡಿದಾಗ, ಮರಕ್ಕೆ ತಗಲಿಕೊಂಡ ಧೂಳಿಯೂ, ಕಸಕಡ್ಡಿಗಳೂ ಉದುರುವುದು ಸಹಜವಾಗಿದೆ. ಅಷ್ಟಾದದ್ದು ಒಳ್ಳೆಯದೇ. ಆದರೆ ಅನಂತರ ಬಲವಾದ ಬಿರುಗಾಳಿ ಬೀಸತೊಡಗಿದಾಗ ಈ ಧರ್ಮವೃಕ್ಷವು ಬೀಳುವುದೋ ಎಂಬಂತೆ ಹೊಯ್ದಾಡತೊಡಗಿತು. ಹೂವುಗಳೂ, ಹೀಚುಗಳೂ, ಕಾಯಿಗಳೂ, ಹಣ್ಣುಗಳೂ ಸಹ ಉರುಳಿಬೀಳತೊಡಗಿದವು.

ಸ್ವಾತಂತ್ರ್ಯವು ಬರುವಾಗ ಈ ಬಿರುಗಾಳಿ ನಿಂತೀತೆಂದು ಕೆಲವರಂತೂ ತಿಳಿದಿದ್ದರು. ಸ್ವಾತಂತ್ರ್ಯವು ಬಂದಿತು. ಇವರ ನೆನಸು ಕನಸಾಯಿತು. ಬಿರುಗಾಳಿಗೆ ಬದಲಾಗಿ ಸನಾತನ ಧರ್ಮವೃಕ್ಷಕ್ಕೆ ಕೊಡಲಿಯ ಹೊಡೆತ ಆರಂಭವಾಯಿತು. ಕೊಡಲಿಯನ್ನು ಹಿಡಿದವರಿಗೂ ಕೊಡಲಿಗೂ ಸ್ವಾತಂತ್ರ್ಯವು ಬರಲಿಲ್ಲವೆ? ಮರವೇ ಕೊಡಲಿಯ ಕಾವಾಗಿ ಕಡಿಯತೊಡಗಿದಾಗ ಈ ಬಡ ಮುದಿ ಮರವನ್ನು ಉಳಿಸತಕ್ಕವರು ಯಾರು? ದಾರಿಗೆ ಅಡ್ಡಲಾಗಿರುವ ಈ ಮರವನ್ನು ಉರುಳಿಸಿದರೆ ದಾರಿ ನೇರವಾಗಿ ಮುಂದಿನ ಪ್ರಯಾಣವು ಸುಗಮವಾಗುವುದು! ಕೊಡಲಿಯಿಂದ

ಕಡಿಯುವುದಕ್ಕಿಂತ ಕಾಡಿಗೇ ಬೆಂಕಿ ಹಚ್ಚಿದರೆ ಹೇಗೆ? ನಾನು ಒಂದು ಕಡೆ ಬರೆಯುತ್ತ - **'ಅಚ್ಚಿನಾ ಮೊಳೆಯುಂಟು ವೆಚ್ಚಕ್ಕೆ ಹೊನ್ನುಂಟು। ಹುಚ್ಚುಹುಚ್ಚಾಗಿ ಬರೆಯುತ್ತ ಲೋಕಕ್ಕೆ। ಕಿಚ್ಚು ಹಚ್ಚೆಂದ ಸರ್ವಜ್ಞ॥'** ಎಂದು ವಿಡಂಬಿಸಿದ್ದೆ. (ಸರ್ವಜ್ಞನ ಕ್ಷಮೆ ಕೋರಿ)

''ಮನುಕುಲಕ್ಕೆ ಮೂಲನಾದ ಮನುವೇ ಈ ಧರ್ಮವೃಕ್ಷವನ್ನು ನೆಟ್ಟವನು. ಇದು ದಾರಿಗೆ ಅಡ್ಡವಾದ ಮುಳ್ಳುಮರ. ಇದನ್ನು ಕಡಿಯದಿದ್ದರೆ ನಮ್ಮ ದಾರಿ ಸುಗಮವಾಗದು. ದಾರಿ ಸುಗಮವಾಗದೆ ನಮ್ಮ ಪ್ರಗತಿ ಇಲ್ಲ'' - ಎಂಬುದು ಕೊಡಲಿ ಹಿಡಿದವರ ವಾದ. ಲೋಕಪ್ರಸಿದ್ಧಿಯನ್ನು ಗಳಿಸಿಕೊಂಡಿರುವ ಒಬ್ಬ ಕಾದಂಬರಿಗಾರ್ತಿ ಬರೆಯುತ್ತಾಳೆ -''ನನ್ನ ಕಾದಂಬರಿಗಳಲ್ಲಿ ದುಷ್ಟ ಪಾತ್ರಗಳಿಗೆ 'ಮನು' ಎಂದು ಹೆಸರಿಡುತ್ತೇನೆ. ಏಕೆಂದರೆ, ಮನುಸ್ಮೃತಿಯನ್ನು ಬರೆದವನು ಮನುವಲ್ಲವೇ? '' ಎಂದು. ''ಜಾತಿ ಪದ್ಧತಿ, ಬ್ರಾಹ್ಮಣರಿಗೆ ಹೆಚ್ಚುಗಾರಿಕೆ, ಅಸ್ಪೃಶ್ಯತೆ, ಸ್ತ್ರೀಯರನ್ನು ಅಧೋಗತಿಗೆ ತಳ್ಳುವುದು. ಬ್ರಾಹ್ಮಣೇತರರಿಗೆ ವಿದ್ಯೆಯ ನಿರಾಕರಣೆ, ಬ್ರಾಹ್ಮಣರ ಪಾರುಪತ್ಯ, ಶೂದ್ರರೆಂಬವರ ಬಡತನ -ಇವೇ ಮುಂತಾದ ಅನಿಷ್ಟಗಳಿಗೆ ಮನುಸ್ಮೃತಿಯೇ ಮೂಲ. ಈ ವೈದಿಕಸಂಸ್ಕೃತಿಯನ್ನು ಗಟಾರಕ್ಕೆ ತಳ್ಳಬೇಕು.'' ಇವು ಈ ರಾಷ್ಟ್ರಭಕ್ತರ ವೀರೋದ್ಗಾರಗಳು. ಈ ಉದ್ಗಾರಗಳು ಕೆಲವರಲ್ಲಿ ಭ್ರಮೆಯಿಂದ, ಕೆಲವರಲ್ಲಿ ದ್ವೇಷದಿಂದ, ಕೆಲವರಲ್ಲಿ ಕೀರ್ತಿಕಾಮುಕತೆಯಿಂದ ಹೊರಡುತ್ತಿವೆ. ಇವರು ಮನುಸ್ಮೃತಿಯನ್ನು ಕಣ್ಣಿಂದ ಸಹ ನೋಡಿದವರಲ್ಲ.

ಯಾವುದನ್ನು ಮುಳ್ಳುಮರವೆಂದು ಹೇಳುತ್ತೀರೋ ಅದು ಶ್ರೀಗಂಧದ ಮರ ಎಂದು ಸಾರುವುದಕ್ಕಾಗಿ ಈ ಲೇಖನ ಮಾಲೆ ಪ್ರಸ್ತುತವಾಗಿದೆ. ಈ ಲೇಖನಮಾಲೆಯ ಪೀಠಿಕೆ ಇದು. ಇದೊಂದು ನಮ್ರ ಪ್ರಯತ್ನವು ಕರ್ತವ್ಯ ದೃಷ್ಟಿಯಿಂದ ಪ್ರೇರಿತವಾದದ್ದು. ಬಿರುಗಾಳಿ, ಸುಂಟರಗಾಳಿಗಳೆದ್ದಾಗ ಅಡ್ಡಲಾಗಿ ಹಿಡಿದ ಹೂವಿನ ಮಾಲೆ ಹಾರಿಹೋಗುತ್ತದೆ - ಎಂಬುದು ಈ ಲೇಖಕನಿಗೆ ತಿಳಿದಿದೆ. ಹೂಮಾಲೆಯ ಸೌರಭವನ್ನು ಆಘ್ರಾಣಿಸಿ ಕೆಲವು ಸಹೃದಯರಾದರೂ ಆನಂದಿಸಿದರೆ ಈ ಪ್ರಯತ್ನವು ಸಾರ್ಥಕ.

## ಮನುಸ್ಮೃತಿ

ಈ ಜಗತ್ತಿನಲ್ಲಿರುವ ಚರಾಚರ ವಸ್ತುಗಳೆಲ್ಲವೂ ಒಂದಾನೊಂದು ಸೂತ್ರ ನಿಯಮಕ್ಕೆ ಬದ್ಧವಾಗಿ ವ್ಯವಸ್ಥಿತ ರೀತಿಯಲ್ಲಿ ನಡೆಯುತ್ತಿವೆಯೆಂಬುದು ಸೂಕ್ಷ್ಮ ನಿರೀಕ್ಷಣೆಗೆ ಗೋಚರಿಸುತ್ತದೆ. ಸ್ಥೂಲ ದೃಷ್ಟಿಗೆ ಮಾತ್ರ ಇದು ತಿಳಿಯುವುದಿಲ್ಲ. ಮನುಷ್ಯ, ಮೃಗ, ಪಕ್ಷಿ, ಕ್ರಿಮಿ ಮುಂತಾದ ಚರಪ್ರಾಣಿಗಳೆಲ್ಲವೂ ಯಾವ ಕಟ್ಟಿಗೂ

ಒಳಪಡದೆ ಮನಬಂದಂತೆ ವರ್ತಿಸುತ್ತವೆಯೆಂದೂ, ಪ್ರಾಣವಿಲ್ಲದ ಅಚರವಸ್ತುಗಳು ಯಾವ ಅಳತೆಗೂ ಸಿಗದಂತೆ ಹರಡಿಕೊಂಡಿವೆಯೆಂದೂ ಸ್ಥೂಲ ದೃಷ್ಟಿಗೆ ತೋರಬಹುದು. ರೈಲ್ವೆ ಎಂಜಿನ್ನಿನ ಹಿಂದೆ ಎಂಟು, ಹತ್ತು ರೈಲ್ವೆ ಗಾಡಿಗಳನ್ನು ಜೋಡಿಸಿರುತ್ತಾರೆ. ಆ ಗಾಡಿಗಳಲ್ಲಿರುವ ಜನರು ಇಷ್ಟಬಂದಂತೆ ತಿಂದು ಕುಡಿದು ನರ್ತಿಸುತ್ತಿರಬಹುದು. ಕುಳಿತಿರಬಹುದು. ಮಲಗಿರಬಹುದು. ಆದರೆ ಅವರೆಲ್ಲರೂ ರೈಲ್ವೆ ಎಂಜಿನ್ನಿನ ನಿಯಂತ್ರಣಕ್ಕೆ ಒಳಪಟ್ಟಿದ್ದಾರೆ. ಅದು ಹೋದೆಡೆಗೆ ಹೋದ ವೇಗದಲ್ಲಿ ಎರಡು ಕಂಬಿಗಳ ಮೇಲೆ ಚಾಚೂ ತಪ್ಪದೆ ಸಾಗುತ್ತಿದ್ದಾರೆ. ಪ್ರಯಾಣಿಕರ ಇಚ್ಛೆಯೇನೂ ಅಲ್ಲಿ ಸಾಗದು. ಅಂತೆಯೇ ಈ ಚರಾಚರ ಪ್ರಪಂಚವು ಈಶ್ವರನ ನಿಯಂತ್ರಣಕ್ಕೆ ಒಳಪಟ್ಟು ಸಾಗುತ್ತಿದೆ. ನಮ್ಮ ಇಚ್ಛೆ ಏನೂ ಇಲ್ಲಿ ನಡೆಯುವುದಿಲ್ಲವೆಂಬುದು ಸೂಕ್ಷ್ಮದೃಷ್ಟಿಗೆ ತಿಳಿದುಬರುತ್ತದೆ. ಸೂರ್ಯಚಂದ್ರರ ಉದಯಾಸ್ತಮಾನಗಳು, ಚಂದ್ರನ ವೃದ್ಧಿಕ್ಷಯಗಳು, ಇತರ ಗ್ರಹ ನಕ್ಷತ್ರಾದಿಗಳ ಸಂಚಲನ .... ಇತ್ಯಾದಿ ಕ್ರಿಯೆಗಳು ವ್ಯವಸ್ಥಿತವಾಗಿ ಒಂದು ಕ್ಷಣವೂ ವ್ಯತ್ಯಾಸವಾಗದಂತೆ ನಡೆಯುತ್ತಿರುವುದು ಯಾರ ಆಜ್ಞೆಯಿಂದ? ಸರ್ಕಾರದವರ ವಿದ್ಯುಚ್ಛಕ್ತಿಯು ಕೈಗೊಡುವಂತೆ ಸೂರ್ಯನು ಒಂದು ದಿನವಾದರೂ ಕೈಗೊಟ್ಟಿದ್ದು ಉಂಟೇನು? ಅಡಿಕೆ ಮರವು ಮೇಲ್ಗಡೆ ತುದಿಯಲ್ಲಿ, ಏಲಕ್ಕಿ ಬೇರಿನಲ್ಲಿ, ಮಾವು ಮಧ್ಯದ ಕೊಂಬೆಗಳಲ್ಲಿ ಫಸಲನ್ನು ನೀಡುವುದಕ್ಕೆ ನಿಮಿತ್ತವೇನು? ಬಾಳೆಮರ ಒಂದು ಫಸಲನ್ನಿತ್ತೊಡನೆ ಸಾಯುವುದೇಕೆ? ತೆಂಗಿನ ಮರಕ್ಕೆ ಕೊಂಬೆಗಳೇಕಿಲ್ಲ? ಒಂದೇ ನೆಲದಲ್ಲಿ ಬೆಳೆದ ನಿಂಬೆಗಿಡದ ಹಣ್ಣಿನಲ್ಲಿ ಹುಳಿರಸ, ಕಬ್ಬಿನಲ್ಲಿ ಸಿಹಿರಸ, ಮೆಣಸಿನ ಕಾಯಿಯಲ್ಲಿ ಖಾರ, ಹಾಗಲಕಾಯಿಯಲ್ಲಿ ಕಹಿ ಇರಲು ನಿಮಿತ್ತವೇನು? ಈ ಗಿಡಬಳ್ಳಿಗಳಲ್ಲಿ ನಿಯಮಿತವಾದ ರಾಸಾಯನಿಕ ಕ್ರಿಯೆ ಯಾರ ಆದೇಶದಿಂದ ನಡೆಯುತ್ತದೆ? ಆ ಗಿಡಗಳು ಬಳಸುವ ಮಣ್ಣು, ನೀರು, ಗಾಳಿ ಇವುಗಳಿಂದ ಸಿಹಿ, ಹುಳಿ ಮುಂತಾದ ವಿಭಿನ್ನ ರಸಗಳನ್ನು ವೈಜ್ಞಾನಿಕರು ನಿರ್ಮಿಸಿಕೊಟ್ಟಾರೇನು? ಇತ್ಯಾದಿ ಪ್ರಶ್ನೆಗಳಿಗೆ ಉತ್ತರವು ಸುಲಭವಲ್ಲ. ಗಾಳಿಯು ಸರ್ವಪ್ರದೇಶಗಳನ್ನೂ ವ್ಯಾಪಿಸಿ ನಿರಂತರವೂ ಬೀಸದೇ ಇದ್ದಿದ್ದರೆ ನಮಗೆ ಹೋದಲ್ಲಿ ಉಸಿರಾಡಲು ಸಾಧ್ಯವಾಗುತ್ತಿರಲಿಲ್ಲ. ನಮ್ಮ ಒದ್ದೆ ಬಟ್ಟೆಗಳು ಒಣಗುತ್ತಿರಲಿಲ್ಲ. ಬಹಳ ಬಿಸಿಯಾದ ಕಾಫಿ, ಹಾಲು ನಮ್ಮ ಹದಕ್ಕೆ ತಣಿಯುತ್ತಿರಲಿಲ್ಲ. ಮಳೆಗಾಲ ಬಂದೊಡನೆ ಮೋಡಗಳನ್ನು ಹೊತ್ತು ತಂದು ಭೂಮಿಯ ಮೇಲೆ ಮಳೆ ಸುರಿಸಬೇಕೆಂದು ಗಾಳಿಗೆ ಯಾರು ಆಜ್ಞಾಪಿಸುತ್ತಾರೆ? ಸಮುದ್ರದ ನೀರು ಆವಿಯಾಗಿ ಆಕಾಶಕ್ಕೆ ಹೋಗಿ ಸಾಂದ್ರತೆಯನ್ನು ತಳೆದು ಮೋಡವಾಗುವಂತೆ ವ್ಯವಸ್ಥೆಯನ್ನು ಮಾಡಿದವರು ಯಾರು? -ಇತ್ಯಾದಿ ಶಂಕೆಗಳನ್ನು ಸಮಂಜಸವಾಗಿ ಪರಿಹರಿಸಲು ಯಾವ ವಿಜ್ಞಾನಿಗೂ ಸಾಧ್ಯವಿಲ್ಲ.

ಇದು ಯಾವ ವಿಚಾರವಾದಿಗೂ ನಿಲುಕತಕ್ಕದ್ದಲ್ಲ.

ಹುಟ್ಟು ಸಾವುಗಳ ರಹಸ್ಯವೇನು? ಹುಟ್ಟಿದಾಗ ದೇಹದೊಳಗೆ ಬಂದು ಸೇರಿಕೊಂಡ ಚೈತನ್ಯವು ಸಾಯುವಾಗ ತಾನಾಗಿಯೇ ಬಿಟ್ಟುಹೋಗಲು ನಿಮಿತ್ತವೇನು? ಈ ಚೈತನ್ಯವು ಯಾವುದು? ಎಲ್ಲಿಂದ ಬಂದು ಎಲ್ಲಿಗೆ ಹೋಗುತ್ತದೆ? ಪ್ರಾಣಿಗಳ ಜನನವಿರುವುದರಿಂದ ಅವುಗಳ ಮರಣವೂ ಆವಶ್ಯಕ. ಮರಣವಿರುವುದರಿಂದ ಜನನವೂ ಆವಶ್ಯಕ. ಮರಣವಿಲ್ಲದೇ ಬರಿಯ ಜನನವೇ ಆಗುತ್ತಿದ್ದರೆ ಜೀವಿಗಳಿಗೆ ಈ ಭೂಮಿಯಲ್ಲಿ ನಿಲ್ಲಲು ಸ್ಥಳವಿರುತ್ತಿರಲಿಲ್ಲ. ತಿನ್ನಲು ಆಹಾರ ದೊರೆಯುತ್ತಿರಲಿಲ್ಲ. ಬರಿಯ ಮರಣವೇ ಆಗುತ್ತಾ ಹೋದರೆ ಜಗತ್ತಿನಲ್ಲಿ ಜೀವಿಗಳೇ ಇಲ್ಲದೆ ಜಗತ್ತು ಶೂನ್ಯವಾಗುತ್ತಿತ್ತು. ಒಂದು ನಿಯಮದ ಚೌಕಟ್ಟಿನೊಳಗೆ ಈ ಜಗತ್ತು ಸಿಕ್ಕಿಕೊಂಡಿದೆಯೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

**ಭೀಷಾಸ್ಮಾದ್ ವಾತಃ ಪವತೇ ।**<br>
**ಭೀಷೋದೇತಿ ಸೂರ್ಯಃ ।**<br>
**ಭೀಷಾಸ್ಮಾದಗ್ನಿಶ್ಚೇಂದ್ರಶ್ಚ ।**<br>
**ಮೃತ್ಯುರ್ಧಾವತಿ ಪಂಚಮ ಇತಿ ॥**

ಹಸಿವು, ಬಾಯಾರಿಕೆ, ನಿದ್ರೆ, ರೋಗ, ಮುಪ್ಪು, ಮರಣ ಇವುಗಳ ಹಿಡಿತದಿಂದ ಯಾವನೂ ಪಾರಾಗಲಾರ. ಪ್ರತಿಯೊಬ್ಬ ಮನುಷ್ಯನೂ ಇವುಗಳಿಗೆ ಅಧೀನನಾಗಿದ್ದಾನೆ. ಇವೆಲ್ಲವನ್ನೂ ಪರೀಕ್ಷಿಸಿದಾಗ ಈ ಜಗತ್ತು ಒಂದಾನೊಂದು ಆದೇಶಕ್ಕೆ ಒಳಪಟ್ಟು ಚಲಿಸುತ್ತಿದೆ ಎಂದು ಸ್ಪಷ್ಟವಾಗುತ್ತದೆ. ಈ ಕಟ್ಟುಪಾಡು ದೈವನಿರ್ಮಿತ ; ಮನುಷ್ಯನಿರ್ಮಿತವಲ್ಲವೆಂದು ಯಾವನಾದರೂ ಒಪ್ಪಿಕೊಳ್ಳಬೇಕಾಗುತ್ತದೆ. ಇದು ಈಶ್ವರ ನಿರ್ಮಿತವಾದ ಕಟ್ಟುಪಾಡು - ನಿಯಮ - ವ್ಯವಸ್ಥೆ. ಈ ವ್ಯವಸ್ಥೆಯನ್ನು ಪಾಲಿಸಿದರೆ ಜಗದ್ವ್ಯವಹಾರವು ಅಡ್ಡಿ ಆತಂಕಗಳಿಲ್ಲದೇ ಸುಗಮವಾಗಿ ನಡೆಯುತ್ತದೆ. ಈ ವ್ಯವಸ್ಥೆಯ ಅನ್ವರ್ಥನಾಮವೇ ಧರ್ಮ.

''ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ'' ಎಂಬ ಶ್ರುತಿ ವಾಕ್ಯದ ತಾತ್ಪರ್ಯವು ಇದೇ. ಸಮಸ್ತ ಜಗತ್ತಿನ ವ್ಯವಹಾರವು ಧರ್ಮದ ತಳಹದಿಯ ಮೇಲೆ ನಿಂತಿದೆ ಎಂದು ಅಭಿಪ್ರಾಯ. ಯಾವುದು ಜಗತ್ತನ್ನು ಧರಿಸುತ್ತದೆಯೋ ಧರಿಸಿ ಪೋಷಿಸುತ್ತದೆಯೋ ಅದು ಧರ್ಮ. ವಿಶ್ವಕರ್ತನು ಸೃಷ್ಟಿಯ ಆದಿಯಲ್ಲಿಯೇ ಗೊತ್ತುಮಾಡಿದ ನಿಯಮ ಇದು. ಈ ನಿಯಮವನ್ನು ಸೂರ್ಯ, ಚಂದ್ರ, ನದಿ, ಸಮುದ್ರ, ವಾಯು, ಅಗ್ನಿ, ಪೃಥ್ವಿ ಇತ್ಯಾದಿ ವಸ್ತುಗಳೆಲ್ಲವೂ ಚಾಚೂ ತಪ್ಪದೆ ಪಾಲಿಸುತ್ತ

ಬಂದಿವೆ. ಬುದ್ಧಿ ಇಲ್ಲದ ಪ್ರಾಣಿಗಳೆಂದು ಮನುಷ್ಯನ ನಿಂದೆಗೆ ಗುರಿಯಾದ ಸಕಲ ಮೃಗ, ಪಕ್ಷಿ, ಕ್ರಿಮಿ, ಕೀಟಗಳೂ ಪಾಲಿಸುತ್ತಿವೆ. ತಾನು ಬುದ್ಧಿಶಾಲಿಯೆಂದು ಬೀಗುತ್ತಿರುವ ಮನುಷ್ಯನದೇ ತಕರಾರು. ಮನುಷ್ಯೇತರ ಪ್ರಾಣಿಗಳಿಗೆ ವಿವೇಚನಾಶಕ್ತಿಯಿಲ್ಲವಾದ್ದರಿಂದ ನಿಸರ್ಗ ಪ್ರಾಪ್ತವಾದ ಸ್ವಧರ್ಮದಲ್ಲಿ ಅವು ಪ್ರವೃತ್ತವಾಗಿವೆ. ಅವುಗಳ ಪ್ರವೃತ್ತಿಗೆ ವಿಧಿಯು ಬೇಕಾಗಿಲ್ಲ. ನಿವೃತ್ತಿಗೆ ನಿಷೇಧವು ಫಲಕಾರಿಯೂ ಅಲ್ಲ. ಆದ್ದರಿಂದ ವಿಧಿನಿಷೇಧಾತ್ಮಕವಾದ ಧರ್ಮಶಾಸ್ತ್ರವು ಮನುಷ್ಯನಿಗೋಸ್ಕರ ಆವಶ್ಯಕವಾಯಿತು. ಮನುಷ್ಯರು ಇದಕ್ಕೆ ಅಧಿಕಾರಿಗಳು.

ಎಲ್ಲ ಪ್ರಾಣಿಗಳಿಗಿರುವಂತೆ ಮನುಷ್ಯನ ಸಹಜವಾದ ಪ್ರವೃತ್ತಿಯು ಪ್ರೇಯಸ್ಸಿನ ಕಡೆಗೇ ಇರುತ್ತದೆ. ಆದರೆ ಇವನ ಕಲ್ಯಾಣಕ್ಕೆ ಆವಶ್ಯಕವಾದದ್ದು ಶ್ರೇಯಸ್ಸು. ಆದ್ದರಿಂದ ಶ್ರೇಯಸ್ಸಿಗೆ ಭಂಗವಾಗದಂತೆ ಪ್ರೇಯಸ್ಸನ್ನು ಅನುಭವಿಸೆಂದು ಹೇಳುವುದಕ್ಕಾಗಿ ಧರ್ಮಶಾಸ್ತ್ರವು ಹೊರಟಿದೆ. ಇದನ್ನು ಇನ್ನೂ ಕೆಣಕಿದರೆ ಪ್ರಬಂಧವು ಅತಿ ದೀರ್ಘವಾಗುವುದರಿಂದ, ಇದನ್ನಿಲ್ಲಿಗೆ ಮೊಟಕು ಮಾಡಿ ಪ್ರಕೃತಕ್ಕೆ ಬರೋಣ.

ನಾವೀಗ ಪರಿಶೀಲಿಸಬೇಕಾದದ್ದು ಮನುಸ್ಮೃತಿ. ಸೃಷ್ಟಿಯ ಆದಿಯಲ್ಲಿ ಬ್ರಹ್ಮನಿಂದ ವಿರಾಟ್‌ಪುರುಷನು ಹುಟ್ಟಿದನೆಂದೂ, ವಿರಾಟ್‌ಪುರುಷನು ತನ್ನನ್ನು ಸೃಜಿಸಿದನೆಂದೂ ಮನುವೇ ಈ ಗ್ರಂಥದಲ್ಲಿ ಹೇಳಿಕೊಂಡಿದ್ದಾನೆ. ವಿರಾಟ್ ಪುರುಷನಿಗೆ ಹಿರಣ್ಯಗರ್ಭನೆಂದೂ, ಬ್ರಹ್ಮನೆಂದೂ ನಾಮಾಂತರಗಳಿವೆಯೆಂದು ಪುರಾಣಗಳಿಂದ ತಿಳಿದುಬರುತ್ತದೆ. ಏವಂಚ ಮನುವು ಬ್ರಹ್ಮನ ಮಾನಸ ಪುತ್ರನೆಂಬ ಪ್ರಸಿದ್ಧಿಗೆ ಬಾಧೆಯೇನೂ ಇಲ್ಲ. ಬ್ರಹ್ಮನ ಆಜ್ಞೆಯಂತೆ ಮನುವೂ ಸೃಷ್ಟಿಕಾರ್ಯದಲ್ಲಿ ಪ್ರವೃತ್ತನಾದನು. ಒಂದೊಂದು ಕಲ್ಪದಲ್ಲಿ ಒಬ್ಬೊಬ್ಬ ಮನುವಿನ ಆಳ್ವಿಕೆ ನಡೆಯುತ್ತದೆ. ಹೀಗೆ ಸ್ವಾಯಂಭುವ, ಸ್ವಾರೋಚಿಷ ಮುಂತಾದ ಹದಿನಾಲ್ಕು ಮನುಗಳಿದ್ದಾರೆ. ಇವರ ಆಳ್ವಿಕೆಯ ಕಾಲಕ್ಕೆ ಮನ್ವಂತರವೆಂದು ಹೆಸರು. ಮನು ಎಂಬುದು ಆಧಿಕಾರಿಕವಾದ ನಾಮ. ಈಗ ನಮಗೆ ನಡೆಯುತ್ತಿರುವುದು ವೈವಸ್ವತ ಮನ್ವಂತರ. ಈ ಮನುವು ವಿವಸ್ವಂತನ ಎಂದರೆ ಸೂರ್ಯನ ಮಗನಾದ್ದರಿಂದ ವೈವಸ್ವತಮನುವೆಂದು ಹೆಸರು ಬಂದಿದೆ. **'ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್'** ಎಂಬ ಗೀತಾವಾಕ್ಯವನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ಒಂದೊಂದು ಕಲ್ಪದಲ್ಲಿ ಬೇರೆ ಬೇರೆ ಮನುಗಳಿದ್ದುದರಿಂದಲೂ, ಅವರ ಜನನವು ಬೇರೆ ಬೇರೆ ಮಹರ್ಷಿಗಳಿಂದಲೂ ಆಗಿರುವುದರಿಂದಲೂ ಕೆಲವು ವೇಳೆ ಇದರ ವ್ಯವಸ್ಥೆಯನ್ನು ಹೇಳುವಾಗ ಗೊಂದಲವೇರ್ಪಡುತ್ತದೆ.

ತನ್ನಿಂದ ಸೃಜಿಸಲ್ಪಟ್ಟ ಮನುವಿಗೆ ಬ್ರಹ್ಮನೇ ಲೋಕ ವ್ಯವಸ್ಥಾಸಿದ್ಧಿಗಾಗಿ ಧರ್ಮಶಾಸ್ತ್ರವನ್ನು ಬೋಧಿಸಿದನು. ಅದು 'ಶತಸಾಹಸ್ರ' (ಒಂದು ಲಕ್ಷ) ಶ್ಲೋಕಾತ್ಮಕವಾಗಿದ್ದಿತು. ಮನುವು ಅದನ್ನು ಸಂಕ್ಷೇಪಿಸಿ ಮರೀಚಿ, ಭೃಗು ಮೊದಲಾದ ತನ್ನ ಶಿಷ್ಯರಿಗೆ ಬೋಧಿಸಿದನೆಂದೂ, ಭೃಗುವು ಈ ಮನುಸ್ಮೃತಿಯನ್ನು ಋಷಿಗಳಿಗೆ ಹೇಳಿದನೆಂದೂ ಈ ಗ್ರಂಥದ ಆದಿಯಲ್ಲಿದೆ. ಮನುವು ತನ್ನ ವಾಕ್ಯಗಳಿಂದಲೇ ಇದನ್ನು ಬೋಧಿಸಿದ ನಿಮಿತ್ತವಾಗಿ ಇದಕ್ಕೆ ಮನುಸ್ಮೃತಿಯೆಂದು ಹೆಸರಾಯಿತು. ಈ ಮನುವು ಆದಿಯಲ್ಲಿ ಸ್ವಯಂಭೂಬ್ರಹ್ಮನಿಂದ ಹುಟ್ಟಿದ ಸ್ವಾಯಂಭುವಮನು. ಈಗಿನ ವೈವಸ್ವತಮನುವಲ್ಲ. ಇತರ ಮನ್ವಂತರಗಳಲ್ಲಿಯೂ ಇದೇ ಮನುಸ್ಮೃತಿಯು ವ್ಯವಹಾರದಲ್ಲಿರುತ್ತದೆಯೆಂದು ತಿಳಿಯಬೇಕು.

ಮನುಷ್ಯರೆಲ್ಲರೂ ಮನುವಂಶಜಾತರು. ಮನುಷ್ಯ, ಮಾನುಷ, ಮನುಜ, ಮಾನವ ಇವೆಲ್ಲವೂ ಒಂದೇ ಅರ್ಥದ ಶಬ್ದಗಳು. ಮನುಸ್ಮೃತಿಯ ಪ್ರಕಾರ ವಿರಾಟ್‌ಪುರುಷನ ಆದೇಶದಂತೆ ಸಕಲ ಜಗತ್ತನ್ನೂ ಸೃಷ್ಟಿಸಿದವನು ಸ್ವಾಯಂಭುವಮನು. ಭೂಚರ, ಖೇಚರ, ಜಲಚರ ಪ್ರಾಣಿಗಳೆಲ್ಲವೂ ಮನುವಿನಿಂದ ಸೃಷ್ಟವಾದವು. ಆದರೂ ಈ ಎರಡು ಕಾಲಿನ ನರನಿಗೆ ಮನುಷ್ಯ, ಮಾನವ ಎಂಬ ಹೆಸರು ಯೋಗರೂಢವಾಗಿ ನಿಂತಿದೆ. ಜ್ಞಾನಾರ್ಥಕ 'ಮನ' ಧಾತುವಿನಿಂದ ಮನು ಶಬ್ದವು ನಿಷ್ಪನ್ನವಾಗಿದೆ. ಮನಸ್, ಮನನ ಎಂಬ ಶಬ್ದಗಳ ಮೂಲವೂ **ಮನ** ಧಾತುವೇ. ಮನೋಬಲ, ಮನನ ಶಕ್ತಿ ಈ ಮನುಷ್ಯನಲ್ಲಿ ಇತರ ಜಂತುಗಳಿಗಿಂತ ಅಧಿಕವಾಗಿ ಗೋಚರಿಸುವುದರಿಂದ ಮನುವಂಶದವನೆಂಬ ಕೀರ್ತಿಗೆ ಈ ನರನು ಪಾತ್ರನಾಗಿದ್ದಾನೆ. ಇಂಗ್ಲೀಷಿನಲ್ಲಿರುವ MAN ಶಬ್ದದ ಮೂಲವೂ ಮಾನವ ಶಬ್ದವೇ ಎಂಬುದನ್ನು ಗಮನಿಸಬೇಕು. ಸಂಸ್ಕೃತದಲ್ಲಿಯೂ **'ನರ'** ಎಂಬ ಒಂದು ಶಬ್ದವನ್ನು ಬಿಟ್ಟರೆ ಮನುಷ್ಯನಿಗೆ ಮಾತ್ರ ಪರ್ಯಾಯವಾಗತಕ್ಕ ಇನ್ನೊಂದು ಸರಿಯಾದ ಶಬ್ದವಿಲ್ಲ. ಜನ, ಮರ್ತ್ಯ, ಪುಮಾನ್, ಪುರುಷ ಇವೆಲ್ಲವೂ ಅನ್ಯಾರ್ಥ ಸಾಧಾರಣ ಶಬ್ದಗಳು. ಈ ಜಗತ್ತಿನಲ್ಲಿರುವ ಸಕಲ ನರರೂ ಮನುಜರೇ. ಆದ್ದರಿಂದ ಈ ಮಾನವ ಧರ್ಮಶಾಸ್ತ್ರವು ಮನುಷ್ಯ ಮಾತ್ರರಿಗೆ ಅನ್ವಯಿಸತಕ್ಕದ್ದೆಂದು ತಿಳಿಯಬೇಕು. **ಇದು ಕೇವಲ ಭಾರತೀಯರಿಗೆ ಅಥವಾ ಹಿಂದೂಗಳಿಗೆ ಅನ್ವಯಿಸುವ ಧರ್ಮಗ್ರಂಥ ಎಂದು ತಿಳಿಯುವುದು ಮೊದಲನೆಯ ತಪ್ಪು.**

**ಏತದ್ದೇಶಪ್ರಸೂತಸ್ಯ ಸಕಾಶಾದಗ್ರಜನ್ಮನಃ ।**
**ಸ್ವಂ ಸ್ವಂ ಚರಿತ್ರಂ ಶಿಕ್ಷೇರನ್ ಪೃಥಿವ್ಯಾಂ ಸರ್ವ ಮಾನವಾಃ ॥** (ಮನು ೨-೨೦)

''ಪೃಥ್ವಿಯಲ್ಲಿರುವ ಸಕಲ ಮಾನವರೂ ಈ ದೇಶದಲ್ಲಿ ಹುಟ್ಟಿದ ಬ್ರಾಹ್ಮಣನಿಂದ

ತಮ್ಮ ತಮ್ಮ ಆಚಾರವನ್ನು ಕಲಿತುಕೊಳ್ಳತಕ್ಕದ್ದು.''

ಧರ್ಮಶಾಸ್ತ್ರದ ವ್ಯಾಖ್ಯಾನ, ಅಧ್ಯಾಪನಗಳನ್ನು ಮಾತ್ರ ಬ್ರಾಹ್ಮಣನೇ ಮಾಡಬೇಕೆಂದು ವಿಧಿ ಇದೆ. ಇತರರೂ ಶಾಸ್ತ್ರಾರ್ಥವನ್ನು ತಮ್ಮ ಸ್ವಾರ್ಥದಿಂದಲೋ ಅನ್ಯಥಾ ಎಳೆದುಬಿಟ್ಟಾರೆಂಬ ಶಂಕೆ ಇಲ್ಲಿ ತೋರುತ್ತದೆ. ಬ್ರಾಹ್ಮಣನು ಮಾತ್ರ ಹಾಗೆ ಮಾಡುವುದಿಲ್ಲವೆಂಬ ನಿಶ್ಚಯವೂ ಇಲ್ಲಿ ಸ್ಪಷ್ಟವಾಗಿದೆ. ಈ ಕಾಲದಲ್ಲಿ 'ಬ್ರಾಹ್ಮಣ' ಎಂಬ ಶಬ್ದವೇ ನಿಂದಾತಿರಸ್ಕಾರಗಳ ಪ್ರತಿರೂಪವಾಗಿಬಿಟ್ಟಿದೆ. ಇದಕ್ಕೆ ಬಹುಮಟ್ಟಿಗೆ ಈ ಬ್ರಾಹ್ಮಣ ಜಾತಿಯಲ್ಲಿ ಅವತರಿಸಿದ ಬ್ರಾಹ್ಮಣಬ್ರುವರೇ ಕಾರಣರೆಂಬುದು ನಿಶ್ಚಿತ. ಅದು ಹೇಗಾದರೂ ಇರಲಿ. **ಮನು ಹೇಳಿದ ಬ್ರಾಹ್ಮಣ ಕೃತಯುಗದ ಬ್ರಾಹ್ಮಣ. ಮನುಸ್ಮೃತಿಯಲ್ಲಿ ಬ್ರಾಹ್ಮಣನಿಗೆ ಹೇಳಿದ ವಿಧಿ ನಿಷೇಧಗಳನ್ನು ಪಾಲಿಸತಕ್ಕ, ಮನೋವಾಕ್ಕಾಯಗಳೆಂಬ ತ್ರಿಕರಣಗಳಲ್ಲಿಯೂ ಬ್ರಾಹ್ಮಣ್ಯವನ್ನು ರಕ್ಷಿಸಿಕೊಂಡು ಬಂದಿರುವವನು ಪರಿಶುದ್ಧ ಬ್ರಾಹ್ಮಣನೆಂದು ತಿಳಿಯಬೇಕು. ಅಂತಹ ಬ್ರಾಹ್ಮಣನನ್ನು ನಿಂದಿಸಲು ಧೈರ್ಯವುಳ್ಳ ಎದೆಗಾರ ಈ ಜಗತ್ತಿನಲ್ಲಿ ಯಾವನಿದ್ದಾನು? ಆದ್ದರಿಂದ ಈ ಪ್ರಬಂಧದಲ್ಲಿ ಬ್ರಾಹ್ಮಣನೆಂಬ ಮಾತು ಬಂದಾಗ, ಮನು ಧರ್ಮಶಾಸ್ತ್ರವು ಬೋಧಿಸಿದಂತೆ ನಡೆಯತಕ್ಕ ಬ್ರಾಹ್ಮಣನೆಂದೂ ಈ ಕಾಲದ ಕೇವಲ ಬ್ರಾಹ್ಮಣ ಜಾತೀಯನಲ್ಲವೆಂದೂ ಸ್ಪಷ್ಟವಾಗಿ ತಿಳಿದಿರಬೇಕು.**

ಈ ಶಾಸ್ತ್ರವು ಯಾರಿಗೆ ಯಾವುದು ಧರ್ಮವೆಂದು ಬೋಧಿಸಿದೆಯೋ ಅದನ್ನು ಆಚರಿಸಲು ಸರ್ವರಿಗೂ ಅಧಿಕಾರವಿದೆಯೆಂದೂ, ಅದರಂತೆ ಆಚರಿಸಬೇಕಾದದ್ದು ಅವರವರ ಕರ್ತವ್ಯವೆಂದೂ ತಿಳಿಯಬೇಕು. ಮಾನವ ಜಾತಿಗೆ ವಿಹಿತವಾದ ಶಾಸ್ತ್ರವಿದು.

ಸಕಲ ವೇದಾರ್ಥಗಳನ್ನೂ ಮನನ ಮಾಡಿದುದರಿಂದ ಈ ಸ್ಮೃತಿಕಾರನಿಗೆ 'ಮನು' ಎಂಬ ಹೆಸರು ಬಂದಿದೆಯೆಂದು ವ್ಯಾಖ್ಯಾನಕಾರರಾದ ಕುಲ್ಲೂಕಭಟ್ಟರು ಬರೆದಿದ್ದಾರೆ. ವೇದದಲ್ಲಿಯೂ ಮನು ಶಬ್ದವು ಬಂದಿದೆ. ಛಾಂದೋಗ್ಯೋಪನಿಷತ್ತಿನಲ್ಲಿ ''**ಮನುರ್ವೈಯತ್ಕಿಂಚಿದವದತ್ ತದ್ ಭೇಷಜಂ**'' ಎಂದಿದೆ. ಮನುವು ಬ್ರಹ್ಮನ ಮಾನಸಪುತ್ರನೆಂಬ ಮಾತಿಗೆ ಅರ್ಥವೇನು? ಮನಸ್ಸಿನಿಂದ ಒಬ್ಬ ವ್ಯಕ್ತಿಯನ್ನು ಸೃಷ್ಟಿಸುವುದೆಂದರೆ, ತನ್ನ ಮಾಯಾಶಕ್ತಿಯಿಂದ ರೂಪಾಂತರವನ್ನು ತಳೆಯುವುದೆಂದರ್ಥ. ಗೀತಾಭಾಷ್ಯದ ಆರಂಭದಲ್ಲಿ ಶ್ರೀ ಶಂಕರ ಭಗವತ್ಪಾದರು ''**ಸ್ಯಾದೀಶ್ವರಸ್ಯಾಪಿ ಮಾಯಾಮಯಂ ರೂಪಂ ಸಾಧಕಾನುಗ್ರಹಾರ್ಥಮ್**'' ಎಂದು ನುಡಿದಿದ್ದಾರೆ. ಶ್ರೀಕೃಷ್ಣ ಶ್ರೀರಾಮ ಮೊದಲಾದ ಅವತಾರಗಳೆಲ್ಲವೂ ಈಶ್ವರನು ಮಾಯಾಶಕ್ತಿಯಿಂದ ಸ್ವೀಕರಿಸಿದ ರೂಪಾಂತರ. ಆದ್ದರಿಂದ ಮನುವು ಪರಮಾತ್ಮನ ಒಂದು ಅವತಾರವೆಂದು ಸಿದ್ಧವಾಗುತ್ತದೆ. ಆದ್ದರಿಂದಲೇ ಈ ಗ್ರಂಥದ ಕಡೆಯಲ್ಲಿ -

**ಏತಮೇಕೇ ವದಂತ್ಯಗ್ನಿಂ ಮನುಮನ್ಯೇ ಪ್ರಜಾಪತಿಂ ।**
**ಇಂದ್ರಮೇಕೇ ಪರೇ ಪ್ರಾಣಮಪರೇ ಬ್ರಹ್ಮ ಶಾಶ್ವತಮ್॥** (೧೨-೧೨೩)

ಎಂದು ಸ್ತುತಿಸಿದ್ದಾರೆ. ''ಪರಮಾತ್ಮನನ್ನೇ ಅಗ್ನಿಯೆಂದೂ, ಮನುವೆಂದೂ, ಪ್ರಜಾಪತಿಯೆಂದೂ, ಇಂದ್ರನೆಂದೂ, ಪ್ರಾಣನೆಂದೂ ಬೇರೆ ಬೇರೆಯವರು ಹೇಳುತ್ತಾರೆ. ಇನ್ನು ಕೆಲವರು ಶಾಶ್ವತವಾದ ಪರಬ್ರಹ್ಮವೆನ್ನುತ್ತಾರೆ.''

ವೇದಾರ್ಥವನ್ನು ಸ್ಮರಿಸಿಕೊಂಡು ಅದನ್ನೇ ಸ್ಪಷ್ಟವಾಗಿ ಎಲ್ಲರಿಗೂ ತಿಳಿಯುವಂತೆ ವಿಸ್ತರಿಸಿ ವಿವರಿಸಿ ಒಂದಾನೊಂದು ವ್ಯವಸ್ಥೆಯಿಂದ ರಚಿತವಾದ ಗ್ರಂಥವೇ ಮನುಸ್ಮೃತಿ. ಮನುವಿನ ಆಜ್ಞೆಯಂತೆ ಅವನ ಶಿಷ್ಯನಾದ ಭೃಗುವು ಇದನ್ನು ಗ್ರಂಥರೂಪವಾಗಿ ಬರೆದಿದ್ದಾನೆ ಎಂಬುದು ಮಥಿತಾರ್ಥವಾಯಿತು. ಮನುವೇ ಹೇಳುತ್ತಾನೆ -

**ಇದಂ ಶಾಸ್ತ್ರಂತು ಕೃತ್ವಾಸೌ ಮಾಮೇವ ಸ್ವಯಮಾದಿತಃ ।**
**ವಿಧಿವದ್ ಗ್ರಾಹಯಾಮಾಸ ಮರಿಚ್ಯಾದೀಂಸ್ತ್ವಹಂ ಮುನೀನ್॥** (೧-೫೮)

''ಆ ಬ್ರಹ್ಮದೇವನು ಈ ಧರ್ಮ ಶಾಸ್ತ್ರವನ್ನು ತಾನೇ ಸ್ವತಃ ವಿಧಿವತ್ತಾಗಿ ನನಗೆ ಕಲಿಸಿದನು. ನಾನು ಮರೀಚಿ ಮೊದಲಾದ ಮುನಿಗಳಿಗೆ ಇದನ್ನು ಉಪದೇಶಿಸಿದೆನು.''

ಇತರ ಮುನಿಗಳು ತಮ್ಮ ಶಿಷ್ಯರಿಗೆ ಇದನ್ನು ಬೋಧಿಸಿರಬಹುದು. ಹೀಗೆ ಪರಂಪರೆಯಿಂದ ಬಂದವನ್ನು ಪರಾಶರಾದಿಗಳು ಬೋಧಿಸಿದರು. ಆದ್ದರಿಂದ ಹಲವಾರು ಸ್ಮೃತಿಗ್ರಂಥಗಳಾದವು. ಅವುಗಳಲ್ಲಿ ಗುರುಶಿಷ್ಯ ಲೇಖಕಾದಿಗಳ ಪುರುಷದೋಷವು ಕ್ರಮೇಣ ಸೇರಿಹೋಗಿರಬಹುದು. ಆಧುನಿಕ ಪಂಡಿತಂಮನ್ಯರಿಂದ ಪ್ರಕ್ಷೇಪಗಳಾಗಿರುವುದೂ ಅಸಂಭವವಲ್ಲ. ಆದ್ದರಿಂದ ಈ ಪರಂಪರೆಗೆ ಮೂಲ ಪುರುಷನಾದ ಮನುವಿನಿಂದ ಬಂದ ಸ್ಮೃತಿಯೇ ಪ್ರಬಲವಾದದ್ದೆಂದೂ ಅದಕ್ಕೆ ವಿರುದ್ಧವಾದ ಯಾವ ವಚನವೂ ಪ್ರಾಮಾಣಿಕವಲ್ಲವೆಂದೂ ಪೂರ್ವಜರೇ ಹೇಳಿದ್ದಾರೆ.

**ವೇದಾರ್ಥೋಪನಿಬದ್ಧತ್ವಾತ್ ಪ್ರಾಧಾನ್ಯಂ ಹಿ ಮನೋಃ ಸ್ಮೃತಮ್ ।**
**ಮನ್ವರ್ಥವಿಪರೀತಾ ತು ಯಾ ಸ್ಮೃತಿಃ ಸಾ ನ ಶಸ್ಯತೇ ॥** (ಬೃಹಸ್ಪತಿ)

''ವೇದಾರ್ಥಗಳನ್ನು ಪ್ರಮಾಣೀಕರಿಸಿ ಅವುಗಳ ಆಧಾರದ ಮೇಲೆ ರಚಿತವಾಗಿರುವುದರಿಂದ ಮನುಸ್ಮೃತಿಯು ಪ್ರಧಾನವಾದದ್ದು. ಮನುಸ್ಮೃತಿಗೆ ವಿರುದ್ಧವಾದ ಸ್ಮೃತಿಯು ಪ್ರಶಂಸನೀಯವಲ್ಲ.''

ಮನುಸ್ಮೃತಿಯ ಪ್ರಮೇಯಗಳನ್ನು ಸ್ಥೂಲವಾಗಿ ಮೂರು ವಿಭಾಗ ಮಾಡಬಹುದು. ಅಧ್ಯಾತ್ಮ ಸಂಹಿತೆ, ನೀತಿ ಸಂಹಿತೆ ಮತ್ತು ಆಚಾರ ಸಂಹಿತೆ. ಅಧ್ಯಾತ್ಮ

ವಿಚಾರವೂ ಧರ್ಮದಲ್ಲಿ ಸೇರತಕ್ಕದ್ದೇ ಸರಿ. ಮುಂದೆ ಆರನೆಯ ಅಧ್ಯಾಯದಲ್ಲಿ ಧರ್ಮಸ್ವರೂಪವನ್ನು ಹೇಳುವಾಗ ಮನುವೇ -

**ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯ ನಿಗ್ರಹಃ।**
**ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಮ್ ॥** (೬-೯೨)

ಎಂದು ಹೇಳಿ ವಿದ್ಯೆಯನ್ನು ಧರ್ಮವೆಂದು ಕರೆದಿದ್ದಾನೆ. ಇಲ್ಲಿ ವಿದ್ಯೆ ಎಂದರೆ ಅಧ್ಯಾತ್ಮ ವಿದ್ಯೆ. ಮಹಾಭಾರತದಲ್ಲಿ - ''**ಆತ್ಮಜ್ಞಾನಂ ತಿತಿಕ್ಷಾಚ ಧರ್ಮಃ ಸಾಧಾರಣೋನೃಪ**'' ಎಂಬ ಮಾತು ಬರುತ್ತದೆ. ಯಾಜ್ಞವಲ್ಕ್ಯ ಸ್ಮೃತಿಯಲ್ಲಿ - ''**ಅಯಂ ತು ಪರಮೋ ಧರ್ಮೋ ಯದ್ಯೋಗೇನಾತ್ಮದರ್ಶನಮ್ ॥**'' ಎಂದು ಹೇಳಿದೆ. ಆತ್ಮಸಾಕ್ಷಾತ್ಕಾರವು ಸರ್ವೋತ್ತಮವಾದ ಧರ್ಮವೆಂದು ಯಾಜ್ಞವಲ್ಕ್ಯರು ಸ್ಪಷ್ಟವಾಗಿ ನುಡಿದಿದ್ದಾರೆ. ಆತ್ಮಜ್ಞಾನವೇ ಪರಮಧರ್ಮ. ನೀತಿ ಸಂಹಿತೆ, ಆಚಾರ ಸಂಹಿತೆಗಳೆಲ್ಲವೂ ಆತ್ಮಜ್ಞಾನಕ್ಕೆ ಅಂಗಭೂತವಾದವು ಎಂಬುದರಲ್ಲಿ ಸಂದೇಹವಿಲ್ಲ. ಏಕಾಗ್ರನಾಗಿ ಕುಳಿತಿದ್ದ ಮನುವಿನ ಬಳಿಗೆ ಋಷಿಗಳು ಆಗಮಿಸಿ ಸರ್ವವರ್ಣಗಳ ಮತ್ತು ಸಂಕೀರ್ಣ ಜಾತಿಯವರ ಧರ್ಮಗಳನ್ನು ಕ್ರಮವಾಗಿ ತಿಳಿಸಿಕೊಡಬೇಕೆಂದು ಪ್ರಾರ್ಥಿಸುತ್ತಾರೆ. ಅವರು ಬಯಸಿರುವುದು ಜನರೆಲ್ಲರ ನೀತಿ ಸಂಹಿತೆ ಮತ್ತು ಆಚಾರಸಂಹಿತೆಗಳನ್ನು. ಆದ್ದರಿಂದ ಅಧ್ಯಾತ್ಮದ ವಿಚಾರವಾಗಿ ಇದರಲ್ಲಿ ಅಧಿಕ ವಿವರಣೆ ಇಲ್ಲ. ಅದು ಈ ಎಲ್ಲ ಅಂಗಧರ್ಮಗಳಿಗೆ ಅಂಗಿಯಾದ ಮುಖ್ಯ ಧರ್ಮವಾದ್ದರಿಂದ ಗ್ರಂಥಾದಿಯಲ್ಲಿ ಅದರ ಸೂಚನೆ ಸ್ವಲ್ಪ ಇದೆ. ಈ ಗ್ರಂಥದ ಉಪಸಂಹಾರವಿರುವ ಹನ್ನೆರಡನೆಯ ಅಧ್ಯಾಯದಲ್ಲಿ ಈ ಧರ್ಮಾನುಷ್ಠಾನಕ್ಕೆ ಫಲವೇನೆಂಬುದನ್ನು ತಿಳಿಸುವಾಗ ಆತ್ಮಜ್ಞಾನದ ವಿಷಯವು ಪ್ರಸ್ತುತವಾಗಿದೆ. ಮನುಸ್ಮೃತಿಯನ್ನು ಅಧ್ಯಯನ ಮಾಡತಕ್ಕವರು ಇದರ ಆದಿಯಲ್ಲಿರುವ ಕೆಲವು ಶ್ಲೋಕಗಳ ಅರ್ಥವನ್ನು ಮನನ ಮಾಡಬೇಕಾದದ್ದು ಅವಶ್ಯಕ. ಜಗದ್ವ್ಯವಹಾರ ಹೇಗೆ ಬಂದಿದೆ, ಹೇಗೆ ನಡೆದಿದೆ, ಧರ್ಮಾನುಷ್ಠಾನದ ಆವಶ್ಯಕತೆ ಏನು? ಎಂಬ ವಿಚಾರವು ವಾಚಕರ ಹೃದಯದಲ್ಲಿ ಮೊದಲು ನೆಲೆಸಿರಬೇಕು. ಇದು ಧರ್ಮಶಾಸ್ತ್ರದ ತಳಹದಿಯೂ ಹೌದು, ಶಿಖರವೂ ಹೌದು.

ಧರ್ಮವಿಷಯದಲ್ಲಿ ಪ್ರಶ್ನೆ ಮಾಡಿದ ಮಹರ್ಷಿಗಳಿಗೆ ಮನುವು ಹೇಳಲಾರಂಭಿಸಿದ್ದು ಹೀಗೆ -

**ಆಸೀದಿದಂ ತಮೋಭೂತಮಪ್ರಜ್ಞಾತಮಲಕ್ಷಣಮ್ ।**
**ಅಪ್ರತರ್ಕ್ಯಮವಿಜ್ಞೇಯಂ ಪ್ರಸುಪ್ತಮಿವ ಸರ್ವತಃ ॥** (೧-೫)

ಕಾಣುವ ಈ ಜಗತ್ತು ಹಿಂದೆ ಕತ್ತಲೆಯಂತಿದ್ದ ಪ್ರಕೃತಿಯಲ್ಲಿ ಅಡಗಿಹೋಗಿತ್ತು.

ಇಂದ್ರಿಯಗೋಚರವೇ ಆಗಿರಲಿಲ್ಲ. ಜಗತ್ತು ಇದೆಯೆಂದು ಊಹಿಸುವುದಕ್ಕೆ ಒಂದು ಚಿಹ್ನೆಯೂ ಇರಲಿಲ್ಲ. ಯಾವ ತರ್ಕಕ್ಕೂ ನಿಲುಕತಕ್ಕದ್ದಾಗಿರಲಿಲ್ಲ. ಶಬ್ದವೇ ಇರಲಿಲ್ಲವಾದ್ದರಿಂದ ಶಬ್ದಗೋಚರವೂ ಆಗಿರಲಿಲ್ಲ. ಹೀಗೆ ಯಾವ ಪ್ರಮಾಣಕ್ಕೂ ನಿಲುಕದೆ ಅವ್ಯಕ್ತವಾಗಿತ್ತು.

''**ಸದೇವ ಸೌಮ್ಯೇದಮಾಗ್ರ ಆಸೀತ್, ತರ್ಹಿ ಅವ್ಯಾಕೃತಮಾಸೀತ್**'' ಇತ್ಯಾದಿ ವೇದವಚನಗಳಿಂದ ಪರಬ್ರಹ್ಮ ಒಂದೇ ಶಾಶ್ವತವಾಗಿ ಇರತಕ್ಕದ್ದು. ''**ಸ ಐಕ್ಷತ ಲೋಕಾನ್ನು ಸೃಜಾ ಇತಿ, ಬಹುಸ್ಯಾಂ ಪ್ರಜಾಯೇಯೇತಿ**'' ಇತ್ಯಾದಿ ಶ್ರುತಿ ವಾಕ್ಯಗಳು ಈ ವಿಶ್ವವೆಲ್ಲವೂ ಪರಬ್ರಹ್ಮದ ಅಭಿಧ್ಯಾನದಿಂದ - ಸಂಕಲ್ಪದಿಂದ ಸೃಷ್ಟವಾಗಿದೆಯೆಂದು ತಿಳಿಸುತ್ತವೆ. ಈ ಜಗತ್ತು ಅನಾದಿಯಾಗಿದ್ದು ನಡುನಡುವೆ ಪ್ರಳಯಗಳು ಆಗುತ್ತವೆಯೆಂದೂ ಆ ಕಾಲದಲ್ಲಿ ಈ ವಿಶ್ವವೆಲ್ಲವೂ ಪ್ರಕೃತಿಯಲ್ಲಿ ಅಡಗಿಹೋಗುತ್ತದೆಯೆಂದೂ ಪುರಾಣಗಳಿಂದ ಗೊತ್ತಾಗುತ್ತದೆ. ಪ್ರಕೃತಿ ಎಂದರೆ ಪರಮೇಶ್ವರನ ಮಾಯಾ ಶಕ್ತಿಯೇ. ಗೊತ್ತಾದ ಕಾಲದಲ್ಲಿ ಪುನಃ ಈ ಜಗತ್ತು ತನ್ನ ಅವ್ಯಕ್ತ ಸ್ವರೂಪವನ್ನು ಬಿಟ್ಟು ವ್ಯಕ್ತವಾಗಿ ಕಾಣಿಸಿಕೊಳ್ಳುತ್ತದೆ. ಅದೆಲ್ಲವೂ ಈಶ್ವರನ ಸಂಕಲ್ಪದಿಂದ ನಡೆಯತಕ್ಕದ್ದು. ಈ ಖಗೋಳ, ಭೂಗೋಳಗಳು ಕೆಲವು ಕೋಟಿ ವರ್ಷಗಳ ಹಿಂದೆ ಹುಟ್ಟಿದವೆಂದು ವೈಜ್ಞಾನಿಕರು ಹೇಳುತ್ತಾರಷ್ಟೆ. ಅದು ಆಂಶಿಕ ಸತ್ಯವೆಂದು ಒಪ್ಪಬಹುದು. ನಮ್ಮ ರೀತಿಯಂತೆ ಈ ಕಲ್ಪದ ಸೃಷ್ಟಿಯ ಕಥೆ ಅದು. ಅದಕ್ಕೂ ಹಿಂದೆ ಈ ವಿಶ್ವವಿರಲಿಲ್ಲವೆನ್ನುವುದನ್ನೆಂದಿಗೂ ಒಪ್ಪಲು ಸಾಧ್ಯವಿಲ್ಲ. ಕಾಲಕ್ಕೆ ಆದಿಯುಂಟೆ? ಈ ಗೋಳಗಳು ಸೃಷ್ಟಿಯಾಗುವುದಕ್ಕೆ ಮೊದಲು ಶೂನ್ಯವಾಗಿತ್ತೆ? ಶೂನ್ಯದಿಂದ ವಸ್ತು ನಿರ್ಮಾಣವನ್ನು ಯಾವನೂ ಒಪ್ಪುವುದಿಲ್ಲ. ಈ ಬ್ರಹ್ಮಾಂಡದ ನಿರ್ಮಾಣಕ್ಕೆ ಬೇಕಾದ ಸಾಮಗ್ರಿಗಳೆಲ್ಲಿದ್ದವು? ಆ ಸಾಮಗ್ರಿಗಳು ಹೇಗೆ ಬಂದವು? ಯಾವ ಕಾರಣದಿಂದ ಅವು ಜಗದ್ರೂಪದಲ್ಲಿ ಪರಿಣಮಿಸಿದವು? ಇತ್ಯಾದಿ ಪ್ರಶ್ನೆಗಳಿಗೆ ಯಾವ ವಿಜ್ಞಾನಿಯೂ ಯಾವ ಕಾಲದಲ್ಲಿಯೂ ಉತ್ತರ ಹೇಳಲು ಸಮರ್ಥನಲ್ಲವೆಂಬುದು ನಿಶ್ಚಿತ.

## ಧರ್ಮ-ಅಧರ್ಮಗಳ ನಿರ್ಣಯ

ಈಗ ಧರ್ಮವೆಂದರೆ ಯಾವುದು? ಅಧರ್ಮ ಯಾವುದು? ಅದನ್ನು ಗೊತ್ತು ಮಾಡಲು ಆಧಾರವೇನು? ಅದು ಪ್ರಾಮಾಣಿಕವೆ? ಎಂಬುದನ್ನು ವಿಚಾರಿಸಬೇಕಾಗಿದೆ. ಸ್ಮೃತಿಗಳೂ, ಪುರಾಣಗಳೂ, ದರ್ಶನಗ್ರಂಥಗಳೂ ಧರ್ಮದ ಲಕ್ಷಣವನ್ನು ನಾನಾ ವಿಧವಾಗಿ ಹೇಳಿವೆ. ಅವುಗಳಲ್ಲಿ ಭಿನ್ನಾಭಿಪ್ರಾಯಗಳೇನೂ ಇಲ್ಲ. ಹೇಳುವ ವಿಧಾನವೇ ಬೇರೆ. ಅದೆಲ್ಲವನ್ನು ಏಕವಾಕ್ಯತೆಯಿಂದ ಸಮನ್ವಯಗೊಳಿಸಬಹುದು. ಅದನ್ನೆಲ್ಲ

ಬರೆಯುತ್ತ ಹೋದರೆ ಬರವಣಿಗೆ ಬಹಳ ಉದ್ದವಾದೀತು. ಆದರೂ ಧರ್ಮದ ಮೂಲಸ್ರೋತ ಯಾವುದೆಂಬುದು ಮನವರಿಕೆಯಾಗುವುದಿಲ್ಲ. ಉದಾಹರಣೆಗೆ - ''**ಯತೋಽಭ್ಯುದಯ ನಿಃಶ್ರೇಯಸ ಸಿದ್ಧಿಃ ಸ ಧರ್ಮಃ**'' ಎಂದು ಕಣಾದರ ವೈಶೇಷಿಕ ಸೂತ್ರವಿದೆ. ಯಾವುದರಿಂದ ನಮ್ಮ ಅಭ್ಯುದಯ ನಿಃಶ್ರೇಯಸಗಳು ಸಿದ್ಧಿಸುತ್ತವೆಯೋ ಅದು ಧರ್ಮವೆಂದು ಅಭಿಪ್ರಾಯ. ಅಭ್ಯುದಯ = ಇಹಲೋಕಕ್ಕೆ ಸಂಬಂಧಿಸಿದ ಧನ, ಧಾನ್ಯಾದಿ ಸಮೃದ್ಧಿ, ಆರೋಗ್ಯ ಇತ್ಯಾದಿ. ನಿಃಶ್ರೇಯಸ = ಮೋಕ್ಷ. ಇದೇನೋ ಸರಿ. ಆದರೆ ಯಾವುದರಿಂದ ಇವೆರಡೂ ಸಿದ್ಧಿಸುತ್ತವೆ? ಅದನ್ನು ತಿಳಿಸತಕ್ಕವರು ಯಾರು? ಅದರ ನಿರ್ಣಯ ಹೇಗೆ? ಎಂಬ ಪ್ರಶ್ನೆ ಉಳಿದುಕೊಳ್ಳುತ್ತದೆ. ಆದ್ದರಿಂದ ಮನು ಮಹರ್ಷಿಯು ಧರ್ಮ ಸ್ವರೂಪವನ್ನು ನಿಶ್ಚಯಿಸುವುದಕ್ಕಾಗಿ ಮೊದಲು ''**ವೇದೋಽಖಿಲೋ ಧರ್ಮಮೂಲಂ**'' ಎಂದು ತಿಳಿಸಿದ್ದಾನೆ. ಸಮಸ್ತ ವೇದವೂ ಧರ್ಮಕ್ಕೇ ಮೂಲವಾದದ್ದು. ಧರ್ಮದ ಮೂಲ ಸ್ರೋತವು ವೇದಗಳಿಂದ ಹರಿದು ಬಂದಿದೆ. ಅನಂತರ ಅದು ದೇಶ ಕಾಲಾನುಸಾರವಾಗಿ ವಿಭಿನ್ನಾಕೃತಿಯನ್ನು ತಳೆದು ಕವಲು ಕವಲಾಗಿ ಹರಿದಿದೆ, ಗಂಗಾನದಿಯಂತೆ. ಗಂಗಾಮೂಲವು ಒಂದೇ ಆಗಿದ್ದರೂ ಮುಂದೆ ವಿಸ್ತೃತವಾಗಿ ಕವಲು ಕವಲಾಗಿ ಹರಿದಿದೆ. ಅದೆಲ್ಲವೂ ಗಂಗಾಜಲವೇ. ಆದ್ದರಿಂದಲೇ ಜೈಮಿನಿ ಮಹರ್ಷಿಗಳು ಕರ್ಮ ಮೀಮಾಂಸೆಯನ್ನು ಆರಂಭಿಸುತ್ತ ''**ಚೋದನಾಲಕ್ಷಣೋಽರ್ಥೋ ಧರ್ಮಃ**'' ಎಂದು ಸೂತ್ರಿಸಿದರು. ಮನುಷ್ಯನ ಕರ್ತವ್ಯವೆಂದು ವೇದವು ಯಾವುದನ್ನು ವಿಧಿಸಿದೆಯೋ ಅದು ಧರ್ಮವೆಂದು ಅಭಿಪ್ರಾಯ. ಒಟ್ಟಿನಲ್ಲಿ ಧರ್ಮದ ಮೂಲವು ವೇದವೇ ಎಂಬುದು ಭಾರತೀಯ ವಿದ್ವಾಂಸರ ಏಕಾಭಿಪ್ರಾಯವಾಗಿದೆ.

ನೀತಿಶಾಸ್ತ್ರವೇ ಧರ್ಮಶಾಸ್ತ್ರವೆಂದು ಕೆಲವರು ತಿಳಿದಿದ್ದಾರೆ. "ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ'' ಇತ್ಯಾದಿ ವಚನಜಾತವೇ ಧರ್ಮದ ತಿರುಳೆಂದು ಹೇಳುತ್ತಾರೆ. ''**ಪರೋಪಕಾರಃ ಪುಣ್ಯಾಯಾ ಪಾಪಾಯ ಪರಪೀಡನಂ**'' ಎಂಬುದು ಧರ್ಮಶಾಸ್ತ್ರದ ಸಾರವೆಂದು ಅಭಿಪ್ರಾಯಪಟ್ಟಿದ್ದಾರೆ. ನೀತಿಶಾಸ್ತ್ರವು ಸಕಲ ಸಜ್ಜನ ಸಮ್ಮತವಾದದ್ದು. ಅಲ್ಲಿ ಬೋಧಿಸಿರುವ ವಿಧಿನಿಷೇಧಗಳು ಧರ್ಮದ ಒಂದು ಅಂಶ. ನೀತಿಶಾಸ್ತ್ರವನ್ನು ಸಕಲ ದೇಶದವರೂ ಮನ್ನಿಸುತ್ತಾರೆ. ಸಜ್ಜನರೂ ದುರ್ಜನರೂ ಗೌರವಿಸುತ್ತಾರೆ. ''ಇದು ಪಾಪಕಾರ್ಯ ಇದು ಪುಣ್ಯಕಾರ್ಯ' ಎಂಬುದನ್ನು ಯಾರೂ ತಿಳಿಸಿಕೊಡಬೇಕಾಗಿಲ್ಲ. ಮನುಷ್ಯ ಮಾತ್ರದವನಿಗೆ ಇದು ತಿಳಿದಿರುತ್ತದೆ. ಅದಕ್ಕಾಗಿ ಯಾವ ಶಾಸ್ತ್ರವೂ ಬೇಡ. ಮಹಾದಾರ್ಶನಿಕನಾದ ಭರ್ತೃಹರಿಯು ವಾಕ್ಯಪದೀಯದಲ್ಲಿ ಬರೆಯುತ್ತಾನೆ -

**ಇದಂ ಪುಣ್ಯಮಿದಂ ಪಾಪಮಿತ್ಯೇತಸ್ಮಿನ್ ಪದದ್ವಯೇ ।**
**ಆ ಚಂಡಾಲಂ ಮನುಷ್ಯಾಣಾಮಲ್ಪಂ ಶಾಸ್ತ್ರಪ್ರಯೋಜನಮ್ ॥**

(ವಾಕ್ಯ. ೧-೪೦)

''ಇದು ಪುಣ್ಯ - ಇದು ಪಾಪ ಎಂದು ಪುಣ್ಯಪಾಪ ಶಬ್ದಗಳ ಅರ್ಥವನ್ನು ನಿರ್ಣಯಿಸುವುದಕ್ಕೆ ಶಾಸ್ತ್ರದಿಂದಾಗುವ ಪ್ರಯೋಜನವು ಅತ್ಯಲ್ಪ. ಚಂಡಾಲನಿಂದ ಹಿಡಿದು ಎಲ್ಲ ಜನರಿಗೂ ಇದು ತಿಳಿದೇ ಇದೆ'' - ಎಂದು ಶ್ಲೋಕದ ತಾತ್ಪರ್ಯ. ಕಳುವುದೂ, ಕೊಲುವುದೂ, ಹುಸಿಯ ನುಡಿಯುವುದೂ ಪಾಪಕಾರ್ಯವೆಂದು ಯಾರಿಗೆ ತಿಳಿದಿಲ್ಲ? ಒಬ್ಬ ಕಳ್ಳನನ್ನು ಕೇಳಿ ನೋಡಿ- ಕಳ್ಳತನ ಮಾಡುವುದು ಪಾಪವಲ್ಲವೆ? ಎಂದು, ಹೌದೆಂದು ಅವನು ಥಟ್ಟನೆ ಒಪ್ಪಿಕೊಳ್ಳುತ್ತಾನೆ. ''ಹೊಟ್ಟೆಯ ಪಾಡಿಗಾಗಿ ಕದಿಯುತ್ತೇನೆ. ನನಗೆ ಬೇರೆ ದಾರಿ ಗೊತ್ತಿಲ್ಲ'' ಎಂದು ಹೇಳಿಬಿಡುತ್ತಾನೆ. ಆದ್ದರಿಂದ ಸಾಮಾನ್ಯನೀತಿಯು ಲೋಕ ವ್ಯವಹಾರಕ್ಕಾಗಿ, ಸಮಾಜದ ಭದ್ರತೆಗಾಗಿ, ಒಳ್ಳೆಯ ನಡತೆಯನ್ನು ಕಾವ್ಯದಂತೆ ಚಮತ್ಕಾರೋಕ್ತಿಗಳಿಂದ ಮನಸ್ಸಿಗೆ ತಾಗುವಂತೆ ಬೋಧಿಸುವುದಕ್ಕಾಗಿ ಹೊರಟಿದೆ. ಧರ್ಮವಿರುದ್ಧವಲ್ಲದ ಒಳ್ಳೆಯ ನಡತೆ ನೀತಿ. ವರ್ಣಾಶ್ರಮಾದಿಗಳ ಕರ್ತವ್ಯವಾಗಲಿ, ಅಭ್ಯುದಯ ನಿಃಶ್ರೇಯಸಗಳ ವಿಮರ್ಶೆಯಾಗಲಿ ಅದರಲ್ಲಿಲ್ಲ. ವಿಸ್ತರದಿಂದೇನು? ಶ್ರೀ ಶಂಕರ ಭಗವತ್ಪಾದರ ಈ ಸೂಕ್ತಿಗಳನ್ನು ಗಮನಿಸಬೇಕು -

**ಅಯಂ ಧರ್ಮೋಽಯಮಧರ್ಮ**
**ಇತಿ ಶಾಸ್ತ್ರಮೇವ ವಿಜ್ಞಾನೇ ಕಾರಣಮ್ ।**
**ಅತೀಂದ್ರಿಯತ್ವಾತ್ತಯೋಃ ಅನಿಯತದೇಶಕಾಲನಿಮಿತ್ತತ್ವಾಚ್ಚ॥**

(ಸೂ. ಭಾ. ೩-೧-೨೫)

''ಇದು ಧರ್ಮ, ಇದು ಅಧರ್ಮ ಎಂದು ತಿಳಿಯುವುದಕ್ಕೆ ಶಾಸ್ತ್ರವೇ (ವೇದವೇ) ಸಾಧನ. ಏಕೆಂದರೆ ಧರ್ಮಾಧರ್ಮಗಳು ಕಣ್ಣಿಗೆ ಕಾಣಿಸತಕ್ಕವಲ್ಲ. ಮತ್ತು ದೇಶ ಕಾಲ ನಿಮಿತ್ತಗಳು ಅವುಗಳಿಗೆ ನಿಯತವಾಗಿಲ್ಲ.''

ತಾತ್ಪರ್ಯವೇನೆಂದರೆ, ಇದು ಧರ್ಮ, ಇದು ಅಧರ್ಮ ಎಂಬುದನ್ನು ನಾವು ಬುದ್ಧಿಶಕ್ತಿಯಿಂದ ವಿಂಗಡಿಸಿ ಹೇಳಲಾರೆವು. ಇಂದ್ರಿಯಗಳಿಗೆ ಗೋಚರವಾದ್ದನ್ನು ಮಾತ್ರ ಮನುಷ್ಯರು ನಿರ್ಣಯಿಸಿ ಹೇಳಬಹುದು. ಧರ್ಮಾಧರ್ಮಗಳೆರಡೂ ಇಂದ್ರಿಯಗಳಿಗೆ ನಿಲುಕತಕ್ಕವಲ್ಲ. ಅಲ್ಲದೆ ಧರ್ಮಾಚರಣೆಯ ದೇಶ, ಕಾಲ ಮುಂತಾದದ್ದನ್ನು ನಾವು ನಿರ್ಣಯಿಸಲಾರೆವು. ಶ್ರಾದ್ಧವನ್ನು ಹಗಲು ಮಾಡಬೇಕು, ರಾತ್ರಿ ಮಾಡಿದರೆ ಅಧರ್ಮ

ಎಂದು ನಾವು ನಿಶ್ಚಯಿಸುವುದು ಹೇಗೆ? ಹಿಂಸೆಯು ಅಧರ್ಮ. ಆದರೆ ಏನೂ ತಿಳಿಯದ ಒಬ್ಬ ಹುಡುಗನು ಪ್ರಾಣಿಹಿಂಸೆ ಮಾಡಿದರೆ ಅಧರ್ಮವಲ್ಲ. ಇದನ್ನು ಗೊತ್ತುಪಡಿಸುವುದು ಹೇಗೆ? ಶಾಸ್ತ್ರಕ್ಕೆ ನಾವು ಶರಣಾಗಬೇಕಾಗುತ್ತದೆ. ಅವರದೇ ಇನ್ನೊಂದು ಸೂಕ್ತಿ-

**ಆಗಮಮಾತ್ರಸಮಧಿಗಮ್ಯ ಏವ ತ್ವಯಮರ್ಥೋ ಧರ್ಮವತ್ ॥**

(ಸೂ. ಭಾ. ೨-೭-೬ )

''ಈ ಬ್ರಹ್ಮಸ್ವರೂಪವು ವೇದದಿಂದ ಮಾತ್ರ ತಿಳಿಯಬಹುದಾದದ್ದು, ಧರ್ಮವಿದ್ದಂತೆ.''

ದೇವರು ಇದ್ದಾನೆಂದು ಯುಕ್ತಿಗಳಿಂದ ವಾದಮಾಡಿ ಸಾಧಿಸಬಹುದು. ಆದರೆ ದೇವರು ಹೇಗಿದ್ದಾನೆ? ಅವನಿಗೆ ಕೈ ಕಾಲುಗಳು ನಮ್ಮಂತೆ ಇವೆಯೇ? ದೇವರು ಗಂಡೇ? ಹೆಣ್ಣೇ? ಇತ್ಯಾದಿ ವಿಷಯಗಳನ್ನು ಮಾತ್ರ ಯುಕ್ತಿಯಿಂದ ನಿರ್ಣಯಿಸಲು ಶಕ್ಯವೇ ಇಲ್ಲ. ಅದು ವೇದಮಾತ್ರದಿಂದ ತಿಳಿಯಲ್ಪಡಬೇಕಾದದ್ದು. ಧರ್ಮದ ಹಾಗೆ. ಧರ್ಮದ ಸ್ವರೂಪವನ್ನು ಯುಕ್ತಿಗಳಿಂದ ನಿರ್ಣಯಿಸಲಾಗುವುದೇ ಇಲ್ಲ. ಮನುಸ್ಮೃತಿಯೇ ಮೊದಲಾದ ಗ್ರಂಥಗಳಂತೆಯೇ ವೇದವನ್ನು ಯಾರಾದರೂ ರಚಿಸಿರಬಹುದಾದ್ದರಿಂದ, ಇನ್ನಾವ ಗ್ರಂಥಕ್ಕೂ ಇಲ್ಲದಷ್ಟು ಪ್ರಾಮಾಣ್ಯವನ್ನು ವೇದಕ್ಕೆ ಹೇಳಲು ಕಾರಣವೇನೆಂಬ ಪ್ರಶ್ನೆ ಹುಟ್ಟಬಹುದು. ಇದಕ್ಕೆ ನಮ್ಮವರೆಲ್ಲರೂ ಹೇಳುವ ಉತ್ತರವೇನೆಂದರೆ, ವೇದವು ಅಪೌರುಷೇಯ. ಅದು ಸರ್ವಜ್ಞನಾದ ಈಶ್ವರನಿಂದ ಪ್ರೋಕ್ತವಾದದ್ದು. ಈಶ್ವರನ ಮುಖದಿಂದ ನಿಃಶ್ವಾಸದಂತೆ ವೇದಗಳು ಹೊರಬಂದವು. ಈಶ್ವರನು ಸರ್ವಜ್ಞನಾದ್ದರಿಂದ ವೇದಗಳಲ್ಲಿ ಪಕ್ಷಪಾತಾದಿ ದೋಷಗಳಾವುವೂ ಇಲ್ಲ. ಅವನು ಕರುಣಾತ್ಮನಾದ್ದರಿಂದ ಸರ್ವಮಾನವರಿಗೂ ಹಿತಕರವಾದ ಮಾರ್ಗವನ್ನೇ ಉಪದೇಶಿಸಿದ್ದಾನೆ. ಆದ್ದರಿಂದ ವೇದ ಭಾಗಗಳೆಲ್ಲವೂ ಪ್ರಾಮಾಣಿಕವಾದವು ಎಂದು.

ಭಗವತ್ಪಾದರು ಹೇಳಿದ ಮಾತುಗಳಿವು -

**೧. ವಿದ್ಯಮಾನಸ್ಯೈವ ವೇದಸ್ಯ ಅಭಿವ್ಯಕ್ತಿಃ ಪುರುಷನಿಃಶ್ವಾಸವತ್ ।**
**ನ ಚ ಪುರುಷಬುದ್ಧಿಪ್ರಯತ್ನಪೂರ್ವಕಃ ।**
**ಅತಃ ಪ್ರಮಾಣನಿರಪೇಕ್ಷ ಏವ ಸ್ವಾರ್ಥೇ ॥** (ಬೃಹ ೨-೪-೧೦)

ಮೊದಲೇ ಇದ್ದ ವೇದವು, ಮನುಷ್ಯನ ನಿಃಶ್ವಾಸದಂತೆ, ಪರಮಾತ್ಮನಿಂದ ಅಭಿವ್ಯಕ್ತವಾಯಿತು. ಅದು ಯಾವನೊಬ್ಬ ಪುರುಷನ ಬುದ್ಧಿಪ್ರಯತ್ನಗಳಿಂದ ರಚಿತವಾದದ್ದಲ್ಲ. ಆದ್ದರಿಂದ ಅದು ಅನ್ಯನಿರಪೇಕ್ಷವಾಗಿ ಪ್ರಮಾಣವಾಗುತ್ತದೆ.

ಟಿಪ್ಪಣಿ : 'ತಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸಃ' ಎಂಬ ಉಪನಿಷದ್ವಚನದ ವಿವರಣೆ ಇದು.

**೨. ನ ಹಿ ಈದೃಶಸ್ಯ ಶಾಸ್ತ್ರಸ್ಯ ಋಗ್ವೇದಾದಿ ಲಕ್ಷಣಸ್ಯ ಸರ್ವಜ್ಞಗುಣಾನ್ವಿತಸ್ಯ ಸರ್ವಜ್ಞಾದನ್ಯತಃ ಸಂಭವೋಽಸ್ತಿ।** (ಸೂ. ಭಾ. ೧-೧-೩)

ಈ ಪ್ರಕಾರವಾಗಿ ಸರ್ವಾರ್ಥಗಳನ್ನು ತಿಳಿಸಿಕೊಡುವ ಶಾಸ್ತ್ರವಾದ ಋಗ್ವೇದಾದಿ ವೇದರಾಶಿಯು ಸ್ವತಃ ಸರ್ವಜ್ಞವಾಗಿಯೇ ಇದೆ. ಇಂತಹ ಗ್ರಂಥವು ಸರ್ವಜ್ಞನಾದ ಈಶ್ವರನಿಗಿಂತ ಬೇರೆಯವರಿಂದ ಎಂದಿಗೂ ಬರುವ ಸಂಭವವಿಲ್ಲ.

ಈ ರೀತಿಯಾಗಿ ಇತರ ದರ್ಶನಕಾರರ ನುಡಿಗಳನ್ನು ವಿಪುಲವಾಗಿ ಉದಾಹರಿಸಬಹುದು. ಅದಿರಲಿ, ಸ್ವತಂತ್ರವಾಗಿ ಸ್ವಲ್ಪ ವಿಚಾರಮಾಡೋಣ. ಎಲ್ಲ ದರ್ಶನಕಾರರ ಮತ್ತು ಮತಸ್ಥಾಪಕರ ಉಪದೇಶಗಳು ಕೇವಲ ಮನುಷ್ಯರಿಗಾಗಿ, ಇತರ ಪ್ರಾಣಿಗಳಿಗಾಗಿ ಅಲ್ಲ. ಮನುಷ್ಯನು ತನ್ನ ಬುದ್ಧಿಸಾಮರ್ಥ್ಯದಿಂದ ಎಲ್ಲ ಪ್ರಾಣಿಗಳನ್ನೂ ವಶಪಡಿಸಿಕೊಳ್ಳಬಲ್ಲನು. ಸಾರಾಸಾರಗಳ ವಿವೇಚನೆ, ತೀಕ್ಷ್ಣವಾದ ಬುದ್ಧಿಶಕ್ತಿ, ತನ್ನ ಜೀವನವನ್ನು ರೂಪಿಸಿಕೊಳ್ಳುವ ಪ್ರಯತ್ನ, ಭವಿಷ್ಯ ಚಿಂತನೆ, ನೂತನ ವಸ್ತುಗಳ ಆವಿಷ್ಕಾರ, ನ್ಯಾಯ- ಅನ್ಯಾಯಗಳನ್ನು ಗ್ರಹಿಸುವ ಸಾಮರ್ಥ್ಯ ಇವೆಲ್ಲವು ಮನುಷ್ಯನಲ್ಲಿರುವ ಅಸಾಧಾರಣ ವಿಶೇಷಗಳು. ಕೈ ಕಾಲುಗಳ ರಚನೆಯೂ ವಿಶಿಷ್ಟವಾದದ್ದು. ಎಲ್ಲದಕ್ಕಿಂತ ಹೆಚ್ಚಾಗಿ ಮಾತನಾಡುವ ಶಕ್ತಿಯಿರುವುದು ಮನುಷ್ಯನನ್ನು ಸರ್ವೋತ್ತಮನನ್ನಾಗಿ ಮಾಡಿದೆ. ಈಗಿರುವ ಪ್ರಾಣಿ ಪ್ರಪಂಚದಲ್ಲಿ ಮನುಷ್ಯನ ಸೃಷ್ಟಿ ಪೂರ್ಣವಾದದ್ದು. ಇದರಲ್ಲಿ ಎರಡು ಮಾತಿಲ್ಲ; ಇದು ನಿರ್ವಿವಾದವಾದದ್ದು.

ಇನ್ನು ಈಶ್ವರನಿದ್ದಾನೆ. ಅವನೇ ಈ ಜಗತ್ತನ್ನು ನಿರ್ಮಿಸಿದ್ದಾನೆ. ಮನುಷ್ಯ ಶರೀರವೆಂಬ ಒಂದು ಅದ್ಭುತಯಂತ್ರವನ್ನು ಸೃಷ್ಟಿಸಿ ಅದರಲ್ಲಿ ಎಲ್ಲ ಬಗೆಯ ಬುದ್ಧಿ ಸಾಮರ್ಥ್ಯವನ್ನು ತುಂಬಿದವನು ಆತನೇ. ನಮ್ಮ ಜನ್ಮಾಂತರದ ಕರ್ಮಫಲವಾಗಿ ಸುಖ ದುಃಖಗಳನ್ನು ಅನುಭವಿಸುತ್ತಿದ್ದೇವೆ. ಮನುಷ್ಯನ ವಾಕ್ ಶಕ್ತಿಯೂ ಈಶ್ವರನ ಕೃಪೆಯಿಂದ ಬಂದದ್ದು ಎಂಬುದು ಆಸ್ತಿಕ ಜನರ ದೃಢವಿಶ್ವಾಸ. ಇದೇನೂ ಮೂಢನಂಬಿಕೆಯಲ್ಲ. ಸಾಧಾರವಾದದ್ದು. ಇದನ್ನು ಸ್ಥಾಪಿಸುವುದು ಈ ಲೇಖನದ ಉದ್ದೇಶವಲ್ಲ. ಇಷ್ಟಾದ ಮೇಲೆ ಮುಂದಿನ ವಿಚಾರ.

ಮಗು ಹುಟ್ಟುವುದಕ್ಕೆ ಮೊದಲು ತಾಯಿಯ ಸ್ತನಗಳಲ್ಲಿ ಹಾಲು ತುಂಬಿರುತ್ತದೆ. ಮುಂದೆ ಜನಿಸುವ ಮಗುವಿನ ಹಸಿವು - ತೃಷೆಗಳಿಗೆ ಅದು ಔಷಧ. ಮನುಷ್ಯನು ಹುಟ್ಟುವುದಕ್ಕೆ ಮೊದಲೇ ಅನ್ನ ನೀರುಗಳ ಸೃಷ್ಟಿಯಾಗಿರುತ್ತದೆಯೆಂದು

ತೈತ್ತಿರೀಯೋಪನಿಷತ್ತು ಹೇಳಿದೆ. "**ಓಷಧೀಭ್ಯೋऽನ್ನಮ್। ಅನ್ನಾತ್ಪುರುಷಃ**" ಅನ್ನಕ್ಕಿಂತ ಮೊದಲೇ ಅನ್ನದ ನಿರ್ಮಾಣಕ್ಕಾಗಿ ನೀರು ಸಿದ್ಧವಾಗಿರುತ್ತದೆ. "**ಅಗ್ನೇರಾಪಃ**". ಈ ಶರೀರಯಂತ್ರದ ಚಾಲನೆಗಾಗಿ ಬೇಕಾದ ಇಂಧನವನ್ನು ಮೊದಲೇ ನಿರ್ಮಿಸಿಟ್ಟ ಈಶ್ವರನು ಬಹಳ ಜಾಣನಾಗಿರಬೇಕು ! ಮನುಷ್ಯನ ಬಟ್ಟೆಗಾಗಿ ಮಳೆಯ ನಿರ್ಮಾಣಕ್ಕಾಗಿ, ರೋಗ ಬಂದರೆ ಔಷಧಕ್ಕಾಗಿ ಹತ್ತಿಯ ಗಿಡ, ಮರ, ಮೂಲಿಕೆಗಳನ್ನೂ ಸೃಷ್ಟಿಸಿ ಬಿಟ್ಟಿರುತ್ತಾನೆ. "**ಪೃಥಿವ್ಯಾ ಔಷಧಯಃ**" ಈ ಔಷಧಿಗಳನ್ನು ಹೇಗೆ ಉಪಯೋಗಿಸಿ ಕೊಳ್ಳಬಹುದೆಂದು ತಿಳಿಯಲು ಬುದ್ಧಿಯನ್ನೂ ತಲೆಯಲ್ಲಿ ತುಂಬಿದ್ದಾನೆ ಆ ಬುದ್ಧಿಶಾಲಿ ದೇವರು. ಎಲ್ಲ ಪ್ರಾಣಿಗಳಿಗಿಂತ ಮನುಷ್ಯನ ಹೆಚ್ಚುಗಾರಿಕೆಯಿರುವುದು ಅವನ ವಾಕ್‌ಶಕ್ತಿಯಲ್ಲಿ. ಅದಿಲ್ಲದಿದ್ದರೆ ಅವನ ಬುದ್ಧಿಶಕ್ತಿಯೂ ವ್ಯರ್ಥವಾಗುತ್ತಿತ್ತು. ಅವನ ಜ್ಞಾನಶಕ್ತಿಯು ಬೆಳೆಯುತ್ತಲೂ ಇರಲಿಲ್ಲ. ಉಪದೇಶ, ಗ್ರಂಥಗಳಿಂದಲೇ ಹಿಂದಿನವರ ಜ್ಞಾನ ಮುಂದಕ್ಕೆ ಹರಿದು ಬರುತ್ತದೆ. ಚಿಕ್ಕದಾದ ಜ್ಞಾನದ ಕಾಲುವೆ ಮಹಾನದಿಯಾಗುತ್ತದೆ. ಅ, ಆ, ಇ. ಈ ಇತ್ಯಾದಿ ವರ್ಣಗಳನ್ನು ಸ್ಫುಟವಾಗಿ ಉಚ್ಚರಿಸುವ ಶಕ್ತಿಯನ್ನು ಕೊಟ್ಟವನು ಅದಕ್ಕೆ ಆಹಾರವಾಗಿ ಯಾವುದನ್ನು ನಿರ್ಮಿಸಿದ? ಭಾಷೆಯನ್ನು ಎಂದು ಒಪ್ಪಿಕೊಳ್ಳಲೇಬೇಕು.

ಆದಿಯಲ್ಲಿ ಮಾನವನು ಭಾಷೆಯನ್ನು ನಿರ್ಮಿಸಿಕೊಂಡನೆಂಬುದು ವಿಚಾರಮಥನವನ್ನೆಂದಿಗೂ ತಡೆದುಕೊಳ್ಳದು. ಶಬ್ದವು ವರ್ಣಾತ್ಮಕ, ಧ್ವನ್ಯಾತ್ಮಕ ಎಂದು ಎರಡು ವಿಧ. ಅ, ಆ, ಇ, ಈ ಮುಂತಾದ ಸ್ಫುಟೋಚ್ಚಾರಣೆಯುಳ್ಳದ್ದು ವರ್ಣಾತ್ಮಕ. ವರ್ಣೋಚ್ಚಾರಣೆಯು ಇನ್ನೊಬ್ಬರ ಉಚ್ಚಾರಣೆಯನ್ನು ಕೇಳಿಯೇ ಬರತಕ್ಕದ್ದು, ಸ್ವತಃ ಬರತಕ್ಕದ್ದಲ್ಲ. ಹಕ್ಕಿಗಳೂ, ಇತರ ತಿರ್ಯಗ್ ಜಂತುಗಳೂ ವಿವಿಧ ಧ್ವನಿಯನ್ನು ಮಾಡಬಲ್ಲವೇ ಹೊರತು ವರ್ಣವನ್ನಲ್ಲ. ನಾವು ಉಚ್ಚರಿಸುವುದನ್ನು ಕೇಳಿದರೂ ವಾಗಿಂದ್ರಿಯದ ಪಾಟವವಿಲ್ಲದ್ದರಿಂದ ಅಕ್ಷರಗಳನ್ನು ಉಚ್ಚರಿಸಲಾರವು. ಗಿಳಿಗಳಿಗೆ ಸ್ವಲ್ಪ ಇಂದ್ರಿಯಪಾಟವ ಉಂಟು. ಹೇಳಿಕೊಟ್ಟರೆ ಕೆಲವು ಅಕ್ಷರಗಳನ್ನು ಉಚ್ಚರಿಸಬಲ್ಲವು. ಹೇಳಿಕೊಡದಿದ್ದರೆ ಇಲ್ಲ. ಮನುಷ್ಯರಲ್ಲಿಯೂ ಹುಟ್ಟುಕಿವುಡರಿಗೆ ಮಾತಾಡಲು ಬರುವುದಿಲ್ಲ. ಅವರಿಗೆ ವಾಗಿಂದ್ರಿಯದ ಪಾಟವವಿದ್ದರೂ ನಮ್ಮ ಉಚ್ಚಾರಣೆಯನ್ನು ಕೇಳಲು ಸಮರ್ಥರಲ್ಲವಾದ್ದರಿಂದ ಮಾತಾಡಲು ಬರುವುದಿಲ್ಲ. ಇದರಿಂದ ಏನು ಸಿದ್ಧವಾಗುತ್ತದೆಯೆಂದರೆ: ಸೃಷ್ಟಿಯ ಆದಿಯಲ್ಲಿ ಒಂದಾನೊಂದು ಭಾಷೆಯೇ ಇಲ್ಲದೆ ಹೋಗಿದ್ದರೆ, ಮಾನವನಿಗೆ ವರ್ಣದ ಸ್ವರೂಪವೂ ಸಹ ಗೊತ್ತಿರುತ್ತಿರಲಿಲ್ಲ. ಅಂತಹ ಮಾನವರು ಭಾಷೆಯನ್ನು ನಿರ್ಮಿಸಿಕೊಳ್ಳುವುದು ಹೇಗೆ? 'ನಮ್ಮ ವ್ಯವಹಾರಕ್ಕಾಗಿ ನಮಗೊಂದು ಭಾಷೆ ಬೇಕು' ಎಂಬ ಆಲೋಚನೆಯಾದರೂ ಹೇಗೆ ಬಂದೀತು?

ಅವರು ಯಾವ ಉದ್ದೇಶದಿಂದ ಒಂದು ಕಡೆ ಸೇರಿ 'ಈ ಶಬ್ದಕ್ಕೆ ಇದು ಅರ್ಥ, ಆ ಶಬ್ದಕ್ಕೆ ಅದು ಅರ್ಥ' ಎಂದು ನಿರ್ಣಯಿಸಿಕೊಳ್ಳುತ್ತಾರೆ? ಗುರಿಯೇ ಗೊತ್ತಿಲ್ಲದವರು ಸಭೆ ಸೇರುವುದು ಹೇಗೆ? ಅಕ್ಷರೋಚ್ಚಾರಣೆಯೇ ಬಾರದವರು 'ಈ ಶಬ್ದಕ್ಕೆ ಈ ಅರ್ಥ' ಎಂದು ನಿರ್ಣಯಿಸುವುದು ಹೇಗೆ? ಕೇವಲ ಮಾನಸಿಕ ಭಾವನೆಗಳಾದ ಕೋಪ, ಕಾಮ, ಅಸೂಯೆ, ದಯೆ ಮುಂತಾದವನ್ನು ಸಂಕೇತಿಸುವುದು ಹೇಗೆ?

ಆದ್ದರಿಂದ ಅನ್ನ, ನೀರನ್ನು ಸೃಷ್ಟಿಸಿದಂತೆ ಈಶ್ವರನು ಮಾನವನ ಉಪಯೋಗಕ್ಕಾಗಿ ಭಾಷೆಯೊಂದನ್ನು ಕಲ್ಪಿಸಿಕೊಟ್ಟನೆಂದು ಒಪ್ಪಲೇಬೇಕು. ಆ ಒಂದು ಭಾಷೆ ಕಾಲಾಂತರದಲ್ಲಿ ಕವಲು ಕವಲಾಗಿ ನೂರಾರು, ಸಾವಿರಾರು ಭಾಷೆಗಳಾಗಿರಬೇಕು. ಆದ್ದರಿಂದ ದೇವರು ಆ ಯಾವ ಭಾಷೆಯಲ್ಲಿ ವಿಶ್ವಸೃಷ್ಟಿಯ ಸಂಕಲ್ಪವನ್ನು ತಳೆದನೋ ಅದು ದೈವೀಭಾಷೆ, ವೇದ ಭಾಷೆ ; ಪ್ರಾಚೀನತಮ ಭಾಷೆ. ''**ದೈವೀ ವಾಗ್‌ವ್ಯವಕೀರ್ಣೇಯಂ**'' ಎಂದು ಭರ್ತೃಹರಿ ಹೇಳಿದ್ದಾನೆ. '**ಸಂಸ್ಕೃತಂ ನಾಮ ದೈವೀವಾಕ್**' ಎಂದಿದ್ದಾನೆ ದಂಡಿ.

ಅನಾದಿಯಾದ ಕರ್ಮದ ಫಲವನ್ನು ಅನುಭವಿಸುವುದಕ್ಕಾಗಿ ಮನುಷ್ಯ ಶರೀರದ ನಿರ್ಮಾಣವಾಯಿತು. ''**ಭೋಗಾಯತನಂ ಶರೀರಂ**'. ಸುಖದುಃಖಗಳ ಭೋಗಕ್ಕಾಗಿ ಅನ್ನಪಾನಾದಿಗಳ ವ್ಯವಸ್ಥೆಯಾಯಿತು. ತಂದೆಯು ಮಕ್ಕಳಿಗೆ ಅನ್ನವಸ್ತ್ರಾದಿಗಳನ್ನೊದಗಿಸಿ ಅನಂತರ ಅವರಿಗೆ ಹಿತೋಪದೇಶ ಮಾಡುತ್ತಾನೆ. ಅಂತೆಯೇ ಈಶ್ವರನು ''ಎಲೈ ಜನರೆ, ಈ ಕರ್ಮಫಲವನ್ನು ಬಹುವರ್ಷಗಳಿಂದ ಅನುಭವಿಸುತ್ತಿದ್ದೀರಿ. ನೀವು ಕಷ್ಟವನ್ನು ತಪ್ಪಿಸಿಕೊಳ್ಳಬೇಕಾದರೆ ಈ ದಾರಿಯಲ್ಲಿ ಹೋಗಿರಿ. ಈ ಕಾರ್ಯಗಳನ್ನು ಮಾಡಬೇಡಿರಿ. ಸುಖದ ಅಪೇಕ್ಷೆ ಹೆಚ್ಚಾಗಿದ್ದರೆ ಸನ್ಮಾರ್ಗದಲ್ಲಿ ನಡೆಯಿರಿ. ಈ ಎಲ್ಲ ಗೋಜನ್ನು ತಪ್ಪಿಸಿಕೊಂಡು ನಿತ್ಯಾನಂದವನ್ನು ಬಯಸುವಿರಾದರೆ ಇನ್ನೊಂದು ಮಾರ್ಗದಲ್ಲಿ ಹೋಗಬೇಕು'' ಎಂದು ಬೋಧಿಸುವುದಕ್ಕಾಗಿ ವೇದಗಳನ್ನು ಆವಿರ್ಭವಿಸಿದನು. ಮಾನವನ ವ್ಯವಹಾರಕ್ಕಾಗಿ ಭಾಷೆಯೂ, ಹಿತಬೋಧನೆಯೂ ವೇದದಿಂದ ಲಭಿಸಿತು.

ಅದೇ ಸಂಸ್ಕೃತ ಭಾಷೆ, ಅದೇ ವೇದ.

## ವೇದವು ಈಶ್ವರಬೋಧಿತ

ಜಗತ್ತಿನಲ್ಲಿ ಸಾವಿರಾರು ಭಾಷೆಗಳಿರುವಾಗ, ಬೈಬಲ್, ಖುರಾನ್ ಮುಂತಾದ ಮತಗ್ರಂಥಗಳಿರುವಾಗ, ವೇದಭಾಷೆಯೇ ದೇವಭಾಷೆಯೆಂದೂ, ವೇದವೇ ಈಶ್ವರ ಬೋಧಿತವೆಂದೂ ಸಿದ್ಧವಾಗುವುದು ಹೇಗೆ? ಎಂಬ ಪ್ರಶ್ನೆ ಸಹಜವಾಗಿ ಹುಟ್ಟುತ್ತದೆ.

ಅದಕ್ಕೆ ಸಂಕ್ಷೇಪವಾದ ಉತ್ತರ ಇದು. ವೇದವು ಈಶ್ವರಬೋಧಿತವೆಂಬ ತೀರ್ಪಿಗೆ ನಾವು ಬಂದರೆ, ಆಗ ವೇದಭಾಷೆಯು ದೇವಭಾಷೆಯೆಂದು ತಾನಾಗಿಯೇ ಸಿದ್ಧವಾಗುತ್ತದೆ. ವಾಕ್ಯಪದೀಯದಲ್ಲಿ ಭರ್ತೃಹರಿಯೂ, ಕಾವ್ಯಾದರ್ಶದಲ್ಲಿ ದಂಡಿಯೂ ಸಂಸ್ಕೃತ ಭಾಷೆಯನ್ನು ದೈವೀವಾಕ್ ಎಂದು ಕರೆದಿದ್ದಾರೆಂಬುದನ್ನು ಹಿಂದೆ ಉಲ್ಲೇಖಿಸಲಾಗಿದೆ. ಮನುಷ್ಯ ಜಾತಿಯು ಹುಟ್ಟಿದಾಗಲೇ ಅನ್ನ, ನೀರು, ಗಾಳಿ ಇದ್ದೇ ಇತ್ತೆಂದು ಒಪ್ಪಬೇಕಷ್ಟೆ. ಇಲ್ಲದಿದ್ದರೆ ಮನುಷ್ಯನು ಜೀವಿಸುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಹಾಗೆಯೇ ಭಾಷೆಯೊಂದು ವ್ಯವಹಾರಕ್ಕಾಗಿ ಇದ್ದೇ ಇರಬೇಕು. ಎಲ್ಲರೂ ಮೂಕರಾಗಿದ್ದರೆ ಭಾಷೆಯ ನಿರ್ಮಾಣವು ಶಕ್ಯವಿಲ್ಲ - ಎಂಬುದನ್ನು ಹಿಂದೆ ಬರೆಯಲಾಗಿದೆ. ಅಂತಹ ಆದಿಭಾಷೆ ಯಾವುದೆಂಬುದನ್ನೀಗ ವಿಚಾರ ಮಾಡೋಣ. ಸಂಹಿತೆ, ಬ್ರಾಹ್ಮಣ, ಉಪನಿಷದ್ರೂಪವಾದ ಚತುರ್ವೇದ ಸಾಹಿತ್ಯವು ಅಪಾರವಾದದ್ದು. ಅದರಲ್ಲಿ ನೂರಾರು ಶಾಖೆಗಳು ಈಗ ಲುಪ್ತವಾಗಿದ್ದರೂ ಉಪಲಬ್ಧವಾದ ವೇದರಾಶಿ ಬಹುವಿಶಾಲವಾಗಿಯೇ ಇದೆ. ಇವೆಲ್ಲದರ ಕರ್ತೃ ಯಾರೆಂಬುದು ತಿಳಿಯದು. ಋಷಿಗಳೆಲ್ಲರೂ ಮಂತ್ರದ್ರಷ್ಟಾರರೇ ಹೊರತು ಕರ್ತಾರರಲ್ಲ. ಋಷಿಗಳು ತಪೋಬಲದಿಂದ ಸಮಾಧಿ ಸ್ಥಿತಿಯಲ್ಲಿದ್ದಾಗ ಬೇರೆ ಬೇರೆ ವೇದವಚನಗಳು ತಾನಾಗಿ ಇವರ ಮುಖದಿಂದ ಹೊರಬಂದವು. ಬುದ್ಧಿಪೂರ್ವಕವಾಗಿ ಇವುಗಳನ್ನು ಯಾರೂ ರಚಿಸಲಿಲ್ಲ. ವೇದವು ಅಪೌರುಷೇಯವೆಂದು ಸಮಸ್ತ ವೈದಿಕ ದರ್ಶನಕಾರರೂ ಏಕಕಂಠದಿಂದ ಒಪ್ಪಿಕೊಂಡಿದ್ದಾರೆ. ಅಪೌರುಷೇಯವೆಂದರೆ ನಮ್ಮಂತಹ ಜೀವಾತ್ಮರಿಂದ ರಚಿತವಲ್ಲವೆಂದರ್ಥ. ಈಶ್ವರನಿರ್ಮಿತವಾಗಿರಬಹುದು ಅಥವಾ ಶಾಶ್ವತವಾಗಿ ಮೊದಲಿನಿಂದ ಇದ್ದಿರಬಹುದು. ಮನುಷ್ಯರಿಗೆ ಎಷ್ಟಾದರೂ ಭ್ರಮೆ, ಪ್ರಮಾದಾದಿ ದೋಷಗಳಿರುವುದರಿಂದ ವೇದವು ಸರ್ವತ್ರ ಪ್ರಮಾಣವಾಗದೇ ಹೋದೀತಾದ್ದರಿಂದ ಸರ್ವಜ್ಞನಾದ ಈಶ್ವರನೇ ವೇದರಾಶಿಗೆ ಕಾರಣನೆಂದು ಇದರ ಅಭಿಪ್ರಾಯ. ಇದನ್ನು ಒಪ್ಪದೇ ಹೋದರೆ ಶ್ರೀ ಶಂಕರಾಚಾರ್ಯರೇ ಮೊದಲಾದ ಆಚಾರ್ಯ ಪುರುಷರೂ, ಕಠೋರ ತಾರ್ಕಿಕರೂ, ಸಕಲ ಪ್ರಾಚೀನ ವಿದ್ವಾಂಸರೂ ಮೌಢ್ಯಕ್ಕೆ ಒಳಗಾಗಿದ್ದರೆಂದು ಹೇಳಬೇಕಾದೀತು. ಯಾಸ್ಕ, ಪಾಣಿನಿ, ಪತಂಜಲಿ, ಕಣಾದ, ಗೌತಮಾದಿ ಋಷಿಗಳಿಗೂ ಮೌಢ್ಯವು ಕವಿದಿತ್ತೆಂದು ತಿಳಿಯಬೇಕಾದೀತು.

ಅಲ್ಲದೆ ಒಬ್ಬ ವ್ಯಕ್ತಿಯಿಂದ ಈ ಅಪಾರ ವೇದರಾಶಿಯನ್ನು ರಚಿಸಲು ಶಕ್ಯವಿಲ್ಲ. ಹಲವರು ಕರ್ತೃಗಳಾಗಿದ್ದರೆ ಏಕಕಾಲದಲ್ಲಿ ಏಕದೇಶದಲ್ಲಿ ರಚಿತವಾದದ್ದಲ್ಲ. ಆಗ ಸಮಸ್ತ ವೇದವಾಕ್ಯಗಳಿಗೂ ಏಕವಾಕ್ಯತೆ ಹೇಗೆ ಬರುತ್ತದೆ? ಅಭಿಪ್ರಾಯ ಭೇದಗಳು ಏಕೆ ಬರಲಿಲ್ಲ? ಎಂಬುದಕ್ಕೆ ಸರಿಯಾದ ಉತ್ತರವನ್ನು ಹೇಳಬೇಕಾದೀತು. ಇರಲಿ,

ಇದೆಲ್ಲವೂ ಪ್ರಾಚೀನ ವಿಚಾರಕ್ರಮವಾಯಿತು. ಆಧುನಿಕ ದೃಷ್ಟಿಯಿಂದ ನೋಡೋಣ.

ವೇದಗಳಲ್ಲಿ ಋಗ್ವೇದವು ಅತ್ಯಂತ ಪ್ರಾಚೀನವೆಂದು ಈಗಿನ ಸಂಶೋಧಕರು ಹೇಳುತ್ತಾರೆ. ಅದರ ನಿರ್ಮಾಣ ಕಾಲವು ಕ್ರಿ. ಪೂ. ಒಂದು ಸಾವಿರ ವರ್ಷಗಳಿಂದ ಹಿಂದಕ್ಕೆಂದು ಕೆಲವರು, ಕ್ರಿ. ಪೂ. ಆರುಸಾವಿರ ವರ್ಷಗಳೆಂದು ಕೆಲವರು, ಹನ್ನೆರಡು ಸಾವಿರ ವರ್ಷಗಳಷ್ಟು ಪೂರ್ವದಲ್ಲಿ ಎಂದು ಮತ್ತಿತರರು ಹೇಳುತ್ತಿದ್ದಾರೆ. ಯಾರಿಗೂ ನಿರ್ಧರಿಸಿ ಹೇಳುವುದಕ್ಕೆ ಸಾಧ್ಯವಾಗಿಲ್ಲ. ಇದೆಲ್ಲವೂ ಬರಿಯ ಊಹೆ. ಅದು ಹೇಗಿದ್ದರೂ ಈ ಜಗತ್ತಿನಲ್ಲಿ **ವೇದರಾಶಿಯು ಅತ್ಯಂತ ಪ್ರಾಚೀನ ಸಾಹಿತ್ಯವೆಂಬುದು ಇವರೆಲ್ಲರಿಗೂ ಸಂಮತ. ಇಷ್ಟು ಪ್ರಾಚೀನವಾದ ಗ್ರಂಥವು ಜಗತ್ತಿನ ಯಾವ ಭಾಷೆಯಲ್ಲಿಯೂ ದೊರಕಿಲ್ಲ. ಇದರ ಮೇಲೆ ಹುಟ್ಟುವ ಈ ಪ್ರಶ್ನೆಗಳಿಗೆ ಸರಿಯಾದ ಉತ್ತರಬೇಕು.**

ವೇದಗಳಲ್ಲಿರುವ ಕೆಲವು ಕಠಿಣ ಶಬ್ದಗಳನ್ನು ಸಂಗ್ರಹಿಸಿ ನಿಘಂಟುವನ್ನು ಪ್ರಾಚೀನ ಋಷಿಗಳು ರಚಿಸಿದ್ದಾರೆ. ಒಂದೇ ಅರ್ಥವನ್ನು ಕೊಡುವ ಪರ್ಯಾಯ ಪದಗಳನ್ನು ಗುಂಪುಗುಂಪಾಗಿ ವಿಂಗಡಿಸಲಾಗಿದೆ. ಅವುಗಳಿಗೆ ನಿರುಕ್ತಿಯನ್ನು ಹೇಳಲು ಯಾಸ್ಕರು ನಿರುಕ್ತವನ್ನು ರಚಿಸಿದ್ದಾರೆ. ಕೆಲವೇ ನಿದರ್ಶನಗಳನ್ನು ಕೆಳಗೆ ಬರೆಯಲಾಗುವುದು. ಒಂದು ಭಾಷೆಯಲ್ಲಿ ಸಮನಾರ್ಥಕವಾದ ಅಷ್ಟು ಪದಗಳ ರಾಶಿ ಇರಲು ಕಾರಣವೇನೆಂಬುದು ಮೊದಲನೆಯ ಪ್ರಶ್ನೆ.

I ) ೧. **ಉದಕನಾಮಾನ್ಯುತ್ತರಾಣ್ಯೇಕಶತಮ್।** ನೀರಿನ ಪರ್ಯಾಯ ಪದಗಳು ಮುಂದೆ ಹೇಳುವ ೧೦೧ ಶಬ್ದಗಳು.

**೨. ರಾತ್ರಿ ನಾಮಾನ್ಯುತ್ತರಾಣಿ ತ್ರಯೋವಿಂಶತಿಃ।** ರಾತ್ರಿ ವಾಚಕಗಳು ೨೩.

**೩. ವಾಕ್‌ನಾಮಾನ್ಯುತ್ತರಾಣಿ ಸಪ್ತಪಂಚಾಶತ್ ।** ವಾಕ್ಕಿನ ಹೆಸರುಗಳು ೫೭

**೪. ಅನ್ನನಾಮಾನ್ಯುತ್ತರಾಣಿ ಅಷ್ಟಾವಿಂಶತಿಃ।** ಅನ್ನದ ಹೆಸರುಗಳು ೨೮.

**೫. ಗೃಹನಾಮಾನ್ಯುತ್ತರಾಣಿ ದ್ವಾವಿಂಶತಿಃ ।** ಮನೆ ಎಂಬ ಅರ್ಥದಲ್ಲಿರುವ ಶಬ್ದಗಳು ೨೨.

ಕೆಲವೇ ಉದಾಹರಣೆಗಳಿವು. ಜಗತ್ತಿನ ಯಾವ ಭಾಷೆಯಲ್ಲಿಯೂ ಇಲ್ಲದಷ್ಟು ಪರ್ಯಾಯ ಪದಗಳು ವೇದದಲ್ಲಿ - ಸಂಸ್ಕೃತ ಭಾಷೆಯಲ್ಲಿ ಇರಲು ಕಾರಣವೇನು? ಯಾವ ಉದ್ದೇಶಕ್ಕಾಗಿ ಆದಿಮಾನವನು ತಾನು ನಿರ್ಮಿಸಿಕೊಂಡ ಭಾಷೆಯಲ್ಲಿ ಈ ಪ್ರಕಾರವಾಗಿ ಶಬ್ದರಾಶಿಗಳನ್ನು ಪೇರಿಸಿಕೊಂಡಿದ್ದಾನೆ? ಸಂಸ್ಕೃತದಲ್ಲಿ ಸುಮಾರು

ಎರಡು ಸಾವಿರ ಧಾತುಗಳಿವೆ. ಇಷ್ಟು ಧಾತುಗಳು ಮನುಷ್ಯ ನಿರ್ಮಿತ ಭಾಷೆಯಲ್ಲಿರುವುದು ಶಕ್ಯವೆ?

II ) ಕೆಲವು ವೈದಿಕ ಶಬ್ದಗಳಿಗೆ ಅರ್ಥವೇ ಆಗುವುದಿಲ್ಲವೆಂದು ಕೆಲವು ಪ್ರಾಚೀನ ಋಷಿಗಳು ಹೇಳುತ್ತಿದ್ದರಂತೆ. ಯಾಸ್ಕರು ಅದಕ್ಕೆ ಉದಾಹರಿಸುವ ಶಬ್ದಗಳು ಇವು - ಅಬ್ಯಗ್, ಯಾದೃಶ್ಮಿನ್, ಜಾರಯಾಯಿ, ಕಾಣುಕಾ.

ವ್ಯಾಕರಣ ಮಹಾಭಾಷ್ಯಕಾರರಾದ ಪತಂಜಲಿಮುನಿಗಳು ಉದಾಹರಿಸಿದ ಶಬ್ದಗಳು ಇವು - ಜರ್ಭರೀ, ಶರ್ಫರೀ, ತುರ್ಫರೀತು.

ತಾವು ರಚಿಸಿಕೊಂಡ ಶಬ್ದಗಳ ಅರ್ಥವು ತಮಗೇ ಗೊತ್ತಿಲ್ಲದೆ ಹೋಯಿತೆ?

III ) ವೇದದಲ್ಲಿ ಅನುಷ್ಟುಪ್, ತ್ರಿಷ್ಟುಪ್, ಗಾಯತ್ರೀ, ಉಷ್ಣಿಕ್ - ಮುಂತಾದ ನಾನಾ ಛಂದಸ್ಸುಗಳನ್ನು ಬಳಸಿದ್ದಾರೆ. ಉಪಮಾ, ಉತ್ಪ್ರೇಕ್ಷೆ, ರೂಪಕ ಇತ್ಯಾದಿ ಅಲಂಕಾರಗಳು ಯಥೇಷ್ಟವಾಗಿ ದೊರಕುತ್ತವೆ. ಇದರಿಂದ ಆ ಕಾಲದಲ್ಲಿ ಭಾಷೆಯು ಚೆನ್ನಾಗಿ ಬೆಳೆದಿತ್ತೆಂದು ಸ್ಪಷ್ಟವಾಗುತ್ತದೆ. ವೇದವನ್ನು ರಚಿಸಿದವರು ಇತರ ಸಾಹಿತ್ಯ ಗ್ರಂಥಗಳನ್ನೇಕೆ ರಚಿಸಲಿಲ್ಲ? ಅವುಗಳ ಹೆಸರೂ ಸಹ ಗೊತ್ತಿಲ್ಲದೇ ಹೋಗಿರುವುದಕ್ಕೆ ನಿಮಿತ್ತವೇನು?

IV ) ಮನುಷ್ಯನು ತಾನು ನಿತ್ಯವೂ ಬಳಸುವ ವ್ಯಾವಹಾರಿಕ ಭಾಷೆಯಲ್ಲಿ ಸಾಹಿತ್ಯವನ್ನು ರಚಿಸುತ್ತಾನೆ. ವೇದದಲ್ಲಾದರೋ ಶಬ್ದಗಳಿಗೆ ಉದಾತ್ತ, ಅನುದಾತ್ತ, ಸ್ವರಿತ ಇತ್ಯಾದಿಯಾಗಿ ಒಂಬತ್ತು ಬಗೆಯ ಸ್ವರಗಳಿವೆ. ಇವು ಮನಬಂದಂತೆ ಬಳಸತಕ್ಕವಲ್ಲ. ಯಾವ ಯಾವ ಶಬ್ದಕ್ಕೆ ಎಲ್ಲೆಲ್ಲಿ ಈ ಸ್ವರಗಳು ಬರಬೇಕೆಂಬ ನಿಯಮಗಳುಂಟು. ಆದಿಮಾನವನು ತನ್ನ ವ್ಯವಹಾರದಲ್ಲಿ ಮಾತಾಡುವಾಗ ಈ ಸ್ವರಗಳನ್ನು ಬಳಸುತ್ತಿದ್ದನೇ? ಇದು ಸರ್ವಥಾ ಸಾಧ್ಯವಿಲ್ಲದ್ದು. ಜಗತ್ತಿನ ಯಾವ ಭಾಷೆಯಲ್ಲಿ ಈ ರೀತಿಯಾದ ಸ್ವರಗಳುಂಟು? ತನಗೆ ಗೊತ್ತಿಲ್ಲದ ಸ್ವರಗಳು ನಿಯಮ ಬದ್ಧವಾಗಿ ವೇದದಲ್ಲಿ ಹೇಗೆ ಬಂದವು? ಇದು ಪ್ರಬಲವಾದ ಪ್ರಶ್ನೆ. ಈ ಪ್ರಶ್ನೆಯನ್ನು ಯಾವ ಸಂಶೋಧಕನೂ ಎತ್ತಿಲ್ಲ. ಎತ್ತಿದರೆ ಅವನ ಗಂಟಲಿಗೇ ಗಾಳವಾಗಿ ಬಿಡುತ್ತದೆ. ವೇದದಲ್ಲಿ ಸ್ವರಿತಾದಿ ಸ್ವರಗಳು ಹೇಗೆ ಬಂದವು? ಏಕೆ ಬಂದವು? ಯಾರಿಂದ ಬಂದವು?

V ) ವೇದದಲ್ಲಿ ಆಶ್ಚರ್ಯಕರವಾದ ಕೆಲವು ವೈಜ್ಞಾನಿಕ ವಿಚಾರಗಳು ಪ್ರಸ್ತುತವಾಗಿವೆ. ಆ ಕಾಲದಲ್ಲಿ ಇಂತಹ ಅತಿ ಸೂಕ್ಷ್ಮ ವಿಚಾರಗಳು ಮನುಷ್ಯನಿಗೆ

ಗೊತ್ತಿದ್ದವೆಂದು ಹೇಳುವುದು ಸಾಹಸದ ಮಾತಾದೀತು. ಉದಾಹರಣೆಗೆ -

೧. **ಸವಿತಾ ಯಂತ್ರೈಃ ಪ್ರಥಿವೀಮರಭ್ಣಾತ್** (ಋಗ್ವೇದ) ಸೂರ್ಯನು ತನ್ನ ಯಂತ್ರಗಳಿಂದ (ಕಟ್ಟಿ ಬಿಗಿಯುವ ಹಗ್ಗಗಳಿಂದ) ಭೂಮಿಯನ್ನು ಹಿಡಿದು ನಿಲ್ಲಿಸಿದ್ದಾನೆ ಎಂದರ್ಥ. ಇದನ್ನೇ ವಿಷ್ಣು ಪುರಾಣದಲ್ಲಿ ವಾತರಶ್ಮಿಗಳಿಂದ ಬಿಗಿದಿದ್ದಾನೆಂದು ವರ್ಣಿಸಿದೆ. ಈ ವಾತರಶ್ಮಿಗಳೇ ಆಕರ್ಷಣ ಶಕ್ತಿ. **'ಮಿತ್ರೋ ದಾಧಾರ ಪ್ರಥಿವೀಮುತದ್ಯಾಂ'** ಎಂದು ಯಜುರ್ವೇದ ಮಂತ್ರವು ಹೇಳಿದೆ. ಸೂರ್ಯನ ಆಕರ್ಷಣ ಶಕ್ತಿಯಿಂದ ಭೂಮಿ ಮತ್ತು ಜ್ಯೋತಿರ್ಗಣವು ನಿಂತಿದೆ ಎಂದರ್ಥ.

೨. **ಸುಷುಮ್ಣಃಸೂರ್ಯರಶ್ಮಿಶ್ಚಂದ್ರಮಾ ಗಂಧರ್ವಃ** (ಯಜುರ್ವೇದ) ಸೂಕ್ಷ್ಮವೂ ಸ್ವಚ್ಛವೂ ಆದ ಸೂರ್ಯರಶ್ಮಿಯು ಸೇರಿದ್ದರಿಂದ ಚಂದ್ರನು ಗಂಧರ್ವನಾದನಂತೆ. ಗಾಂ = ಸೂರ್ಯಕಿರಣವನ್ನು, ಧರ್ಮಃ = ಧರಿಸಿದವನು ಗಂಧರ್ವ ಎಂದು ನಿರುಕ್ತಕಾರರಾದ ಯಾಸ್ಕರು ಬರೆದಿದ್ದಾರೆ. **'ಆದಿತ್ಯತೋಽಸ್ಯ ದೀಪ್ತಿರ್ಭವತಿ'** ಸೂರ್ಯನಿಂದ ಚಂದ್ರನಿಗೆ ಪ್ರಕಾಶವುಂಟಾಗಿದೆ ಎಂದರ್ಥ. ಇದರ ಆಧಾರದಿಂದಲೇ ಭಾಸ್ಕರಾಚಾರ್ಯರು - **''ತರಣಿಕಿರಣಸಂಗಾದೇವ ಪೀಯೂಷಪಿಂಡೋ ದಿನಕರದಿಶಿ ಚಂದ್ರಶ್ಚಂದ್ರಿಕಾಭಿಶ್ಚಕಾಸ್ತಿ॥''** ಇತ್ಯಾದಿಯಾಗಿ ಸುಂದರವಾದ ವರ್ಣನೆಯನ್ನು ಮಾಡಿದ್ದಾರೆ. ಸೂರ್ಯಕಿರಣದಿಂದಲೇ ಅಭಿಮುಖನಾದ ಚಂದ್ರನಿಗೆ ಬೆಳದಿಂಗಳು ಬರುತ್ತದೆಯೆಂದೂ, ಚಂದ್ರನ ಹಿಂಭಾಗವು ಗಡಿಗೆಯಂತೆ ಕಪ್ಪಾಗಿದೆಯೆಂದೂ ವರ್ಣಿಸಿದ್ದಾರೆ. ನಾಗರಿಕತೆಯ ಹೊಸ್ತಿಲನ್ನು ತುಳಿಯದಿದ್ದ ಆ ಕಾಲದ ಮಾನವನಿಗೆ ಇವೇ ಮೊದಲಾದ ರಹಸ್ಯಗಳು ಹೇಗೆ ಗೊತ್ತಾದವು?

VI ) ಪರಬ್ರಹ್ಮವು ನಿಷ್ಕ್ರಿಯ, ನಿರ್ಗುಣ, ಶಾಂತ, ನಿರವದ್ಯ, ನಿರಂಜನವೆಂದು ಉಪನಿಷತ್ತುಗಳು ಸಾರುತ್ತವೆ. ಅದ್ವೈತಿಗಳು ಅಂಗೀಕರಿಸಿರುವ ಪರಬ್ರಹ್ಮ ಸ್ವರೂಪವಿದು. ಇದು ಸತ್ಯ, ಅವ್ಯಯ, ಶಾಶ್ವತ, ನಾಶರಹಿತವೆಂದು ಸಹ ಉಪನಿಷತ್ತು ಹೇಳುತ್ತದೆ. ಬ್ರಹ್ಮವು ನಿಷ್ಕ್ರಿಯವೆಂದೂ, ನಿರ್ಗುಣವೆಂದೂ ಅಂಗೀಕರಿಸಿರುವುದರಿಂದಲೇ ಅದು ವಿಕಾರರಹಿತವಾಗಿ ನಿತ್ಯವೆನಿಸಿದೆ. ಈಗ ಅತ್ಯಂತ ಆಧುನಿಕ ವಿಜ್ಞಾನವಾದ Quantum Physics ನ ಸಿದ್ಧಾಂತವೇ ಇದು. ''ಯಾವ ವಸ್ತುವಿನಲ್ಲಿ ಕ್ರಿಯೆ ಮತ್ತು ಗುಣವಿದೆಯೋ ಅದು ನಿತ್ಯವಲ್ಲ. ಕ್ರಿಯಾಶೂನ್ಯವೂ ಗುಣರಹಿತವೂ ಆದದ್ದು ಮಾತ್ರ ನಿತ್ಯ'' ಎಂದು ಈ ವಿಜ್ಞಾನಶಾಸ್ತ್ರವು ಹೇಳುತ್ತದೆ. "If change is universal in matter and energy, if A cannot remain as A, but becomes Non A, such as B, C or D, it cannot be said that matter and

energy are eternal or everlasting. In order to be changeless, it must be actionless and attributeless''.

- Maya in Physics; By N. C. Panda Page 72

" Adwaita Vedanta is more scientific than science itself." -

The Same Book page 440

ಈ ವಿಜ್ಞಾನ ರಹಸ್ಯವು ಆದಿಮಾನವನಿಗೆ ತಿಳಿದಿತ್ತೆ?

VII) ೧. ಋಗ್ವೇದದ ವಾಗ್ಭಂಭಣೀ ಸೂಕ್ತದಲ್ಲಿ ವಾಗ್ಭಂಭಣೀ ಎಂಬ ಮಂತ್ರದ್ರಷ್ಟ್ರಿಯಾದ ಋಷಿಯು ತಾನೇ ಪರಮಾತ್ಮನೆಂದು ತಿಳಿದು ''**ಅಹಂ ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈ:.......**'' ಇತ್ಯಾದಿಯಾಗಿ ಘೋಷಿಸುತ್ತಾಳೆ. ಈ ರೀತಿಯಲ್ಲಿ ಒಬ್ಬ ಮಾನವಿಯು ಎಂದಿಗಾದರೂ ಹೇಳುತ್ತಾಳೇನು?

**೨. ''ಅಹಂ ಬ್ರಹ್ಮಾಸ್ಮಿ, ತತ್ತ್ವಮಸಿ''** ಇತ್ಯಾದಿಯಾದ ಉಪನಿಷದ್ವಾಕ್ಯಗಳಲ್ಲಿ "ನಾನೇ ಪರಬ್ರಹ್ಮವಾಗಿದ್ದೇನೆ' ಎಂಬ ಘೋಷಣೆಯೂ, 'ನೀನು ಪರಮಾತ್ಮನಿಗಿದ್ದೀಯೆ'' ಎಂಬ ಉಪದೇಶವೂ ಸ್ಪಷ್ಟವಾಗಿ ಇರುತ್ತವೆ. ಜಗತ್ತಿನಲ್ಲಿ ಯಾವನಾದರೂ ಒಬ್ಬ ಮನುಷ್ಯನಿಗೆ ಈ ರೀತಿಯಲ್ಲಿ ಹೇಳತಕ್ಕ ಮತ್ತು ಶಿಷ್ಯನಿಗೆ ಉಪದೇಶಿಸತಕ್ಕ ಎದೆಗಾರಿಕೆ ಉಂಟೇನು?

ಇಂತಹ ಇನ್ನೂ ಹಲವಾರು ಪ್ರಶ್ನೆಗಳು ಹುಟ್ಟುತ್ತವೆ. ಇಷ್ಟೇ ಈಗ ಸಾಕು. ಇವುಗಳಿಗೆ ಸಮಂಜಸವಾದ ಉತ್ತರಗಳನ್ನು ನೀಡಿದಾಗ ವೇದವು ಪೌರುಷೇಯವೆಂದೊಪ್ಪಿಕೊಳ್ಳಬಹುದು. ಇದೇ ದೇವವಾಣಿ. ಸಕಲ ಭಾಷೆಗಳ ಜನನಿ.

ಮೋಸಸ್, ಯೇಸು, ಪೈಗಂಬರ್ ಮೊದಲಾದವರು ಚಾರಿತ್ರಿಕ ವ್ಯಕ್ತಿಗಳು. ಅವರ ಬೋಧೆಗಳು ಸಾಮಾನ್ಯ ನೀತಿಗಳು. ದರ್ಶನಶಾಸ್ತ್ರದ ಗಂಧವೂ ಅವುಗಳಲ್ಲಿಲ್ಲ. ಅವರು ತಪಸ್ವಿಗಳೂ ಅಲ್ಲ. ತಪಸ್ಸೆಂದರೆ ಏನೆಂಬುದೇ ಗೊತ್ತಿಲ್ಲದವರು. ಆ ವ್ಯಕ್ತಿಗಳಿಗೂ ಮಂತ್ರದ್ರಷ್ಟಾರರಾದ ಋಷಿಗಳಿಗೂ ಆ ವ್ಯಕ್ತಿಗಳ ಬೋಧನೆಗೂ ವೇದಾರ್ಥಜ್ಞಾನಕ್ಕೂ ಯಾವ ಹೋಲಿಕೆಯೂ ಇಲ್ಲ. ಮಹರ್ಷಿ ಅರವಿಂದರ A chapter for a work on the Veda ಪ್ರಬಂಧದ ಕೆಲವು ವಾಕ್ಯಗಳು ಇವು-

''ಈ ಪ್ರಾಚೀನ ದೈವೀ ವಾಙ್ಮಯವೇ ಭಾರತದ ಆಧ್ಯಾತ್ಮಿಕತೆಗೆಲ್ಲ ಜನನಿ.

ಭಾರತದಲ್ಲಿ ಇದುವರೆಗೆ ಕಾಣಿಸಿಕೊಂಡ ಯಾವುದೇ ದರ್ಶನ ಅಥವಾ ತತ್ವಶಾಸ್ತ್ರದ ವಿವರಗಳನ್ನು ನೋಡಿದರೂ ಈ ಸರಳ ಸತ್ಯವು ಗೋಚರಿಸುತ್ತದೆ. ಅವೆಲ್ಲವಕ್ಕೂ ವೇದವೇ ಸ್ಫೂರ್ತಿಸ್ಥಾನ. ನಮ್ಮ ಎಲ್ಲ ದರ್ಶನ, ತಂತ್ರ, ಪುರಾಣ, ಶೈವ - ಶಾಕ್ತ - ವೈಷ್ಣವ ಪಂಥಗಳು, ಸಾಂಪ್ರದಾಯಿಕತೆ ಇವೆಲ್ಲಕ್ಕೂ ಆಧಾರವಾದದ್ದು ವೇದವೇ. ವೇದಾರ್ಥವನ್ನು ಅವರು ಹೇಗೆ ಗ್ರಹಿಸಿಕೊಂಡರೆಂಬುದರ ಮೇಲೆ ಅವರವರ ಮತಗಳು ನಿಂತಿವೆ.''

''ಐರೋಪ್ಯರು ಪಾರಮಾರ್ಥಿಕವಲ್ಲದ ಅರ್ಥವನ್ನು ಕಲ್ಪಿಸಿ ವ್ಯವಸ್ಥಿತವಾಗಿ ಪ್ರಚಾರ ಮಾಡಿದರು. ಈ ಪ್ರಚಾರವು ಅಜ್ಞಾನಕ್ಕಿಂತ ಪ್ರಬಲವಾದ ಹಾನಿಯನ್ನುಂಟು ಮಾಡಿದೆ. ಅವರಿಂದಾದ ವೇದದ ಅಪಕಲ್ಪನೆಗಳು ಒಂದು ವಿಡಂಬನಕ್ರಿಯೆ''.

''ವೇದಮಂತ್ರಗಳ ಮೂಲ ಆಶಯವೇನೆಂಬುದು ಕೆಲವು ವೇಳೆ ನಮಗೆ ಒಗಟಾಗಿದ್ದರೂ ವೈದಿಕ ಸತ್ಯವಂತೂ ಶಾಶ್ವತವಾಗಿ ಉಳಿದಿರುತ್ತದೆ.''

''ವೇದಗಳ ಪರಿಪೂರ್ಣಜ್ಞಾನವನ್ನು ನಾವು ಮರಳಿ ಪಡೆಯಬೇಕಾದದ್ದು ಕೇವಲ ಬೌದ್ಧಿಕ ಕುತೂಹಲಕ್ಕಾಗಿ ಅಲ್ಲ. ಮಾನವ ಜನಾಂಗದ ಭವಿಷ್ಯವೇ ವೇದಗಳ ಸತ್ಯಜ್ಞಾನವನ್ನವಲಂಬಿಸಿದೆ''

# ೨ - ಮಾನವ ಧರ್ಮ

ಮಾನವನು ಆಚರಿಸಬೇಕಾದದ್ದು ಧರ್ಮ, ಆಚರಿಸಬಾರದಾಗಿ ದೂರವಿಡಬೇಕಾದದ್ದು ಅಧರ್ಮ ಎಂದು ಸ್ಥೂಲವಾಗಿ ವಿಂಗಡಿಸಿಕೊಳ್ಳಬಹುದು. ಹಾಗಾದರೆ ಇದು ಧರ್ಮ, ಇದು ಅಧರ್ಮ ಎಂದು ನಿರ್ಣಯಿಸಲು ಮೂಲಾಧಾರ ಯಾವುದು? - ಎಂಬ ಶಂಕೆ ಹುಟ್ಟುತ್ತದೆ. ಇದಕ್ಕೆ ಮನುಮಹರ್ಷಿಯು ಕೊಡುವ ನಿಶ್ಚಾಯಕವಾದ ಉತ್ತರ ಇದು.

**ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಮ್ ।**
**ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ॥** (ಮನು ೨. ೬)

''ಸಮಸ್ತ ವೇದಗಳೂ ಧರ್ಮಕ್ಕೆ ಮೂಲಾಧಾರ ಪ್ರಮಾಣ. ವೇದಜ್ಞರ ಸ್ಮೃತಿ ಶೀಲಗಳು ಧರ್ಮಕ್ಕೆ ಆಧಾರವಾಗುತ್ತವೆ. ಅಂತೆಯೇ ಶಿಷ್ಟರಾದ ಸಾಧು ಜನರ ಆಚಾರವೂ ಧರ್ಮ ವಿಚಾರ ಮಾಡತಕ್ಕವನ ಆತ್ಮತುಷ್ಟಿಯೂ ಪ್ರಮಾಣವಾಗುತ್ತದೆ''

ನಾಲ್ಕೂ ವೇದಗಳ ಹೆಸರುಗಳನ್ನೆಲ್ಲರೂ ಬಲ್ಲರು. ಭಾರತೀಯ ಸಂಸ್ಕೃತಿಯ, ಧರ್ಮದ, ನಾಗರಿಕತೆಯ ತಾಯಿ ಬೇರು ಈ ವೇದ ರಾಶಿ. ಭರತ ಖಂಡದಲ್ಲಿ ಹುಟ್ಟಿಬೆಳೆದ ನಿಖಿಲಮತಗಳೂ ಎಂದರೆ ಬೌದ್ಧ, ಜೈನ, ಸಿಖ್, ವೀರಶೈವ ಇತ್ಯಾದಿ ಮತಗಳೂ ವೇದದ ಬುಡಕಟ್ಟಿಗೇ ಸೇರಿದವು. ಯಾವುದನ್ನು ನಾವು ಅವೈದಿಕ

ಮತಗಳೆನ್ನುತ್ತೇವೋ ಅವುಗಳ ದಾರ್ಶನಿಕ ವಿಚಾರಗಳೂ ಧರ್ಮಮಾರ್ಗಗಳೂ ವೇದ ದೂರವಾದವುಗಳಲ್ಲ. ಬೈಬಲ್, ಖುರಾನ್, ಸೂಫಿ ಪಂಥಗಳಲ್ಲಿ ಸಹ ವೇದದ ಪ್ರಭಾವವನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದು. ಸಮಸ್ತ ವೇದಗಳೂ ಹೇಗೆ ಧರ್ಮ ಮೂಲಗಳೋ ಹಾಗೆ ಸಮಸ್ತ ಮತಗಳೂ ವೇದಮೂಲವಾದವು. ಪಾಕಿಸ್ತಾನ, ಬಾಂಗ್ಲಾದೇಶಗಳಲ್ಲಿಯೂ ಭಾರತೀಯ ನದಿಗಳೇ ಹರಿಯುತ್ತಿವೆ. ಭಾರತೀಯವಾದ ಶಿಲ್ಪ, ಸಂಗೀತ, ಭಾಷಾ ಶಬ್ದಗಳ ತಂತುಗಳು ಆ ದೇಶಗಳಲ್ಲಿಯೂ ಪ್ರಸರಿಸಿಕೊಂಡಿವೆ. ಅವು ಶೀಘ್ರವಾಗಿ ತುಂಡರಿಸಿಹೋಗತಕ್ಕವಲ್ಲ.

ಮನುಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ ಮೊದಲಾದವು ವೇದಜ್ಞರ ಸ್ಮೃತಿ ಗ್ರಂಥಗಳು. ಬೃಹತ್ತರವಾದ ವೇದರಾಶಿಯಿಂದ ಧರ್ಮ ಸ್ವರೂಪವೆಲ್ಲವನ್ನೂ ತಿಳಿಯುವುದು ಶಕ್ಯವಾದದ್ದಲ್ಲ. ಆದ್ದರಿಂದ ಸ್ಮೃತಿಗ್ರಂಥಗಳು ಹೊರಟವು. ವೇದದಲ್ಲಿ ಹೇಳಿದ್ದನ್ನೇ ಸ್ಮರಿಸಿಕೊಂಡು ಹೇಳಿದ್ದು ಸ್ಮೃತಿ. ಶ್ರುತಿ ಮೂಲಕವಾದ್ದರಿಂದ ಸ್ಮೃತಿಯು ಪ್ರಮಾಣವೆನಿಸಿದೆ. ಅದು ಸ್ವತಂತ್ರವಾದ ಪ್ರಮಾಣವಲ್ಲ. ಶ್ರುತಿಗೆ ವಿರುದ್ಧವಾದ ಮಾತೇನಾದರೂ ಸ್ಮೃತಿಯಲ್ಲಿದ್ದರೆ ಅದು ಪ್ರಮಾಣವಲ್ಲವೆಂದು ತಿಳಿಯಬೇಕು. ಹಾಗೆ ವಿರುದ್ಧವಾದ ಮಾತು ಸ್ಮೃತಿಕಾರರಾದ ಮುನಿಗಳ ಬಾಯಿಯಿಂದ ಎಂದೂ ಬರುವುದಿಲ್ಲ. ಆದರೂ ಸಹ ಯಾವನೋ ಒಬ್ಬ ಆಧುನಿಕನು ದುರುದ್ದೇಶದಿಂದ ಒಂದು ಶ್ಲೋಕವನ್ನು ರಚಿಸಿ, ಸ್ಮೃತಿಗಳ ನಡುವೆ ತುರುಕಬಹುದು. ಅಂತಹ ಶ್ಲೋಕವು ಉಪೇಕ್ಷಣೀಯವಾದದ್ದು.

ವೇದವಿದರ ಶೀಲ, ನಡತೆ (Character), ಸಜ್ಜನರ ಆಚಾರ ಮತ್ತು (ಧರ್ಮ ಮಾರ್ಗದಲ್ಲಿಯೇ ಹೋಗುತ್ತಿರುವ) ತನ್ನ ಆತ್ಮತೃಪ್ತಿ ಇವೂ ಸಹ ಧರ್ಮಕ್ಕೆ ಪ್ರಮಾಣಗಳು. ಇವುಗಳಲ್ಲಿ ಮೊದ ಮೊದಲನೆಯದು ತನ್ನ ಮುಂದಿನದಕ್ಕಿಂತ ಪ್ರಬಲವೆಂದು ತಿಳಿಯಬೇಕು. ಏವಂಚ ವೇದವು ಸರ್ವತಃ ಪ್ರಬಲವಾಗುತ್ತದೆ. ಶೀಲ, ಆಚಾರ, ಆತ್ಮತೃಪ್ತಿ - ಇವು ಶ್ರುತಿ, ಸ್ಮೃತಿಗಳಂತೆ ಸ್ಪಷ್ಟವಾಗಿರುವುದಿಲ್ಲವಾದ್ದರಿಂದ ಸ್ವಲ್ಪ ವಿವರಣೆ ಅವಶ್ಯಕ. ಗುರು-ಹಿರಿಯರಲ್ಲಿ ಭಕ್ತಿ, ಸೌಮ್ಯ ಸ್ವಭಾವ, ಸ್ನೇಹಪರತೆ, ಮೃದುತ್ವ, ಕೃತಜ್ಞತೆ, ಕಾರುಣ್ಯ, ಅಸೂಯಾರಾಹಿತ್ಯ, ಪರೋಪಕಾರ ಬುದ್ಧಿ, ಸತ್ಕಾರ್ಯದಲ್ಲಿ ಶ್ರದ್ಧೆ, ವಿನಯ - ಮುಂತಾದ ಸದ್ಗುಣಗಳು ಶೀಲವೆನಿಸುತ್ತವೆ. ಶೀಲವು ಮುಖ್ಯವಾಗಿ ಮಾನಸ ಧರ್ಮ. ಆಚಾರವು ಕ್ರಿಯಾರೂಪವಾದದ್ದು. ವಸ್ತ್ರಧಾರಣೆ, ಸಾಂಪ್ರದಾಯಿಕವಾದ ತಿಲಕವನ್ನು ಹಚ್ಚಿಕೊಳ್ಳುವುದು, ಹಿತಮಿತವಾಗಿ ಮಾತಾಡುವುದು, ಸ್ಪಷ್ಟವಾದ ಶಬ್ದೋಚ್ಚಾರಣೆ, ದೇಹ ವಸ್ತ್ರಗಳನ್ನು ಶುಚಿಯಾಗಿಟ್ಟುಕೊಳ್ಳುವುದು - ಇವೆಲ್ಲವೂ ಆಚಾರಗಳು. ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ಶೀಲ, ಆಚಾರ ಎಂದು

ವಿಂಗಡಿಸದೇ 'ಸದಾಚಾರ' ಎಂದಷ್ಟೇ ಹೇಳಿದೆ. ಶಿಷ್ಟರಾದವರ ಆಚಾರವು ಧರ್ಮಕ್ಕೆ ಪ್ರಮಾಣವೆಂದರ್ಥ. ಶೀಲವೂ ಆಚಾರದಲ್ಲಿ ಸೇರಿಹೋಗುತ್ತದೆ. ಶಿಷ್ಟರೆಂದರೆ ಯಾರು? ಶಾಸ್ತ್ರವಿಧಿಯಂತೆ ನಡೆದುಕೊಳ್ಳತಕ್ಕವರೆಂದು ಶಬ್ದಾರ್ಥವಾಗುತ್ತದೆ. ವ್ಯಾಕರಣ ಮಹಾಭಾಷ್ಯದಲ್ಲಿ ಪತಂಜಲಿ ಮುನಿಗಳು ಶಿಷ್ಟರ ಲಕ್ಷಣವನ್ನು ಹೇಳಿದ್ದಾರೆ. **''ಯೇ ಬ್ರಾಹ್ಮಣಾಃ ಕುಂಭೀಧಾನ್ಯಾ ಅಲೋಲುಪಾಃ ಅಗೃಹ್ಯಮಾಣಕಾರಣಾಃ ಕಿಂಚಿದಂತ ರೇಣ ಕಸ್ಯಾಶ್ಚಿದ್ವಿದ್ಯಾಯಾಃ ಪಾರಂಗತಾಃ ತತ್ರಭವಂತಃ ಶಿಷ್ಟಾಃ''** (ಅಷ್ಟಾ ೬-೩-೧೦೯)

ಅರ್ಥ - ಒಂದು ಗಡಿಗೆಯಲ್ಲಿ ಹಿಡಿಯುವಷ್ಟು ಮಾತ್ರ ಧಾನ್ಯ ಉಳ್ಳವರೂ ಲೋಭರಹಿತರೂ ಯಾವ ಅಪೇಕ್ಷೆಯೂ ಇಲ್ಲದೇ ಸದಾಚಾರ ನಿರತರೂ ತಾರ್ಕಿಕವಾದ ಯಾವ ಫಲವನ್ನೂ ಬಯಸದೇ ವಿದ್ಯಾಪಾರಂಗತರಾದವರೂ ಮಹನೀಯರೂ ಆದ ಬ್ರಾಹ್ಮಣರು ಶಿಷ್ಟರೆನಿಸುತ್ತಾರೆ.

ಶಿಷ್ಟರು ಧನಲೋಭವಿಲ್ಲದವರು. ಸಂಪತ್ತು ಒದಗಿದರೂ ಅದನ್ನು ದಾನ ಧರ್ಮಗಳಿಗೆ ಕೂಡಲೇ ವಿನಿಯೋಗಿಸಿ ಬಿಡತಕ್ಕವರು. ಮನೆಯಲ್ಲಿ ಒಂದು ಗಡಿಗೆಯು ಹಿಡಿಸುವಷ್ಟು ಅಕ್ಕಿ, ಗೋಧಿ ಮುಂತಾದವನ್ನು ಇಟ್ಟುಕೊಂಡಿರುತ್ತಾರೆಯೇ ಹೊರತು ಅತಿಯಾಗಿ ಧನಧಾನ್ಯಗಳನ್ನು ತುಂಬಿಕೊಳ್ಳತಕ್ಕವರಲ್ಲ. ಬಡತನವನ್ನೇ ಅಪ್ಪಿಕೊಂಡು ಆನಂದದಿಂದ ಇರತಕ್ಕ ಜನರೇ ಇವರು. ಇವರ ನಡತೆ ಎಲ್ಲರಿಗೂ ಪ್ರಮಾಣವೆನ್ನುತ್ತಾನೆ ಮನು ಮಹರ್ಷಿ. ಇಂತಹ ಬ್ರಾಹ್ಮಣರು ಲೋಕ ಪೂಜ್ಯರೆಂಬುದು ಸಹಜವಾದದ್ದು. ಬ್ರಾಹ್ಮಣನು ವರ್ಣಗಳಲ್ಲಿ ಶ್ರೇಷ್ಠನೆಂದೂ, ಆತನನ್ನು ಎಲ್ಲ ವರ್ಣದವರೂ ಗೌರವಿಸಬೇಕೆಂದು ಮನುವಾಗಲಿ ಇತರ ಸ್ಮೃತಿಕಾರರಾಗಲಿ ಹೇಳಿರುವುದು ಇಂತಹ ಶಿಷ್ಟರಾದ ಬ್ರಾಹ್ಮಣರಿಗೆ ಅನ್ವಯಿಸುತ್ತದೆ. ಇದರಲ್ಲಿ ಯಾವ ಪಕ್ಷಪಾತ ಉಂಟು? ಯಾವ ಅನ್ಯಮತದ್ವೇಷ ಉಂಟು? ಮುಂದೆ ಬ್ರಾಹ್ಮಣನ ಕರ್ತವ್ಯವೇನು? ಅವನ ವರ್ತನೆ ಹೇಗಿರಬೇಕು? - ಎಂಬ ವಿಷಯವನ್ನು ವಿವರಿಸುವಾಗ ಇನ್ನೂ ವಿಸ್ತಾರವಾಗಿ ಹೇಳಬೇಕಾದ್ದಿದೆಯಾದ್ದರಿಂದ ಪ್ರಕೃತ ಇಷ್ಟಕ್ಕೆ ನಿಲ್ಲಿಸೋಣ.

ಆತ್ಮತುಷ್ಟಿಯೆಂಬುದೂ ಧರ್ಮಾಚರಣೆಗೆ ಒಂದು ಪ್ರಮಾಣವಾಗಿದ್ದು ಮಾರ್ಗದರ್ಶಿಯಾಗುತ್ತದೆ. ಇದು ಆಯಾ ವ್ಯಕ್ತಿಗೆ ಅನ್ವಯಿಸತಕ್ಕದ್ದೇ ಹೊರತು ಸಾರ್ವತ್ರಿಕವಲ್ಲ. ಯಾವುದಾದರೊಂದು ಕರ್ತವ್ಯ ವಿಶೇಷದಲ್ಲಿ ಸಂದೇಹ ಬಂದಾಗ ತಾನೇ ನಿರ್ಣಯಿಸಿಕೊಳ್ಳಬೇಕಾದ ಸಂದರ್ಭವು ಬರಬಹುದು. ಈ ಆತ್ಮತುಷ್ಟಿಯನ್ನು ಬೇರೆಯವರಿಂದ ಕೇಳಿ ತಿಳಿಯತಕ್ಕದ್ದೂ ಅಲ್ಲ. ತನ್ನ ಮನಸ್ಸಿಗೆ ಹಿತವೆನಿಸಿದ್ದು ಧಾರ್ಮಿಕವೆಂದರೆ ಮನಸ್ಸು ಬಂದಂತೆ ನಡೆದುಕೊಳ್ಳಬಹುದೆಂದು ಅರ್ಥವಲ್ಲ. ಯಾವಾತನು ಧರ್ಮಮಾರ್ಗದಲ್ಲಿಯೇ ನಡೆಯುತ್ತಾನೆಯೋ ಅದರಿಂದ

ತಪ್ಪಿಹೋಗಲು ಸರ್ವಥಾ ಇಷ್ಟಪಡುವುದಿಲ್ಲವೋ ಆತನಿಗೆ ಒಮ್ಮೆ ಸಮಸ್ಯೆಯೊಂದು ಎದುರಾಗಬಹುದು. ಅದನ್ನು ಬಗೆಹರಿಸಿಕೊಳ್ಳಲು ಹತ್ತಿರ ಬೇರೆಯವರಿಲ್ಲ. ಇದ್ದರೂ ಅವರಿಗೆ ಹೇಳತಕ್ಕದ್ದಲ್ಲ. ಸಮಸ್ಯೆಗೆ ಉತ್ತರ ಯಾವ ಗ್ರಂಥದಲ್ಲೂ ಇಲ್ಲ. ಏಕೆಂದರೆ ಇದು ವೈಯಕ್ತಿಕವಾಗಿ ಎದುರಾದ ಪ್ರಶ್ನೆ. ಇದಕ್ಕೊಂದು ಉದಾಹರಣೆಯನ್ನಿತ್ತರೆ ವಿಚಾರವು ಸ್ಫುಟವಾದೀತು. ಈ ಉದಾಹರಣೆ ಕಾಳಿದಾಸ ಮಹಾಕವಿಯ ಅಭಿಜ್ಞಾನ ಶಾಕುಂತಲದಲ್ಲಿ ದೊರಕುತ್ತದೆ.

ದುಷ್ಯಂತ ರಾಜನು ಒಮ್ಮೆ ಬೇಟೆಗಾಗಿ ಅರಣ್ಯಕ್ಕೆ ಹೋಗುತ್ತಾನೆ. ಅಲ್ಲೊಂದು ಜಿಂಕೆಯನ್ನು ಬೆನ್ನಟ್ಟಿಹೋದಾಗ ಅದು ಒಂದು ಆಶ್ರಮವನ್ನು ಪ್ರವೇಶಿಸುತ್ತದೆ. ಅದು ಕಣ್ವ ಮಹರ್ಷಿಗಳ ಆಶ್ರಮ. ಅಲ್ಲಿ ಆತನೊಬ್ಬನೇ ತಿರುಗಾಡುತ್ತಿರುವಾಗ ಒಂದು ಉದ್ಯಾನವನದಲ್ಲಿ ಮೂವರು ತರುಣಿಯರು ಗಿಡಗಳಿಗೆ ನೀರನ್ನು ಹಾಕುತ್ತ ಮಾತಾಡುತ್ತ ಇರುತ್ತಾರೆ. ದುಷ್ಯಂತನು ಕುತೂಹಲದಿಂದ ಸ್ವಲ್ಪ ಮರೆಯಲ್ಲಿ ನಿಂತು ನೋಡುತ್ತ ಸಂಭಾಷಣೆಯನ್ನು ಕೇಳಿಕೊಳ್ಳುತ್ತ ಇರುತ್ತಾನೆ. ಆ ತರುಣಿಯರಲ್ಲೊಬ್ಬಳು ಶಕುಂತಲೆ. ಪರಮಸುಂದರಿ. ದುಷ್ಯಂತನಿಗೆ ಅವಳಲ್ಲಿ ಅನುರಾಗ ಹುಟ್ಟುತ್ತದೆ. ಆದರೆ ಅವಳು ಕಣ್ವ ಋಷಿಗಳ ಮಗಳಾಗಿದ್ದರೆ ಅವಳು ತನಗೆ ದುರ್ಲಭಳು. ಶಕುಂತಲೆಯನ್ನು ಬಯಸುವುದು ಸಹ ಅಧರ್ಮ. ಕ್ಷತ್ರಿಯನು ಬ್ರಾಹ್ಮಣ ಸ್ತ್ರೀಯನ್ನು ಮದುವೆಯಾಗುವುದು ವಿಲೋಮ ವಿವಾಹವಾಗುತ್ತದೆ. ಧರ್ಮವನ್ನು ರಕ್ಷಿಸಬೇಕಾದ ರಾಜನೇ ಅಧರ್ಮದಲ್ಲಿ ತೊಡಗುವುದೆ? ಈ ಚಿಂತೆಗಳಲ್ಲಿ ತೊಳಲಾಡುತ್ತಿದ್ದ ದುಷ್ಯಂತನು ಕಡೆಗೆ ತಾನೇ ಈ ಪ್ರಕಾರ ನಿರ್ಣಯಿಸುತ್ತಾನೆ -

**ಅಸಂಶಯಂ ಕ್ಷತ್ರಪರಿಗ್ರಹ ಕ್ಷಮಾ**
**ಯದಾರ್ಯಮ ಸ್ಯಾಮಭಿಲಾಷಿ ಮೇ ಮನಃ।**
**ಸತಾಂ ಹಿ ಸಂದೇಹ ಪದೇಷು ವಸ್ತುಷು**
**ಪ್ರಮಾಣಮಂತಃಕರಣಪ್ರವೃತ್ತಯಃ ॥**

'' ಈ ಶಕುಂತಲೆಯು ಕ್ಷತ್ರಿಯನೊಡನೆ ವಿವಾಹಕ್ಕೆ ಯೋಗ್ಯಳೇ ಹೌದು. ಸಂದೇಹವೇ ಇಲ್ಲ, ಏಕೆಂದರೆ ಧರ್ಮಮಾರ್ಗದಲ್ಲಿಯೇ ಹೋಗುತ್ತ ಆರ್ಯವಾಗಿರುವ ನನ್ನ ಚಿತ್ತವು ಇವಳಲ್ಲಿ ಅನುರಾಗವನ್ನಿಟ್ಟು ಬಯಸುತ್ತಿದೆ. ಸಂದೇಹಾಸ್ಪದವಾದ ವಿಷಯಗಳಲ್ಲಿ ಸಜ್ಜನರ ಮಾನವ ಪ್ರವೃತ್ತಿಯೇ ಧರ್ಮನಿಶ್ಚಯದಲ್ಲಿ ಪ್ರಮಾಣವಾಗುತ್ತದೆ. ''

ಇದೇನೂ ದುಷ್ಯಂತನ ಆತ್ಮಪ್ರಶಂಸೆಯ ಮಾತಲ್ಲ. ಇನ್ನೊಬ್ಬರಿಗೆ ತನ್ನ

ಪ್ರಶಂಸನೀಯ ಗುಣಗಳನ್ನು ಹೇಳಿಕೊಂಡರೆ ಮಾತ್ರ ಅದು ಆತ್ಮಪ್ರಶಂಸೆಯಾಗುತ್ತದೆ. ಇಲ್ಲಿ ದುಷ್ಯಂತನು ಆತ್ಮವಿಶ್ವಾಸದಿಂದ ತನ್ನಲ್ಲಿಯೇ ಹೇಳಿಕೊಳ್ಳುವ ಮಾತು ಇದು. ''ಎಂದೆಂದಿಗೂ ನನ್ನ ಮನಸ್ಸು ಅಧರ್ಮಮಾರ್ಗದಲ್ಲಿ ಹೋಗಿಲ್ಲ. ಈಗ ಈ ಕನ್ಯೆಯನ್ನು ಬಯಸುತ್ತಿದೆ. ಇದಕ್ಕೆ ಕಾರಣವೇನು? ಇವಳು ಬ್ರಾಹ್ಮಣ ಸ್ತ್ರೀಯಾಗಿದ್ದರೆ ನನ್ನ ಮನಸ್ಸಿಗೆ ಇವಳಲ್ಲಿ ಅನುರಾಗವು ಹುಟ್ಟುತ್ತಲೇ ಇರಲಿಲ್ಲ. ಈಗ ಅನುರಾಗವುಂಟಾಗಿರುವುದೇ ಇವಳು ಬ್ರಾಹ್ಮಣಿಯಲ್ಲವೆಂಬುದಕ್ಕೆ ಸಾಕ್ಷಿ.'' ಇದು ದುಷ್ಯಂತನ ಚಿಂತೆಯ ಪ್ರಕಾರ. ಈ ಕಾರ್ಯದಲ್ಲಿ ಆತನಿಗೆ ಆತ್ಮತುಷ್ಟಿಯಾಗಿದೆ. ಆತನು ಶುದ್ಧ ಚಿತ್ತನೆಂಬುದು ಮುಂದಿನ ಕಥೆಯಿಂದಲೂ ಸ್ಪಷ್ಟವಾಗುತ್ತದೆ. ದುರ್ವಾಸರ ಶಾಪದಿಂದ ಆತನಿಗೆ ಶಕುಂತಲೆಯನ್ನು ಗಾಂಧರ್ವ ವಿವಾಹದಿಂದ ಪರಿಗ್ರಹಿಸಿದ್ದು ಮರೆತು ಹೋಗುತ್ತದೆ. ಆ ಸಮಯದಲ್ಲಿ ಸ್ವತಃ ಕಣ್ವರೇ ಶಕುಂತಲೆಯನ್ನು ಶಿಷ್ಯರೊಡನೆ ಕಳಿಸಿರುತ್ತಾರೆ. ಗೌತಮಿಯೆಂಬ ತಪಸ್ವಿನಿಯೂ ಜೊತೆಗೆ ಹೋಗಿರುತ್ತಾಳೆ. ಅವರೆಲ್ಲರೂ ''ಶಕುಂತಲೆಯು ನಿನ್ನ ಪತ್ನಿ, ಕಣ್ವಮುನಿಗಳು ಕಳಿಸಿದ್ದಾರೆ, ಪರಿಗ್ರಹಿಸು''ಎಂದು ಒತ್ತಾಯಿಸುತ್ತಾರೆ. ಶಕುಂತಲೆಯೇ ತನ್ನ ಪೂರ್ವಕಥೆಯನ್ನು ವಿವರಿಸುತ್ತಾಳೆ. ಆದರೂ, ಶಕುಂತಲೆಯ ಸೌಂದರ್ಯವು ಕಣ್ಣೆದುರಿಗೆ ಕಟ್ಟಿದ್ದರೂ, ಅವಳು ಪರಸ್ತ್ರೀಯೆಂದು ತಿರಸ್ಕರಿಸಿಬಿಡುತ್ತಾನೆ. ಮುಂದೆ ಶಾಪವು ನಿವೃತ್ತವಾದ ಮೇಲೆ, ಶಕುಂತಲೆಯನ್ನು ತಾನು ತಿರಸ್ಕರಿಸಿದ್ದಕ್ಕಾಗಿ ಗೋಳಾಡುತ್ತಾನೆ. ಆತ್ಮತುಷ್ಟಿಯ ಉದಾಹರಣೆಯು ಪುರಾಣ ಕಥೆಗಳಲ್ಲಿ ವಿರಳವಾದರೂ ಹುಡುಕಿದರೆ ಇನ್ನೂ ಕೆಲವು ಸಿಗಬಹುದು. ಮಹಾತ್ಮರ ಜೀವನ ಚರಿತ್ರೆಗಳಲ್ಲಿ ಇಂತಹ ಘಟನೆಗಳು ನಡೆಯಬಹುದು.

ಮನುಸ್ಮೃತಿಯ ಶ್ಲೋಕದಲ್ಲಿ ಶೀಲ, ಆಚಾರಗಳಲ್ಲಿ ಹೆಚ್ಚು ಭೇದವಿಲ್ಲದ್ದರಿಂದ ಒಂದೆಂದು ಗಣಿಸಿದಾಗ, ಶ್ರುತಿ, ಸ್ಮೃತಿ, ಸದಾಚಾರ, ಆತ್ಮತುಷ್ಟಿ - ಇವು ನಾಲ್ಕು ಧರ್ಮನಿರ್ಣಯಕ್ಕೆ ಆಧಾರಗಳೆಂದು ಗೊತ್ತಾಗುತ್ತದೆ. `ಇವುಗಳಲ್ಲಿ ಶ್ರುತಿಯು ಎಲ್ಲದಕ್ಕಿಂತ ಪ್ರಬಲವಾದದ್ದು, ಅದೇ ಧರ್ಮದ ಮೂಲವಾದ್ದರಿಂದ.

## ವೇದದಿಂದಲೇ ಧರ್ಮನಿರ್ಣಯ

ವೇದಕ್ಕೆ ಇಷ್ಟು ಅಧಿಕವಾದ ಪ್ರಾಮಾಣ್ಯವನ್ನು ಕೊಡುವುದಾದರೆ ಇತರರ ಮತೀಯ ಗ್ರಂಥಗಳಿಗೆ ಪ್ರಾಮಾಣ್ಯವನ್ನು ಏಕೆ ಕೊಡಬಾರದು? ಬೈಬಲ್, ಖುರಾನ್ ಮುಂತಾದವನ್ನೂ ನಾವೇಕೆ ಮನ್ನಿಸಬಾರದು? ನಮಗೂ ಅವು ಪ್ರಮಾಣವೆಂದಾಗಲಿ ಎಂದು ಕೆಲವರು ಆಕ್ಷೇಪಿಸಬಹುದು. ಹಾಗೆ ಆಕ್ಷೇಪಿಸಿಯೂ ಇದ್ದಾರೆ. ವೇದವು ಅಪೌರುಷೇಯವೆಂದೂ, ಭಗವಂತನಿಂದ ಉಪದಿಷ್ಟವಾದದ್ದೆಂದೂ ಋಷಿಗಳು

ಮಂತ್ರದ್ರಷ್ಟಾರರೇ ಹೊರತು ಕರ್ತಾರರಲ್ಲವೆಂದೂ ವೇದದ ಒಂದು ವೈಶಿಷ್ಟ್ಯವನ್ನು ಹಿಂದೆ ತಿಳಿಸಿದೆ. ವೇದದಲ್ಲಿರುವ ಉದಾತ್ತ ಅನುದಾತ್ತಾದಿ ಸ್ವರವಿಶೇಷಗಳಿಂದಲೂ ಅದು ಮಾನವ ನಿರ್ಮಿತವಲ್ಲವೆಂದು ಕೆಲವು ಯುಕ್ತಿಗಳನ್ನು ಹೇಳಿದೆ. ಆದರೂ ಅದನ್ನೊಪ್ಪದೆ ವೇದವು ಋಷಿನಿರ್ಮಿತವೆಂದು ಹೇಳತಕ್ಕವರು ಈ ಅಂಶವನ್ನು ಗಮನಿಸಬೇಕು.

೧. ವೇದದ ದ್ರಷ್ಟಾರರೆಂದು ನಾವು ಯಾರನ್ನು ಹೇಳುತ್ತೇವೋ ಅವರೇ ಈ ನವೀನ ಆಕ್ಷೇಪಕರ ದೃಷ್ಟಿಯಲ್ಲಿ ಕರ್ತಾರರು. ಕರ್ತಾರರೆನಿಸುವ ಈ ಋಷಿಗಳ ಸಂಖ್ಯೆ ಬಹಳ ದೊಡ್ಡದಿದೆ. ಇವರೆಲ್ಲರ ವಚನಗಳೂ ಪರಸ್ಪರ ವಿರೋಧವಿಲ್ಲದೆ ಹೊಂದಿಕೊಳ್ಳುತ್ತವೆ. ಇವರಿಗೆ ಭ್ರಮ, ಪ್ರಮಾದಾದಿ ದೋಷಗಳಿದ್ದರೆ ಈ ಹೊಂದಾಣಿಕೆ ಕೂಡುವುದಿಲ್ಲ. ಎಲ್ಲರಿಗೂ ಒಂದೆ ಬಗೆಯ ಭ್ರಮೆ, ಪ್ರಮಾದಾದಿಗಳು ಒದಗುವುದಿಲ್ಲ. ಅನ್ಯಮತೀಯ ಗ್ರಂಥಗಳು ಒಬ್ಬೊಬ್ಬರಿಂದಲೇ ರಚಿತವಾದದ್ದು. ಒಬ್ಬ ಮನುಷ್ಯನು ತಪ್ಪು ಮಾಡಬಹುದು.

೨. ವಾಮದೇವ, ವಸಿಷ್ಠಾದಿ ಋಷಿಗಳು ಕಠೋರವಾದ ತಪಸ್ಸಿನಲ್ಲಿ ತೊಡಗಿದವರು. ಆಹಾರದಿ ನಿಯಮಗಳನ್ನು ಚಾಚೂ ತಪ್ಪದೇ ಪಾಲಿಸುತ್ತಿದ್ದವರು. ತಪಸ್ಸಿನಿಂದ ವಿಶುದ್ಧವಾದ ಅವರ ಅಂತಃಕರಣದಲ್ಲಿ ನಮಗೆ ಗೋಚರವಾಗದ ಸತ್ಯವು ಸ್ಫುರಿಸಿಕೊಂಡರೆ ಅಚ್ಚರಿಯೇನೂ ಇಲ್ಲ. ಮಹಾದಾರ್ಶನಿಕನಾದ ಭರ್ತೃಹರಿಯು ವಾಕ್ಯಪದೀಯದಲ್ಲಿ ಹೇಳುತ್ತಾನೆ -

**ಆವಿರ್ಭೂತಪ್ರಕಾಶಾನಾಮನುಪಪ್ಲುತಚೇತಸಾಮ್ ।**
**ಅತೀತಾನಾಗತಜ್ಞಾನಂ ಪ್ರತ್ಯಕ್ಷಾನ್ನ ವಿಶಿಷ್ಯತೇ ॥**

''ರಜಸ್ತಮೋಗುಣಗಳು ಯಾರ ಚಿತ್ತವನ್ನು ಆಕ್ರಮಿಸಿಲ್ಲವೋ, ಯಾರಿಗೆ ಜ್ಞಾನಪ್ರಕಾಶವು ತಪಸ್ಸಿನಿಂದ ಒದಗಿದೆಯೋ ಅಂತಹ ಋಷಿಗಳ ಅತೀಂದ್ರಿಯ ಜ್ಞಾನವು ಪ್ರತ್ಯಕ್ಷ ಜ್ಞಾನಕ್ಕಿಂತ ಬೇರೆಯದ್ದೇನಲ್ಲ. (ನಮಗೆ ಕಾಣದ್ದನ್ನು ಅವರು ಯೋಗಬಲದಿಂದ ಕಾಣುತ್ತಿದ್ದವರು.)

**ಅತೀಂದ್ರಿಯಾನಸಂವೇದ್ಯಾನ್ ಪಶ್ಯಂತ್ಯಾರ್ಷೇಣ ಚಕ್ಷುಷಾ ।**
**ಯೇ ಭಾವಾನ್ ವಚನಂ ತೇಷಾಂ ನಾನುಮಾನೇನ ಬಾಧ್ಯತೇ ॥**

''ಇಂದ್ರಿಯಗಳಿಗೆ ಅಗೋಚರಗಳಾದ, ನಮ್ಮ ಊಹೆಗಳಿಗೂ ನಿಲುಕದ ವಿಷಯಗಳನ್ನು ಅಂತರ್ಯಾಮಿಯಾದ ಈಶ್ವರ, ದೇವತೆಗಳು, ಕರ್ಮಗಳು, ಸಂಸ್ಕಾರ, ಲಿಂಗಶರೀರ, ವಿಭಿನ್ನಲೋಕಗಳು ಇತ್ಯಾದಿಗಳನ್ನು ಅಲೌಕಿಕವಾದ ಆರ್ಷಚಕ್ಷುಸ್ಸಿನಿಂದ

ಋಷಿಗಳು ನೋಡಲು ಸಮರ್ಥರಾದವರು, ಅವರ ಮಾತನ್ನು ನಮ್ಮ ತರ್ಕದಿಂದ ನಿರಾಕರಿಸಲು ಶಕ್ಯವಿಲ್ಲ.''

**''ತಸ್ಮಾದೃಷಯೋಽವರೇಷು ನ ಜಾಯಂತೇ ನಿಯಮಾತಿಕ್ರಮಾತ್ ''**

- ಆದಕಾರಣ ನಿಯಮಗಳನ್ನು ಈಚಿನವರು ಪಾಲಿಸುವುದಿಲ್ಲವಾದ್ದರಿಂದ ಈ ಕಾಲದ ಜನರಲ್ಲಿ ಋಷಿಗಳು ಜನಿಸುವುದಿಲ್ಲ - ಎಂದು ಆಪಸ್ತಂಬರು ಹೇಳಿದ್ದಾರೆ. ಇಂತಹ ಮಹಾತ್ಮರಾದ ಋಷಿಗಳಿಗೂ - ಆಧುನಿಕ ಮತಕರ್ತರಿಗೂ ಹೋಲಿಕೆಯ ಒಂದು ಅಂಶವಾದರೂ ಉಂಟೆ? ಈ ಮತನಿರ್ಮಾತೃಗಳು ತಪಸ್ವಿಗಳೆ? ತಪಸ್ಸೆಂಬ ಶಬ್ದವನ್ನಾದರೂ ಕೇಳಿದವರೆ? ಯಾವ ನಿಯಮವನ್ನು ಪಾಲಿಸುತ್ತಿದ್ದವರು? ಇವರ ಗುರು ಯಾರು? ಈ ಜನರಿಗೆ ಓದು ಬರೆಹಗಳೂ ಕೂಡ ಬರುತ್ತಿದ್ದಿಲ್ಲ - ಎಂಬುದನ್ನು ಲಕ್ಷ್ಯದಲ್ಲಿಡಬೇಕು. ''ಮನುಷ್ಯರಿಗೆ ಮಾತ್ರ ಜೀವಾತ್ಮ ಇದೆ, ಪ್ರಾಣಿಗಳಿಗೆ ಇಲ್ಲ. ಆದ್ದರಿಂದ ಪ್ರಾಣಿಗಳನ್ನು ಕೊಂದರೆ ದೋಷವಿಲ್ಲ. ಜೀವವನ್ನು ದೇವರು ಹೊಸದಾಗಿ ಸೃಷ್ಟಿಸುತ್ತಾನೆ. ಪೂರ್ವಜನ್ಮವಾಗಲಿ, ಸಂಸ್ಕಾರವಾಗಲಿ ಇಲ್ಲ. ಮತ್ತೆ ಹುಟ್ಟುವುದೂ ಇಲ್ಲ. ನಾನು ಹೇಳುವುದೇ ಸಿದ್ಧಾಂತ. ಇತರರ ಮಾತನ್ನು ನಂಬಬೇಡಿರಿ. ನಾನು ಪ್ರತಿದಿನ ರಾತ್ರಿ ದೇವರನ್ನು ಕಂಡು ಮಾತಾಡಿಕೊಂಡು ಬರುತ್ತೇನೆ. ದೇವರು ಆಕಾಶದಲ್ಲಿ ಬಹುದೂರ ಇದ್ದಾನೆ'' ಇತ್ಯಾದಿ ಬಾಲಿಶವಚನಗಳನ್ನು ಮನ್ನಿಸಬಹುದೆ? ಎಂಬುದನ್ನು ಗಮನಿಸಬೇಕು. ಇವೆಲ್ಲವೂ ಸ್ವಬುದ್ಧಿಯಿಂದ ವಿಮರ್ಶಿಸಿಕೊಳ್ಳಬೇಕಾದದ್ದು.

## ಮೂಲಸ್ರೋತ

ಈ ಕಾಲದ ಮಹಾಯೋಗಿಯೆಂದು ವಿಖ್ಯಾತರಾದ ಶ್ರೀ ಅರವಿಂದರು ವೇದದ ವಿಷಯವಾಗಿ ನುಡಿದ ವಾಣಿ ಇದು - **''ಭಾರತೀಯ ಇತಿಹಾಸ ಪರಂಪರೆಯಲ್ಲಿ ನಮ್ಮೆಲ್ಲ ಧಾರ್ಮಿಕ ಪಂಥಗಳ, ವಿವಿಧ ಮತಗಳ ಆಧಾರ ಶಿಲೆಯು ವೇದವೇ ಎಂಬ ನಂಬಿಕೆ ಪ್ರಾಚೀನ ಕಾಲದಿಂದ ಇದೆ. ಆ ಪ್ರಾಚೀನ ದೈವೀ ವಾಙ್ಮಯವೇ ಭಾರತದ ಆಧ್ಯಾತ್ಮಿಕತೆಗೆಲ್ಲ ಜನನಿ.''** ಭಾರತದಲ್ಲಿ ಇದುವರೆಗೆ ಕಾಣಿಸಿಕೊಂಡಿರುವ ಯಾವುದೇ ದರ್ಶನ ಅಥವಾ ತಾತ್ತ್ವಿಕ ಪ್ರಸ್ಥಾನದ ವಿವರಗಳನ್ನು ನೋಡಿದರೂ ಈ ಸರಳ ತಥ್ಯ ಸ್ಫುಟಗೊಳ್ಳದಿರದು. ಅವೆಲ್ಲಕ್ಕೂ ವೇದವೇ ಸ್ಫೂರ್ತಿ ಸ್ಥಾನವೆಂಬುದು ಅಷ್ಟೊಂದು ಸ್ಪಷ್ಟವಾಗಿದೆ. ಸಾವಿರಾರು ವರ್ಷಗಳುದ್ದಕ್ಕೂ ನಮ್ಮ ಜನಾಂಗದ ಜೀವಸತ್ತ್ವ, ಶ್ರೀಮಂತಿಕೆ, ಫಲವತ್ತತೆ, ಆಧ್ಯಾತ್ಮಿಕ ಸಾಧನೆಯ ಋಜುತೆ, ಪ್ರಯತ್ನಗಳ ಸುಭಗತೆ, ಪುನರ್ನವೀಕರಣ ಈ ಎಲ್ಲದರ ಮೂಲ ಸ್ರೋತವೂ ವೇದದ ಉಕ್ತಿ ಮತ್ತು ಅರ್ಥಗಳೇ. ನಮ್ಮ ಎಲ್ಲ ಧರ್ಮಗಳ ಆವಿಷ್ಕರ್ತರು, ವ್ಯವಸ್ಥಾಪಕರು, ಪುನಸ್ಥಾಪಕರು ಎಲ್ಲರೂ ಅರಿತೋ ಅರಿಯದೆಯೋ

ಆ ಸುದೂರ ಕಾಲದ ವಾಙ್ಮಯದ ಯಾವುದೋ ಸ್ಪಂದನದಿಂದ, ಅದರ ಯಾವುದೋ ಮಾತಿನಿಂದ ಅಥವಾ ಭಾವಾರ್ಥದಿಂದ ಬೋಧಿತರಾದವರೇ. (ವೇದಾರ್ಥದ ಅವಗಾಹನೆ. ಕನ್ನಡ ಅನುವಾದ ಡಾ|| ಕೆ. ಎಚ್. ಕೃಷ್ಣಮೂರ್ತಿ)

ಶ್ರೀ ಶಂಕರಾಚಾರ್ಯರು ''ವೇದದ ಮೂರ್ಧನ್ಯಮೇಧೆಯನ್ನು ಮುಷ್ಟಿಯಲ್ಲಿ ಗ್ರಹಿಸಿದವರು'' ಎಂದು ಶ್ರೀ ಅರವಿಂದರು ಆಚಾರ್ಯರನ್ನು ಪ್ರಶಂಸಿಸಿದ್ದಾರೆ. ಶ್ರೀ ಶಂಕರಾಚಾರ್ಯರು ವೇದದ ಪ್ರಾಮಾಣ್ಯವನ್ನೂ, ಅಪೌರುಷೇಯತೆಯನ್ನೂ ಸ್ಪಷ್ಟವಾಗಿ ತಿಳಿಸುತ್ತಾರೆ.

೧. **''ನಿಯತರಚನಾವತೋ ವಿದ್ಯಮಾನಸ್ಯೈವ ವೇದಸ್ಯ ಅಭಿವ್ಯಕ್ತಿಃ ।**
**ಪುರುಷನಿಃಶ್ವಾಸವತ್, ನ ಚ ಪುರುಷಬುದ್ಧಿಪ್ರಯತ್ನಪೂರ್ವಕಃ ॥**
**ಅತಃ ಪ್ರಮಾಣ ನಿರಪೇಕ್ಷ ಏವ ಸ್ವಾರ್ಥೇ ''** (ಬೃಹ೨ -೪-೧೦)

ಗೊತ್ತಾದ ಅನುಪೂರ್ವೀ ವಿಶೇಷವಾಗಿ ಮೊದಲೇ ಇದ್ದ ವೇದವು ಮನುಷ್ಯನ ನಿಶ್ವಾಸದಂತೆ, ಪರಮಾತ್ಮನಿಂದ ಅಭಿವ್ಯಕ್ತವಾಯಿತು. ಅದು ಯಾವನೊಬ್ಬ ಪುರುಷನ ಬುದ್ಧಿಪ್ರಯತ್ನಗಳಿಂದ ರಚಿತವಾದದ್ದಲ್ಲ. ಆದ್ದರಿಂದ ವೇದವು ತಾನು ಬೋಧಿಸುವ ವಿಷಯದಲ್ಲಿ ಅನ್ಯನಿರಪೇಕ್ಷವಾಗಿ ಪ್ರಮಾಣವಾಗುತ್ತದೆ.

೨. **''ನಹಿ ಈ ದೃಶಸ್ಯ ಶಾಸ್ತ್ರಸ್ಯ ಋಗ್ವೇದಾದಿ ಲಕ್ಷಣಸ್ಯ**
**ಸರ್ವಜ್ಞಗುಣಾನ್ವಿತಸ್ಯ ಸರ್ವಜ್ಞಾದನ್ಯತಃ ಸಂಭವೋಽಸ್ತಿ''**

ಋಗ್ವೇದವೇ ಮೊದಲಾದ ವೇದ ರೂಪ ಶಾಸ್ತ್ರವು ಸರ್ವಾರ್ಥ ಪ್ರಕಾಶನ ಸಮರ್ಥವಾಗಿ ಸರ್ವಜ್ಞಗುಣಗಳಿಂದ ಕೂಡಿದೆ. ಇಂತಹ ವೇದವು ಸರ್ವಜ್ಞನಲ್ಲದೇ ಇನ್ನೊಬ್ಬನಿಂದ ಉತ್ಪನ್ನವಾಗುವ ಸಂಭವವೇ ಇಲ್ಲ.

೩. **''ಪ್ರಾಣಿನಾಂ ಸುಖಪ್ರಾಪ್ತಯೇ ಧರ್ಮೋ ವಿಧೀಯತೇ ।**
**ದುಃಖ ಪರಿಹಾರಾಯ ಚ ಅಧರ್ಮಃ ಪ್ರತಿಷಿದ್ಧ್ಯತೇ ''**

ಪ್ರಾಣಿಗಳಿಗೆ ಸುಖವು ದೊರಕಲೆಂದು ಧರ್ಮವನ್ನು ವಿಧಿಸಲಾಗಿದೆ. ದುಃಖವು ಬರದಿರಲೆಂದು ಅಧರ್ಮವನ್ನು ನಿಷೇಧಿಸಲಾಗಿದೆ.

೪. **''ದ್ವಿವಿಧೋಹಿ ವೇದೋಕ್ತೋ ಧರ್ಮಃ**
**ಪ್ರವೃತ್ತಿಲಕ್ಷಣೋ ನಿವೃತ್ತಿಲಕ್ಷಣಶ್ಚ ಜಗತಃ ಸ್ಥಿತಿ ಕಾರಣಮ್ ''**

(ಗೀತಾ ಪೀಠಿಕೆ.)

ವೇದೋಕ್ತವಾದ ಧರ್ಮವು ಪ್ರವೃತ್ತಿ, ನಿವೃತ್ತಿ ಎಂದು ಎರಡು ವಿಧ. ಇವು ಜಗತ್ತಿನ ಸ್ಥಿತಿಗೆ ಕಾರಣವಾದವುಗಳು.

## ಶ್ರೇಯಸ್ಸು - ನಿಃಶ್ರೇಯಸ್ಸು

ವೇದೋಕ್ತವಾದ ಧರ್ಮವು ಎರಡು ವಿಧ. ಒಂದು ಪ್ರವೃತ್ತಿ ರೂಪವಾದದ್ದು. ಇನ್ನೊಂದು ನಿವೃತ್ತಿರೂಪವಾದದ್ದು. ಪ್ರವೃತ್ತಿಯು ಕ್ರಿಯಾತ್ಮಕವಾದದ್ದು. ವಿವಾಹ, ಧನಾರ್ಜನೆ, ಯಜ್ಞ- ಮುಂತಾದ ಕ್ರಿಯೆಗಳನ್ನು ಶಾಸ್ತ್ರೋಕ್ತವಾಗಿ ನೆರವೇರಿಸುವುದು ಪ್ರವೃತ್ತಿ. ಪತ್ನೀ, ಪುತ್ರ, ಗೃಹ, ಧನಾದಿಗಳ ಸಂಗ್ರಹ, ಇವುಗಳಿಂದಾಗುವ ಲೌಕಿಕ ಸುಖವನ್ನು ಅಭ್ಯುದಯವೆನ್ನುತ್ತಾರೆ. ಶ್ರೇಯಸ್ಸು ಎಂದರೂ ಇದೇ ಶಮ, ದಮ, ತಪಸ್ಸು, ವೈರಾಗ್ಯ ಮುಂತಾದ ದೈವೀ ಸಂಪತ್ತಿನ ಆರ್ಜನೆ ನಿವೃತ್ತಿ ಎನಿಸಿಕೊಳ್ಳುತ್ತದೆ. ಇದರಲ್ಲಿಯೂ ಸೂಕ್ಷ್ಮವಾದ ಕ್ರಿಯೆಯುಂಟು. ಇದನ್ನು ನಕಾರಾತ್ಮಕವಾದ ಕ್ರಿಯೆ ಎನ್ನಬಹುದು. ಮೋಕ್ಷವೇ ಇದರ ಪರಮ ಗುರಿ. ನಿವೃತ್ತಿಯು ಇದಕ್ಕೆ ಸಾಧನ. ಈ ಮೋಕ್ಷವನ್ನು ನಿಃಶ್ರೇಯಸವೆನ್ನುತ್ತಾರೆ. ಎಲ್ಲ ಶ್ರೇಯಸ್ಸುಗಳಿಗಿಂತ ಅಧಿಕವಾದದ್ದು ನಿಃಶ್ರೇಯಸ. ಏವಂಚ ಅಭ್ಯುದಯ ನಿಃಶ್ರೇಯಗಳಿಗೆ ಸಾಧನವಾದದ್ದು ಧರ್ಮವೆಂದು ಸಿದ್ಧವಾಗುತ್ತದೆ. ಆದ್ದರಿಂದಲೇ ''**ಯತೋಽಭ್ಯುದಯ ನಿಃಶ್ರೇಯಸಸಿದ್ಧಿಃ ಸ ಧರ್ಮಃ**'' ಎಂದು ಕಣಾದ ಮುನಿಗಳು ವೈಶೇಷಿಕ ಸೂತ್ರದಲ್ಲಿ ಹೇಳಿದ್ದಾರೆ.

ಈ ಅಭ್ಯುದಯ ನಿಃಶ್ರೇಯಸಗಳನ್ನು ಬಿಟ್ಟು ಮಾನವನು ಬಯಸತಕ್ಕದ್ದಾದರೂ ಯಾವುದು? ಕೀರ್ತಿಯೂ ಅಭ್ಯುದಯದಲ್ಲಿಯೇ ಸೇರುತ್ತದೆ. ಪ್ರಾಯೇಣ ಸಕಲ ಮಾನವರೂ ಅಭ್ಯುದಯಕ್ಕಾಗಿಯೇ ಹೆಣಗುತ್ತಿದ್ದಾರೆ. ನಿಃಶ್ರೇಯಸವನ್ನು ಬಯಸತಕ್ಕ ಪುಣ್ಯಾತ್ಮರು ಕೆಲವರಿರಬಹುದು. ಅದು ಹೇಗಾದರೂ ಇರಲಿ. ಆ ವಿಚಾರವು ನಮಗೆ ಪ್ರಕೃತವಲ್ಲ. ಮನುಷ್ಯನು ಬಯಸುವ ಸಕಲಸುಖಗಳಿಗೂ ಕಾರಣವಾದದ್ದು ಧರ್ಮ ಒಂದೇ ಎಂಬುದು ನಿರ್ವಿವಾದವಾದದ್ದು. ಈ ಧರ್ಮದ ಸ್ವರೂಪವನ್ನು ತಿಳಿಸಿಕೊಡತಕ್ಕ ಮೂಲ ಸ್ರೋತವು ವೇದವು ಮಾತ್ರ ಎಂಬುದು ''**ವೇದೋಽಖಿಲೋ ಧರ್ಮಮೂಲಂ**'' ಎಂದು ಹೇಳಿದ ಮನುವಿನ ಆಶಯ.

ಅತ್ಯಂತ ಗಂಭೀರವೂ ಗಹನವೂ ಆದ ಈ ಧರ್ಮಮೂಲವನ್ನು ಕಂಡವರು ಋಷಿಗಳು. ''**ಸಾಕ್ಷಾತ್‌ಕೃತಧರ್ಮಾಣೋ ಋಷಯೋ ಭಭೂವುಃ**'' ಎಂದು ಯಾಸ್ಕರು ಹೇಳಿದ್ದಾರೆ. ಋಷಿ - ಮುನಿ ಎಂಬ ಪದಗಳನ್ನು ನಾವೀಗ ಸಮಾನಾರ್ಥದಲ್ಲಿ ಬಳಸುತ್ತಿದ್ದೇವೆ. ಇವುಗಳಲ್ಲಿ ಅರ್ಥಭೇದವುಂಟು. ಮಂತ್ರ ದೃಷ್ಟಾರರು ಮಾತ್ರ

ಋಷಿಗಳು. ಇತರ ತಪಸ್ವಿಗಳು ಮುನಿಗಳು. ಋಷಿಗಳ ಸ್ಥಾನವು ಬಹುದೊಡ್ಡದು. ಆಹಾರಾದಿ ನಿಯಮಗಳನ್ನು ಚಾಚೂ ತಪ್ಪದೇ ಪಾಲಿಸುತ್ತ ತಪಸ್ಸಿನಲ್ಲಿ ನಿರತರಾದವರು ಋಷಿಗಳು. ವೇದವು ಅವರಿಗೆ ಮಾತ್ರ **''ಅಭ್ಯಾನರ್ಷತ್''** ಎಂದು ಯಾಸ್ಕರು ಹೇಳುತ್ತಾರೆ. ಆ ಋಷಿಗಳ ಅನಂತರ ತಪಸ್ವಿಗಳೂ ಸಹ ನಿಯಮಗಳನ್ನೇ ಸರಿಯಾಗಿ ಪಾಲಿಸುವುದಿಲ್ಲವಾದ್ದರಿಂದ ಋಷಿಗಳು ಹುಟ್ಟುವುದೇ ಇಲ್ಲವೆಂದು ಧರ್ಮಸೂತ್ರಕಾರರಾದ ಆಪಸ್ತಂಬರು ಹೇಳುತ್ತಾರೆ. **''ತಸ್ಮಾದವರೇಷು ಋಷಯೋನ ಜಾಯಂತೇ ನಿಯಮಾತಿಕ್ರಮಾತ್''**. '' ವೇದವು ಪ್ರಮಾಣವಾದರೆ ಅವೈದಿಕ ಮತಾಂತರಗಳನ್ನು ಹುಟ್ಟಿ ಹಾಕಿದ ಇತರ ಗ್ರಂಥಗಳು ಏಕೆ ಪ್ರಮಾಣವಲ್ಲವೆಂದು' ಅಡ್ಡಾದಿಡ್ಡಿಯಾಗಿ ವಾದಿಸತಕ್ಕವರು ಇದನ್ನು ಗಮನಿಸಲಿ. ಆ ಗ್ರಂಥಗಳ ಕರ್ತೃಗಳು ಯಾವ ರೀತಿಯಲ್ಲಿ ಋಷಿಗಳಾಗುತ್ತಾರೆಂಬುದನ್ನು ಆತ್ಮಸಾಕ್ಷಿಯಾಗಿ ಪರ್ಯಾಲೋಚಿಸಲಿ.

## ಧರ್ಮವೇ ಪ್ರಮಾಣ

ಮನುಷ್ಯನು ಎಷ್ಟಾದರೂ ಅಲ್ಪಜ್ಞ. ಅವನ ವಿಚಾರಶಕ್ತಿ ಕುಂಠಿತವಾದದ್ದು. ಕಣ್ಣಿಗೆ ಕಾಣುವ, ಎದುರಿಗಿರುವ ಪಂಚಭೂತಗಳ ನಿರ್ಮಾಣ ಹೇಗಾಯಿತು? ಅವುಗಳಲ್ಲಿರತಕ್ಕ ಊಹಾತೀತ ಶಕ್ತಿಗಳು ಯಾವುವು? - ಎಂಬುದನ್ನೇ ಪೂರ್ಣವಾಗಿ ಅರಿಯಲಾರದ ಈ ಅಲ್ಪ ಮಾನವನು ಕಣ್ಣಿಗೆ ಕಾಣದ ಪರಮಾರ್ಥವನ್ನು ತಿಳಿದು **'ಇದಮಿತ್ಥಂ'** ಎಂದು ಹೇಳಬಲ್ಲನೆ? ಇದು ಧರ್ಮ- ಇದು ಅಧರ್ಮ ಎಂದು ನಿರ್ಣಯಿಸಬಲ್ಲನೆ? ಮನುಷ್ಯರೆಲ್ಲರೂ **''ಪ್ರಾಯೇಣ ಅನೃತವಾದಿಗಳು''** ಎಂದು ಶಾಸ್ತ್ರಕಾರರು ಅಲ್ಲಲ್ಲಿ ಬರೆಯುತ್ತಾರೆ. 'ಮನುಷ್ಯರು ಸುಳ್ಳು ಹೇಳತಕ್ಕವರು' ಎಂದು ಅದರ ಅರ್ಥವಲ್ಲ. ಮತ್ತೇನೆಂದರೆ ''ಸತ್ಯವನ್ನು ಕಂಡುಹಿಡಿದು ಹೇಳಲು ಅಸಮರ್ಥರು'' ಎಂದರ್ಥ. ಇದೆಲ್ಲವನ್ನೂ ಮಹಾದಾರ್ಶನಿಕನಾದ ಭರ್ತೃಹರಿಯು ವಾಕ್ಯಪದೀಯವೆಂಬ ತನ್ನ ಗ್ರಂಥದಲ್ಲಿ ವಿಚಾರ ಮಾಡಿ **''ಸತ್ಯಾವಿಶುದ್ಧಿಸ್ತತ್ರೋಕ್ತಾ''** ಎಂದು ಬರೆದು ನಿತ್ಯವಾದ ವೇದದ ಕಡೆಗೆ ಬೆರಳು ತೋರಿಸುತ್ತಾನೆ. ಪರಿಶುದ್ಧವಾದ ಸತ್ಯವು ವೇದದಲ್ಲಿ ಮಾತ್ರ ಉಕ್ತವಾಗಿದೆಯೆಂದು ಅದರ ಅರ್ಥ. ಇತರ ಗ್ರಂಥಗಳೆಲ್ಲವೂ ಮನುಷ್ಯ ನಿರ್ಮಿತಗಳಾದ್ದರಿಂದ ಕೃತಕಗಳೆಂದು ಈ ಕೃತಕಗಳಿಂದ ಅಕೃತಕವಾದ ವೇದಕ್ಕೆ ಯಾವ ಬಾಧೆಯೂ ಇಲ್ಲವೆಂದೂ ಘೋಷಿಸುತ್ತಾನೆ. ಇದೆಲ್ಲವನ್ನೂ ಪರಿಶೀಲಿಸಿ ವಿಚಾರ ಮಾಡಿ ಮನುವು **''ವೇದೋಽಖಿಲೋ ಧರ್ಮ ಮೂಲಂ''** ಎಂಬ ನಿರ್ಣಯವನ್ನಿತ್ತಿದ್ದಾನೆ.

**ಸ್ಮೃತಿಶೀಲೇ ಚ ತದ್ವಿದಾಮ್** - ವೇದವು ಅನಂತವಾದದ್ದು. ಅದರಲ್ಲಿದ್ದ ಎಷ್ಟೋ ವಾಕ್ಯಗಳು ಈಗ ನಷ್ಟವಾಗಿವೆ. ಅಲ್ಲದೆ ವೇದವು ಕೆಲವು ಅಂಶಗಳನ್ನು ಸೂಚ್ಯವಾಗಿ

ತಿಳಿಸುತ್ತದೆ. ಅದರ ವಿವರಣೆ ಇರುವುದಿಲ್ಲ. ಅದೆಲ್ಲವನ್ನೂ ತಿಳಿದಿರುವ ಮನ್ವಾದಿಸ್ಮೃತಿಕಾರರು ಧರ್ಮಶಾಸ್ತ್ರಗಳನ್ನು ರಚಿಸಿದ್ದಾರೆ. ಧರ್ಮಶಾಸ್ತ್ರಗಳಾದರೋ ವೇದೋಕ್ತವಾದ್ದನ್ನು ಸ್ಮರಿಸಿಕೊಂಡು ರಚಿತವಾದವು. ದೇಶಕಾಲಗಳು ವಿಭಿನ್ನವಾಗಿರುವುದರಿಂದ ಅನೇಕ ಸ್ಮೃತಿಗಳ ರಚನೆಯಾಯಿತು. ಎಷ್ಟಾದರೂ ಸ್ಮೃತಿಯು ಮನುಷ್ಯ ರಚಿತವಾದದ್ದು. ಹೇಳಬೇಕಾದ ಎಷ್ಟೋ ವಿಷಯಗಳು ಬಿಟ್ಟು ಹೋಗಿರಬಹುದು. ಎಷ್ಟೋ ಅಂಶಗಳಿಗೆ ಹೆಚ್ಚಿನ ವಿವರಣೆ ಬೇಕಾಗುತ್ತದೆ. ಇತ್ಯಾದಿ ಕಾರಣಗಳಿಂದ ಅ ೇ ಸ್ಮೃತಿ ಗ್ರಂಥಗಳೂ ಧರ್ಮಸೂತ್ರಗಳೂ ಬೇರೆ ಬೇರೆ ಕಾಲದಲ್ಲಿ ರಚಿತವಾಗಿವೆ. ಹಾಗೆಯೇ ಮನುಸ್ಮೃತಿಗೆ ಇತರ ಸ್ಮೃತಿಯು ವಿರುದ್ಧವಾಗಿದ್ದರೆ, ಅದೂ ಗ್ರಾಹ್ಯವಲ್ಲ. **"ಮನು ಸ್ಮೃತೇರ್ವಿರುದ್ಧಾ ಯಾ ಸಾ ಸ್ಮೃತಿರ್ನೈವಶಸ್ಯತೇ"** ಎಂದು ಸ್ಮೃತಿಕಾರರೇ ಒಪ್ಪಿಕೊಂಡಿದ್ದಾರೆ. ತದ್ವಿದಾಂ - ವೇದವನ್ನು ಚೆನ್ನಾಗಿ ಬಲ್ಲವರ ಸ್ಮೃತಿ ಶೀಲಗಳೂ ಧರ್ಮಕ್ಕೆ ಪ್ರಮಾಣ. ಶೀಲವೆಂದರೆ ವೇದಜ್ಞರ ಸ್ವಭಾವ, ಅವರಲ್ಲಿ ಕಂಡುಬರುವ ಸದ್ಗುಣವೆಂದರ್ಥ. ಆ ಸದ್ಗುಣಗಳು ಯಾವುವೆಂಬುದನ್ನು ಇಲ್ಲಿ ವಿವರಿಸಿಲ್ಲ. ಅದನ್ನು ಹಾರೀತಸ್ಮೃತಿಯು ವಿವರಿಸುತ್ತದೆ. ಅವು ಯಾವುವೆಂದರೆ : ಬ್ರಹ್ಮಣ್ಯತೆ - ವೇದದಲ್ಲಿ ಪೂಜ್ಯ ಭಾವನೆ, ದೇವಭಕ್ತಿ, ಪಿತೃಭಕ್ತಿ, ಸೌಮ್ಯತೆ, ಪರಹಿಂಸಾವರ್ಜನ, ಹೊಟ್ಟೆಕಿಚ್ಚು ಪಡದಿರುವುದು, ಮೃದು ಸ್ವಭಾವ, ಕಠೋರವಾದ ಮಾತನ್ನೂ, ನಡೆವಳಿಕೆಯನ್ನೂ ವರ್ಜಿಸುವುದು, ಪ್ರಿಯವಾದ ಮಾತನ್ನಾಡುವುದು, ಕೃತಜ್ಞತೆ, ಸರ್ವರಲ್ಲಿಯೂ ಸ್ನೇಹ, ಆಶ್ರಯವನ್ನು ಬಯಸಿದವರಿಗೆ ನೆರವು, ಕಾರುಣ್ಯ ಮತ್ತು ಸರ್ವದಾ ಮನಃಶಾಂತಿ - ಇವು ಶೀಲಗಳು. ಎಲ್ಲರಿಗೂ ಅನುಕರಣೀಯವಾದವು. ಇವೆಲ್ಲವೂ ನಮ್ಮ ಆಚರಣೆಗೆ ಪ್ರಮಾಣಗಳೆಂದು ತಿಳಿಯಬೇಕು. **ಆಚಾರಶ್ಚೈವ ಸಾಧೂನಾಂ** = ಸಜ್ಜನರ ಆಚಾರವೂ ಧರ್ಮಕ್ಕೆ ಪ್ರಮಾಣ. ಆಚಾರವೆಂದರೆ ಉತ್ತಮ ಸಂಸ್ಕೃತಿಯನ್ನು ಬಿಂಬಿಸುವ ಕ್ರಿಯಾ ವಿಧಾನ. ವಿವೇಚನಾ ಪೂರ್ಣವಾದ ಒಂದು ನಡತೆ. ಒಂದು ಪದ್ಧತಿ. ಉದಾಹರಣೆಗೆ , ಪಂಚೆ, ಸೀರೆಗಳನ್ನುಡುವ ರೀತಿ, ನಡೆಯುವಾಗ, ಕುಳಿತುಕೊಳ್ಳುವಾಗ ಸಹಜವಾದ ಒಂದು ಗಾಂಭೀರ್ಯ, ಯಾರಿಗೆ ಹೇಳಬೇಕೋ ಆತನಿಗೆ ಕೇಳಿಸುವಷ್ಟು ಮಾತ್ರ ಗಟ್ಟಿಯಾದ ಧ್ವನಿಯಿಂದ ಮಾತನಾಡುವುದು, ಕೆಮ್ಮು ಬಂದರೆ ಪಕ್ಕಕ್ಕೆ ತಿರುಗಿಕೊಂಡು ಕೆಮ್ಮುವುದು, ತಿನ್ನುವಾಗ ಕುಡಿಯುವಾಗ ಸರ್‌ಪರ್ ಎಂದು ಶಬ್ದ ಮಾಡದೇ ಇರುವುದು ಇತ್ಯಾದಿ. ಇದೆಲ್ಲವನ್ನೂ ಗ್ರಂಥಗಳಲ್ಲಿ ಬರೆದಿಡುವುದು ಶಕ್ಯವಾದ್ದಲ್ಲ. ಸಜ್ಜನರ ಆಚಾರದಿಂದ ತಿಳಿದುಕೊಳ್ಳಬೇಕಾದದ್ದು. ಸಾಧುಗಳೆಂದರೆ ಧರ್ಮಾತ್ಮರು ಎಂದರ್ಥ.

ಧರ್ಮದ ಗೆರೆಯನ್ನು ಮೀರಿ ಹೋಗಿದ್ದೇನೋ ಇಲ್ಲವೋ ಎಂಬುದು

ಪ್ರತಿಯೊಬ್ಬನಿಗೂ ತಿಳಿದಿರುತ್ತದೆ. ಪ್ರತಿಯೊಬ್ಬನೂ ಮನಬಂದಂತೆ ಇದನ್ನು ಪ್ರಮಾಣವೆಂದು ತಿಳಿಯಕೂಡದು. ಅಲ್ಲದೆ ಯಾವುದಾದರೊಂದು ಧರ್ಮಸಂಕಟದ ಸಮಯ ಬಂದಾಗ ಉಪಯೋಗಿಸತಕ್ಕದ್ದು ಇದು. ಸಾರ್ವತ್ರಿಕವಾಗಿ ಅಲ್ಲ. ಧರ್ಮನಿಷ್ಠೆಯಿಂದ ಯಾರ ಮನಸ್ಸು ಅತ್ಯಂತ ಶುದ್ಧವಾಗಿದೆಯೋ ಯಾವ ಸಂದರ್ಭದಲ್ಲಿಯೂ ಅಧರ್ಮದ ಕಡೆಗೆ ಮನಸ್ಸು ಓಡಿಲ್ಲವೋ ಅವರು ಒಂದು ಸನ್ನಿವೇಶದ ಬಿಕ್ಕಟ್ಟು ಬಂದಾಗ ತಮ್ಮ ಹೃದಯ ಪ್ರವೃತ್ತಿಯಿಂದ ಇದು ಧರ್ಮವೋ ಅಧರ್ಮವೋ ಎಂದು ನಿರ್ಣಯಿಸಿಕೊಳ್ಳುತ್ತಾರೆ. ಈ ಪ್ರಕಾರವಾಗಿ ವೇದವೇ ಧರ್ಮಕ್ಕೆ ನಿರ್ಣಾಯಕವೆಂದೂ ಸ್ಮೃತಿ, ಶೀಲ, ಆಚಾರ, ಆತ್ಮತುಷ್ಟಿ ಇವೆಲ್ಲವೂ ವೇದಮೂಲಕವಾಗಿಯೇ ಧರ್ಮವನ್ನು ಗೊತ್ತುಮಾಡುತ್ತವೆಯೆಂದೂ ಸಿದ್ಧವಾಗುತ್ತದೆ.

## ಧರ್ಮ ಮತ್ತು ಧರ್ಮದ ಭೇದಗಳು

ಸ್ವರ್ಗ ಅಪವರ್ಗ (ಮೋಕ್ಷ)ಗಳಿಗೆ ಕಾರಣವಾದದ್ದು ಧರ್ಮವೆಂದು ಹಿಂದೆ ಹೇಳಿದ್ದಾಗಿದೆ. ಈ ಧರ್ಮವು ವೇದಮೂಲಕವಾಗಿದ್ದು ಮನ್ವಾದಿಸ್ಮೃತಿಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಸ್ವರ್ಗವನ್ನಾಗಲಿ, ಅಪವರ್ಗವನ್ನಾಗಲಿ ಸಾಧಿಸಬೇಕಾದರೆ ಮನುಷ್ಯನ ಜೀವನದಲ್ಲಿ ನೆಮ್ಮದಿ ಇರಬೇಕು. ಮೊದಲು ನಮ್ಮ ದೇಹ, ಕುಟುಂಬ, ಗ್ರಾಮ, ರಾಜ್ಯ, ರಾಷ್ಟ್ರ ಇವೆಲ್ಲವುಗಳ ನೆಮ್ಮದಿಯೂ ಪರಸ್ಪರ ಸಾಪೇಕ್ಷವಾದ್ದರಿಂದ ಇವುಗಳ ಹಿತಕ್ಕೆ-ಸ್ವಾಸ್ಥ್ಯಕ್ಕೆ ಬೇಕಾದ್ದೆಲ್ಲವೂ ಧರ್ಮವೇ. ''**ಧರ್ಮೋಧಾರಯ ತೇ ಪ್ರಜಾಃ ಧಾರಣಾದ್ಧರ್ಮ ಇತ್ಯಾಹುಃ**'' ಇತ್ಯಾದಿ ವಚನಗಳು ಧರ್ಮವೇ ಜನರನ್ನೂ ಗ್ರಾಮರಾಜ್ಯಾದಿಗಳನ್ನೂ ರಕ್ಷಿಸುತ್ತದೆ ಎಂದು ತಿಳಿಸುತ್ತದೆ. ಇವೆಲ್ಲವನ್ನೂ ಯಾವುದು ಧಾರಣ ಮಾಡುತ್ತದೆಯೋ ಅದು ಧರ್ಮವೆಂದು ಧರ್ಮಶಬ್ದದ ಅರ್ಥ. ಒಟ್ಟಿನಲ್ಲಿ ಈ ಜಗತ್ತನ್ನು ಯಾವುದು ಧರಿಸಿದೆಯೋ, ಯಾವುದು ಇದನ್ನು ಪೋಷಿಸಿ ಬೆಳೆಸುತ್ತದೆಯೋ ಅದು ಧರ್ಮವೆಂದು ಮಥಿತಾರ್ಥವಾಗುತ್ತದೆ. ' **ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ** ' ಎಂಬ ಉಕ್ತಿಯು ಇದನ್ನೇ ಸಮರ್ಥಿಸುತ್ತದೆ. ಏವಂಚ ಧರ್ಮವು ಕೇವಲ ವ್ಯಕ್ತಿಗತವಲ್ಲ, ಕುಟುಂಬ ಮಾತ್ರ ಗತವಲ್ಲ. ಅದು ರಾಷ್ಟ್ರವ್ಯಾಪಿಯೂ, ವಿಶ್ವವ್ಯಾಪಿಯೂ ಆದದ್ದೆಂದು ಸಿದ್ಧವಾಗುತ್ತದೆ. ಕನಿಷ್ಠಪಕ್ಷದಲ್ಲಿ ಧರ್ಮವು ಒಂದು ರಾಷ್ಟ್ರವ್ಯಾಪ್ತಿಯಾಗದೇ ಹೋದಲ್ಲಿ, ಸಮಾಜವಾಗಲಿ, ಕುಟುಂಬವಾಗಲಿ, ವ್ಯಕ್ತಿಯಾಗಲಿ ತಮ್ಮ ತಮ್ಮ ಧರ್ಮವನ್ನು ಕಾಪಾಡಿಕೊಳ್ಳುವುದು ಅತ್ಯಂತ ಕ್ಲಿಷ್ಟವೆಂದು ತಿಳಿಯಬೇಕು. ಈ ಕಾರಣದಿಂದಲೆ ಈ ಮನ್ವಾದಿಧರ್ಮ ಶಾಸ್ತ್ರಕಾರರು ಧರ್ಮವನ್ನು ಹಲವು ವಿಧಗಳಲ್ಲಿ ವಿಂಗಡಿಸಿ ರಾಜಧರ್ಮವನ್ನೂ ತಮ್ಮ ಧರ್ಮಶಾಸ್ತ್ರಗಳಲ್ಲಿ ಅಳವಡಿಸಿದ್ದಾರೆ.

ರಾಜಧರ್ಮಕ್ಕೆ ದಂಡನೀತಿಯೆಂದು ಇನ್ನೊಂದು ಹೆಸರಿದೆ. ವರ್ಣಧರ್ಮ, ಆಶ್ರಮಧರ್ಮ, ವರ್ಣಾಶ್ರಮಧರ್ಮ, ಗುಣಧರ್ಮ, ನಿಮಿತ್ತಧರ್ಮ, ಸಾಧಾರಣ ಧರ್ಮ ಎಂದು ಸ್ಥೂಲವಾಗಿ ಇದು ಆರು ವಿಧ. ರಾಜಧರ್ಮ ಅಥವಾ ದಂಡನೀತಿಯೆನ್ನುವುದು ಗುಣಧರ್ಮದಲ್ಲಿ ಸೇರುತ್ತದೆ.

ರಾಜನೂ ಧರ್ಮದ ಕಟ್ಟಿಗೆ ಒಳಪಟ್ಟವನು. ಪ್ರಜೆಗಳು ಧರ್ಮ ಮಾರ್ಗದಲ್ಲಿಯೇ ಹೋಗುವಂತೆ ನೋಡಿಕೊಳ್ಳುವುದು ಅವನ ಪ್ರಥಮ ಕರ್ತವ್ಯ. ಸ್ವತಂತ್ರವಾಗಿ ಅವನು ಯಾವ ಶಾಸನವನ್ನೂ ಧರ್ಮ ವಿರುದ್ಧವಾಗಿ ಮಾಡುವಂತಿಲ್ಲ. ಸ್ವತಃ ತಾನೂ ಗೊತ್ತಾದ ನಿಯಮಕ್ಕೆ ವಿರುದ್ಧವಾಗಿ ನಡೆಯುವಂತಿಲ್ಲ. ಆತನ ಸರಕಾರವು, ರೈಲುಬಂಡಿ ಹಳಿಗಳ ಮೇಲೆಯೇ ಚಲಿಸುವಂತೆ, ಧಾರ್ಮಿಕ ಹಳಿಗಳ ಮೇಲೆಯೇ ಚಲಿಸಬೇಕು. ಜಾಚೂತಪ್ಪಿದರೆ ಉರುಳಿಬಿದ್ದೀತು. ಯಾವುದೇ ಲೌಕಿಕಸುಖದ ಬಯಕೆಯೂ ಇಲ್ಲದ ವಿರಕ್ತರಾದ ಋಷಿಗಳು ಲೋಕಹಿತಕ್ಕಾಗಿ ನಿರೂಪಿಸಿದ ಮಾರ್ಗವಿದು. ರಾಜರನ್ನೇ ನಿಯಂತ್ರಿಸಲು ಸಮರ್ಥರಾಗಿದ್ದ ಈ ಋಷಿಜನರು ಯಾವ ಸಂದರ್ಭದಲ್ಲಿಯೂ ರಾಜ್ಯಸೂತ್ರವನ್ನು ತಾವೇ ಹಿಡಿದು ನಡೆಸಲಿಲ್ಲ. ಯಾವ ರಾಜಭೋಗವನ್ನೂ ಅನುಭವಿಸಲಿಲ್ಲ. ಇದೇನೂ ಅತ್ಯುಕ್ತಿಯಲ್ಲ; ಹುರುಳಿಲ್ಲದ ಆತ್ಮೀಯ ಪ್ರಶಂಸೆಯೂ ಅಲ್ಲ. ಈ ಮಾತಿಗೊಂದು ನಿದರ್ಶನವು ಇತಿಹಾಸದಲ್ಲಿಯೇ ದೊರೆಯುತ್ತದೆ.

ಮನುಷ್ಯ ಜಾತಿಯ ಸಕಲ ಕ್ರಿಯೆಗಳೂ ಧರ್ಮಪೂರ್ವಕವಾಗಿಯೇ ಇರಬೇಕೆಂಬುದು ಮನುವಿನ ಶಾಸನ. ಇದಕ್ಕೆ ಶೂದ್ರನೂ ಹೊರತಲ್ಲ. ಶೂದ್ರನೂ ಮನುಷ್ಯನೇ ಸರಿಯಷ್ಟೆ. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳು ಸಕಲ ಮಾನವರಿಗೂ ಸೇರಿದವು. ಅದೇನೂ ಬ್ರಾಹ್ಮಣಾರ್ಥವಲ್ಲ. ಅವರವರ ಅರ್ಹತೆಗೆ ತಕ್ಕಂತೆ ಅನುಶಾಸನಗಳು ಭಿನ್ನವಾಗಬಹುದು. ಶಾಲೆಗಳಲ್ಲಿ ತರಗತಿಗೆ ತಕ್ಕಂತೆ ಪಠ್ಯ ಪುಸ್ತಕಗಳಿರುತ್ತವೆ. ವಿದ್ವತ್ ಪರೀಕ್ಷೆಗೆ ಗೊತ್ತಾದ ಪಠ್ಯ ಪುಸ್ತಕವು ಪ್ರಥಮ ಪರೀಕ್ಷೆಗೆ ಸಲ್ಲದು. ಎಂ. ಎ. ತರಗತಿಯ ಪಠ್ಯವು ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಿಗಲ್ಲ.

**ಈ ವೇದೋಕ್ತ ಧರ್ಮವು ಮಾನವ ಜನಾಂಗದ ಕಲ್ಯಾಣಕ್ಕಾಗಿ ಇದೆಯೇ ಹೊರತು, ಯಾವುದೇ ಒಂದು ಜಾತಿಯವರ ಅಥವಾ ಒಂದು ದೇಶದವರ ಉದ್ಧಾರಕ್ಕಾಗಿ ಅಲ್ಲ. ಯಾವನೇ ಒಬ್ಬ ಮನಷ್ಯನು ಗೊತ್ತು ಮಾಡಿದ್ದಲ್ಲವಾದ್ದರಿಂದ ಯಾರ ಸ್ವಾರ್ಥಲೇಶವೂ ಇದರಲ್ಲಿರಲು ಶಕ್ಯವಲ್ಲ.** ಅಥವಾ ಭ್ರಮ ಪ್ರಮಾದಗಳಿಂದ ಅನರ್ಥಕಾರಿಯಾಗಿ ಪರಿಣಮಿಸತಕ್ಕದ್ದಲ್ಲ. ಧರ್ಮ, ದರ್ಶನ, ಮತ ಇವು ಮೂರೂ ಭಿನ್ನ ಸ್ವರೂಪದವು. ಇವುಗಳನ್ನು ಒಂದಕ್ಕೊಂದು ತಳಕು ಹಾಕಿ ರಾಜಕೀಯಸ್ಥರು

ಗೊಂದಲವನ್ನೆಬ್ಬಿಸಿಬಿಟ್ಟಿದ್ದಾರೆ. ಧರ್ಮವು ಸಮಸ್ತ ಜಗತ್ತಿಗೂ ಸಕಲ ಮಾನವರಿಗೂ ಸಂಬಂಧಿಸಿದ, ಸರ್ವವ್ಯಾಪಕವಾದ, ಸರ್ವರ ಕ್ಷೇಮಕ್ಕೂ ಕಾರಣವಾದ ಒಂದು ಕಟ್ಟಳೆ - ನಿಯಮ. ದರ್ಶನವು ಜೀವ - ಜಗತ್ತು - ಈಶ್ವರರೆಂಬ ಮೂರು ವಸ್ತುಗಳ ಸ್ವರೂಪವನ್ನೂ, ಅನ್ಯೋನ್ಯ ಸಂಬಂಧವನ್ನೂ ವಿಮರ್ಶಿಸುವ ಒಂದು ಗಾಢ ಚಿಂತನ. ಪಾರಮಾರ್ಥಿಕವಾದ ಒಂದು ಗುರಿ ಇದ್ದರೆ ಅದನ್ನು ಸಾಧಿಸುವ ಮಾರ್ಗವೇ ಮತ. ಇದು ಈ ಮೂರು ಪದಾರ್ಥಗಳನ್ನು ಸಂಕ್ಷೇಪವಾಗಿ ಪರಿಚಯಿಸಬಹುದಾದ ಲಕ್ಷಣ. ಇವುಗಳಲ್ಲಿ ಮತವು ಆಯಾ ಜನರು ನಂಬಿದ ದರ್ಶನಕ್ಕೆ ಮಾತ್ರ ಸಂಬಂಧಿಸಿದ್ದು. ದರ್ಶನವು ಒಂದು ಸ್ವತಂತ್ರವಾದ ವಿಚಾರ. ಆದು ಆಯಾ ವ್ಯಕ್ತಿಯ ನಂಬಿಕೆಗೆ ಸಂಬಂಧಿಸಿದ್ದು. ಧರ್ಮವು ಮಾತ್ರ ಸರ್ವವ್ಯಾಪಕವೂ, ಸರ್ವಾತೀತವೂ, ಆಗಿದ್ದು ಆಕಾಶದಂತೆ ವಿಭುವಾಗಿ ವರ್ತಿಸುತ್ತದೆ.

ಇದರ ಹೆಸರು ' ಧರ್ಮ ' ಎಂದಿಷ್ಟೇ. ವಿಶೇಷಣಾಪೇಕ್ಷೆ ಇದ್ದರೆ ಮಾನವ ಧರ್ಮವೆಂದೋ, ಸನಾತನ ಧರ್ಮವೆಂದೋ ಹೇಳಬಹುದು. ವಿಶ್ವಧರ್ಮ ಎಂದರೂ ಸರಿಯೇ. ಹಿಂದೂ ಧರ್ಮ ಎನ್ನುವುದು ಅವ್ಯಾಪ್ತಿ ದೋಷಗ್ರಸ್ತವಾಗುತ್ತದೆ. ಮೂರ್ತಿಪೂಜೆ, ಭಸ್ಮ, ರುದ್ರಾಕ್ಷ ಮೊದಲಾದವುಗಳ ಧಾರಣೆ, ಕುಂಕುಮ ಹಚ್ಚಿಕೊಳ್ಳುವುದು, ತೀರ್ಥಯಾತ್ರೆ ಮೊದಲಾದವುಗಳು ಮತಾಚಾರಗಳು. ಅದ್ವೈತ, ದ್ವೈತ, ಸಾಂಖ್ಯ, ಶಾಕ್ತ, ಬೌದ್ಧ, ಜೈನ ಇವು ದರ್ಶನಗಳು.

ವಸ್ತು ಪರಿಸ್ಥಿತಿ ಹೀಗಿರುವಾಗ ರಾಜಕೀಯಸ್ಥರು ಬಳಸುವಂತೆ ಸೆಕ್ಯೂಲರ್ ಎಂಬ ಪದಕ್ಕೆ ಅರ್ಥವೇನು ? 'ಧರ್ಮಾತೀತ, ಧರ್ಮನಿರಪೇಕ್ಷ,' ಎಂಬವು ಅಸಂಗತ ಪದಗಳು. ಸರಕಾರವು ಧರ್ಮನಿಷ್ಠವಾಗಿರಬೇಕೆಂದು ಧರ್ಮಶಾಸ್ತ್ರಗಳು ಸಾರುತ್ತವೆ. ಧರ್ಮಾತೀತ, ಧರ್ಮನಿರಪೇಕ್ಷ ಎಂದರೆ ಅಧರ್ಮಮಾರ್ಗದಲ್ಲಿ ನಡೆಯುವ, ನಾಗರಿಕತೆಯ ಸೋಂಕಿಲ್ಲದ, ಕ್ರೂರವಾದ, ಬರ್ಬರ ಸರಕಾರವೆಂದು ಅರ್ಥವಾಗುತ್ತದೆ. ಜಾತ್ಯತೀತವೆನ್ನುವುದು ಸಹ ಸರಿಯಾದ ಶಬ್ದವಲ್ಲ. ಜಾತಿಯನ್ನನುಸರಿಸಿ ಸರಿಯಾದ ಮೀಸಲಾತಿಯನ್ನು ನೀಡುವ ಪಕ್ಷವು ಸರಕಾರವು ಜಾತ್ಯತೀತ ಹೇಗಾದೀತು? ಮತ ನಿರಪೇಕ್ಷ, ಜಾತಿ ನಿರಪೇಕ್ಷ - ಎಂದರೆ ಸ್ವಲ್ಪ ಮಟ್ಟಿಗೆ ಹೊಂದಿಕೊಂಡೀತು. ಮೀಸಲಾತಿ ಇರುವವರೆಗೆ, ಏಕರೂಪವಾದ ಕಾನೂನು ಜಾರಿಗೆ ಬರುವವರೆಗೆ ಸೆಕ್ಯುಲರ್ ಪದವನ್ನು ಬಳಸದಿರುವುದೇ ಸರ್ವೋತ್ತಮ. ಅಹಿಂಸೆ, ಸತ್ಯ, ಸರ್ವಸಮತೆ, ಶೌಚ, ಇಂದ್ರಿಯ ನಿಗ್ರಹ, ತೃಪ್ತಿ, ಅಕ್ರೋಧ ಇವು ಸಮಸ್ತ ಮಾನವರೂ ಆಚರಿಸಬೇಕಾದ ಧರ್ಮಗಳೆಂದು ಮನುವು ಸಾರಿ ಹೇಳುತ್ತಾನೆ. ಧರ್ಮಾತೀತವೆಂದರೆ ಈ ಗುಣಗಳಿಲ್ಲದ ಸರಕಾರವೆಂದು ಅರ್ಥವಾಗುತ್ತದೆ.

ಧರ್ಮವು ಯಾವಾಗಲೂ ಸತ್ಯವಾಗಿರುತ್ತದೆ. ಸತ್ಯವಲ್ಲದ್ದು ಧರ್ಮವಲ್ಲ. ವಿಭಿನ್ನ ದೇಶಕಾಲಗಳಲ್ಲಿಯೂ ಯಾವುದು ಸ್ವಲ್ಪವೂ ವಿಕಾರವನ್ನು ತಳೆಯದೇ ಏಕರೂಪವಾಗಿರುತ್ತದೆಯೋ ಅದು ಸತ್ಯ. ಯಾವುದು ತನ್ನ ಸ್ವರೂಪವನ್ನು ಬದಲಾಯಿಸಿಕೊಳ್ಳುವುದೋ ಅದು ಸತ್ಯವಲ್ಲ. ಅದು ಸತ್ಯಾಭಾಸ. ಮನುಪ್ರೋಕ್ತವಾದ ಧರ್ಮವು ದೇಶ ಕಾಲಗಳನ್ನನುಸರಿಸಿ ಬದಲಾವಣೆಯನ್ನು ಹೊಂದಬೇಕು ಎನ್ನತಕ್ಕವರು ಇದನ್ನು ಗಮನಿಸಲಿ. ಬದಲಾವಣೆ ಹೊಂದತಕ್ಕದ್ದು ಕಾನೂನು, ಧರ್ಮವಲ್ಲ. ನಮ್ಮ ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದ ಮೇಲೆ, ಬ್ರಿಟಿಷರ ಕಾಲದಲ್ಲಿದ್ದ ಅನೇಕ ಕಾನೂನುಗಳು ಬದಲಾವಣೆ ಹೊಂದಿದವು. ಆ ಪರಿವರ್ತನೆ ಆವಶ್ಯಕವೆನಿಸಿತ್ತು. ಆದರೆ ಪ್ರಜಾಕ್ಷೇಮ ಚಿಂತನೆಯು ಎಲ್ಲ ಕಾನೂನುಗಳ ಉದ್ದೇಶವೂ ಆಗಿತ್ತು. ಮನುಷ್ಯನ ಅಭಿರುಚಿ, ದೇಹದ ಎತ್ತರ, ದಪ್ಪಗಳಿಗೆ ತಕ್ಕಂತೆ ಅವನು ತೊಡುವ ಅಂಗಿಯು ವಿಭಿನ್ನ ರೂಪವನ್ನು ತಳೆಯಬೇಕು. ಆದರೆ ಆತನ ಗುಣಸ್ವಭಾವಗಳು ಮಾತ್ರ ಏಕರೂಪವಾಗಿ ಇರುತ್ತವೆ. ಇದು ನ್ಯಾಯವೂ ಹೌದು. ಸಹಜವೂ ಹೌದು. ಪ್ರಜೆಗಳ ಲೌಕಿಕ ಹಿತವನ್ನು , ಅವರ ಆಶೋತ್ತರಗಳನ್ನು, ರಾಷ್ಟ್ರದ ಕ್ಷೇಮವನ್ನು ಅನುಲಕ್ಷಿಸಿ ಸರಕಾರವು ಕಾನೂನನ್ನು ಮಾಡುತ್ತದೆ. ಅದು ಪ್ರಜೆಗಳ ಮತ್ತು ಸರಕಾರದ ಇಚ್ಛೆಗೆ ಒಳಪಟ್ಟಿದ್ದು. ಇಚ್ಛೆಗೆ ಹಲವು ಮುಖಗಳಿರುವುದರಿಂದ ಕಾನೂನು ನಾನಾ ಮುಖವಾಗಿದ್ದು ಪರಿವರ್ತನ ಶೀಲವಾಗಿರುತ್ತದೆ. ರಸ್ತೆಯ ಎಡಗಡೆಯಲ್ಲಿಯೇ ಸಂಚರಿಸಬೇಕೆಂದು ನಮ್ಮ ದೇಶದಲ್ಲಿ ಕಟ್ಟಳೆ ಇದೆ. ಕೆಲವು ಪಾಶ್ಚಾತ್ಯ ದೇಶಗಳಲ್ಲಿ ರಸ್ತೆಯ ಬಲಗಡೆಯೇ ಸಂಚರಿಸಬೇಕೆಂದು ಕಟ್ಟಳೆ ಇದೆ. ಫಲಿತಾಂಶ, ಸೌಕರ್ಯಗಳು ಒಂದೇ. ಧರ್ಮದ ಸ್ವರೂಪವು ಇದಲ್ಲ.

## ವಿಶ್ವಧರ್ಮ

ಧರ್ಮವು ಮನುಷ್ಯನ ಅಭ್ಯುದಯ ನಿಃಶ್ರೇಯಸಗಳನ್ನು ಗುರಿಯಾಗಿಟ್ಟುಕೊಂಡಿದೆ. ಅಭ್ಯುದಯದಲ್ಲಿ ಲೌಕಿಕ ಸುಖವು ಸೇರಿದ್ದರೂ ಅದೊಂದು ಏಕದೇಶ. ಅಭ್ಯುದಯವು ನಿಃಶ್ರೇಯಸಕ್ಕೆ ವಿರೋಧವಾಗುವಂತೆ ನಿರಾತಂಕವಾದ ಸುಖಾನುಭವ, ಚಿತ್ತಶುದ್ಧಿ, ಇಂದ್ರಿಯ ನಿಗ್ರಹ, ಮುಂತಾದ ಆಧ್ಯಾತ್ಮಿಕ ಮೌಲ್ಯಗಳನ್ನೊಳಗೊಂಡ ಭವ್ಯೋನ್ನತವಾದ ಜೀವನ ಅಭ್ಯುದಯ. ಸರಕಾರದ ಕಾನೂನು ಮನುಷ್ಯನ ಶರೀರವನ್ನುದ್ದೇಶಿಸಿರುತ್ತದೆ. ಆತ್ಮಕ್ಕೆ ಅದರಲ್ಲಿ ಮಾನ್ಯತೆ ಇಲ್ಲ. ಧರ್ಮವು ಆತ್ಮವನ್ನೇ ಮುಖ್ಯವಾಗಿ ಉದ್ದೇಶಿಸುತ್ತದೆ. ಶರೀರವು ಅದಕ್ಕೆ ಗೌಣ. ಹೀಗೆ ಭಿನ್ನೋದ್ದೇಶಗಳಿಂದ ಪ್ರವೃತ್ತವಾದ ಕಾನೂನು - ಧರ್ಮಗಳಿಗೆ ಸಮೀಕರಣವು ಅಯುಕ್ತವಾದದ್ದು.

ಧರ್ಮಶಾಸ್ತ್ರವನ್ನು ಆರೋಗ್ಯ ಶಾಸ್ತ್ರಕ್ಕೆ ಹೋಲಿಸಬಹುದು. ಹೊತ್ತಿಗೆ ಸರಿಯಾಗಿ ಹಿತಮಿತವಾದ ಆಹಾರವನ್ನು ಸೇವಿಸಬೇಕು. ಎಲ್ಲರಿಗೂ ವ್ಯಾಯಾಮವು ಅವಶ್ಯಕ. ಮನಸ್ಸನ್ನು ಶಾಂತವಾಗಿರಿಸಿಕೊಳ್ಳಬೇಕು. ಎರಡು ಊಟಗಳ ಮಧ್ಯೆ ತಿನ್ನುತ್ತಿರಬಾರದು. ಕರಿದ ತಿಂಡಿ ಒಳ್ಳೆಯದಲ್ಲ. ಹೋಟೆಲಿನ ಊಟ ಹಿತಕರವಲ್ಲ. ಕಾಫಿ, ಟೀಗಳ ಸೇವನೆ ಕೆಟ್ಟದ್ದು - ಇತ್ಯಾದಿ ವಿಧಿ ನಿಷೇಧಗಳನ್ನು ಆರೋಗ್ಯ ಶಾಸ್ತ್ರವು ಹೇರುತ್ತದೆ. ಆ ನಿಯಮಗಳೆಲ್ಲವನ್ನೂ ಕ್ರಮವಾಗಿ ಪಾಲಿಸುವುದು ಕಠಿಣವೇ ಸರಿ. ಆರೋಗ್ಯ ಕಾಮಿಯು ಯಥಾಶಕ್ತಿಯಾಗಿ ಆ ನಿಯಮಗಳನ್ನು ಪಾಲಿಸುತ್ತಾನೆ. ಕಾಫಿ, ಟೀಗಳ ಸೇವನೆಯನ್ನು ಮಿತಗೊಳಿಸುತ್ತಾನೆ. ಈ ಕಾಲದಲ್ಲಿ ಸಂಕೀರ್ಣವಾಗಿ ನಾನಾ ಉದ್ಯೋಗಗಳಲ್ಲಿ ಹರಡಿಕೊಂಡಿರುವ ಕ್ಲಿಷ್ಟ ಜೀವನವನ್ನು ನಡೆಸತಕ್ಕವರಿಗೆ ಆರೋಗ್ಯ ಶಾಸ್ತ್ರದ ವಿಧಿ ನಿಷೇಧಗಳನ್ನು ಅನುಸರಿಸುವುದು ಶಕ್ಯವಾಗುವುದಿಲ್ಲ. ಆದರೂ ಆರೋಗ್ಯ ಶಾಸ್ತ್ರದ ನಿಯಮಗಳು ಈ ಕಾಲಕ್ಕೆ ಎಷ್ಟು ಪ್ರಸ್ತುತ? ಎಷ್ಟು ಅಪ್ರಸ್ತುತ? ಎಂದು ಯಾರೂ ವಿಚಾರಿಸುವುದಿಲ್ಲ. ಆರೋಗ್ಯ ಶಾಸ್ತ್ರದ ಕೆಲವು ವಿಧಿಗಳನ್ನು ಕೆಲವು ನಿಷೇಧಗಳನ್ನು ತೆಗೆದು ಹಾಕಬೇಕೆಂದು ಯಾರೂ ಆಗ್ರಹಿಸುವುದಿಲ್ಲ. ಈ ಕಾಲಕ್ಕೆ ತಕ್ಕಂತೆ ಹೊಸ ಆರೋಗ್ಯ ಸೂತ್ರಗಳನ್ನು ರಚಿಸಬೇಕೆಂದು ಯಾರೂ ಒತ್ತಾಯಪಡಿಸುವುದಿಲ್ಲ. ಆರೋಗ್ಯ ಶಾಸ್ತ್ರವನ್ನು ಕಣ್ಣುಮುಚ್ಚಿಕೊಂಡು ಒಪ್ಪಿಕೊಳ್ಳುವುದೂ, ವೈದ್ಯನ ಸಲಹೆಯನ್ನು ಚಾಚೂ ತಪ್ಪದೇ ಪಾಲಿಸುವುದೂ ಅಂಧ ಶ್ರದ್ಧೆಯಾದೀತೇನು ?

ಹೀಗೆ ಎಷ್ಟು ಪ್ರಸ್ತುತ - ಎಷ್ಟು ಅಪ್ರಸ್ತುತ ಎಂದು ವಿಮರ್ಶಿಸುತ್ತ ಹೋದರೆ ಸಮಸ್ತ ಮನುಸ್ಮೃತಿಯೂ ಇಂದು ಅಪ್ರಸ್ತುತವೆನಿಸೀತು. ಎಲ್ಲ ಧರ್ಮಶಾಸ್ತ್ರ ಗ್ರಂಥಗಳನ್ನೂ ಕಸದ ಬುಟ್ಟಿಗೆ ತುಂಬಬೇಕಾದೀತು. ಇದೇ ಮಾತು ನೀತಿ ಶಾಸ್ತ್ರಕ್ಕೂ ಅನ್ವಯಿಸುತ್ತದೆ. ಸುಳ್ಳು, ಮೋಸ, ಭ್ರಷ್ಟಾಚಾರಗಳು ತಾಂಡವವಾಡುತ್ತಿರುವ ಈ ಕಾಲದಲ್ಲಿ ನೀತಿ ಶಾಸ್ತ್ರವು ಎಷ್ಟು ಪ್ರಸ್ತುತ. ಈ ಕಾಲಕ್ಕೆ ತಕ್ಕಂತೆ ನೀತಿ ಶಾಸ್ತ್ರದ ವಿಧಿಗಳನ್ನು ಬದಲಾಯಿಸಿಕೊಳ್ಳಬೇಕು ಎಂದು ವಾದಿಸಬಹುದೇನೋ? ಈಗಿನ ಕ್ಲಿಷ್ಟವಾದ ಸಂಕೀರ್ಣ ಪರಿಸ್ಥಿತಿಯಲ್ಲಿ ಮಾನವಧರ್ಮ ಶಾಸ್ತ್ರದಂತೆ ನಡೆಯಲು ಶಕ್ತವಾಗುವುದಿಲ್ಲವೆಂಬುದು ಸರ್ವವಿದಿತ. ಶಾಸ್ತ್ರವಿಹಿತ ನಿಷಿದ್ಧಗಳಲ್ಲಿ ಎಷ್ಟನ್ನೀಗ ಪಾಲಿಸಲು ಸಾಧ್ಯ. ಅದಕ್ಕೆ ಮಾರ್ಗೋಪಾಯಗಳೇನು? ಎಂದು ಚಿಂತಿಸಬೇಕಾದದ್ದು ವಿವೇಕಶಾಲಿಗಳ ಪ್ರಥಮ ಕರ್ತವ್ಯ. ಮನುಸ್ಮೃತಿಯ ಮಾತಿರಲಿ '' **ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಮ್**'' ಎಂದು ಶ್ರುತಿಯೇ ಸಾಕ್ಷಾತ್ತಾಗಿ ವಿಧಿಸಿದೆಯಲ್ಲ? ಇದರ ಗತಿ ಏನಾಗಿದೆ? 'ಇದನ್ನು ತಪ್ಪಿಸಬಾರದು' ಎಂಬ ಆದೇಶವನ್ನು ಯಾರೂ ಆಕ್ಷೇಪಿಸಬಾರದು. ಇದನ್ನೇ ಎಷ್ಟು ಜನರು ಪಾಲಿಸುತ್ತಿದ್ದಾರೆ ? ಈ ವೇದಾದೇಶವು ಈಗ

ಎಷ್ಟು ಪ್ರಸ್ತುತ ? ಧರ್ಮಶ್ರದ್ಧೆ, ಆಸ್ತಿಕ್ಯ ಬುದ್ಧಿಗಳು ಭರದಿಂದ ಕ್ಷೀಣಿಸುತ್ತಿರುವಾಗ ಅದನ್ನು ಉಳಿಸಿಕೊಳ್ಳುವುದು ಹೇಗೆ? ಎಂಬುದೀಗ ಚಿಂತನೀಯ. ಶಾಸ್ತ್ರೀಯ ಆಚರಣೆಗಳಿರಲಿ, ಶಾಸ್ತ್ರದಲ್ಲಿ ಗೌರವ ಭಾವನೆಯಾದರೂ ಉಳಿದಿರಲಿ ಎಂಬುದೀಗ ಪ್ರಸ್ತುತ.

ಸರ್ವಜ್ಞನಾದ ಈಶ್ವರನಿಂದ ಆವಿರ್ಭವಿಸಿದ ವೇದವೂ ಸಹ ಸರ್ವಜ್ಞ ಗುಣಾನ್ವಿತವಾಗಿರಲೇಬೇಕು. ಈ ಮಾತನ್ನು ಶ್ರೀ ಶಂಕರಾಚಾರ್ಯರೇ "**ನಹಿ ಈದೃಶಸ್ಯ ಶಾಸ್ತ್ರಸ್ಯ ಋಗ್ವೇದಾದಿಲಕ್ಷಣಸ್ಯ ಸರ್ವಜ್ಞಗುಣಾನ್ವಿತಸ್ಯ ಸರ್ವಜ್ಞಾದನ್ಯತಃ ಸಂಭವೋಽಸ್ತಿ**" (ಸೂ.ಭಾ.೧-೧-೩) ಎಂಬ ವಾಕ್ಯದಲ್ಲಿ ತಿಳಿಸಿದ್ದಾರೆ. ಇದನ್ನು ಹಿಂದೆಯೇ ಉದಾಹರಿಸಿದೆ. 'ಧಾರಣಪೋಷಣ ಲಕ್ಷಣಾನ್ವಿತವಾದದ್ದು ಧರ್ಮ' ಎಂಬ ವ್ಯುತ್ಪತ್ತಿಯನ್ನು ಬರೆಯಲಾಗಿದೆ. ಮಾನವನ ಸರ್ವವಿಧಧಾರಣೆಯೂ ಸರ್ವವಿಧ ಪೋಷಣೆಯೂ ಧರ್ಮದಿಂದಾಗಲೇಬೇಕು. ಆಗುವುದಿಲ್ಲವೆಂದಾದರೆ ಅದು ಧರ್ಮವಲ್ಲ. ಧರ್ಮದಲ್ಲಿ ಅನೇಕ ಅಂಶಗಳಿರುವುದರಿಂದ ಧರ್ಮದ ಒಂದು ಅಂಶವು ಯಾವುದೋ ಒಂದಂಶದ ವ್ಯವಸ್ಥೆಯನ್ನು ನೋಡಿಕೊಳ್ಳುವುದೂ ಸಹಜವಾದದ್ದು. ಆದ್ದರಿಂದ ಧರ್ಮಶಾಸ್ತ್ರವು ಒಟ್ಟಿನಲ್ಲಿ ಮಾನವ ಜನಾಂಗದ ಧಾರಣಪೋಷಣಗಳಿಗೆ ಬೇಕಾದ ಎಲ್ಲ ಅಂಶಗಳನ್ನೂ ತಿಳಿಸಲೇಬೇಕು.

ಮಾನವ ಜೀವನವು ಆಯಾ ವ್ಯಕ್ತಿಗೆ ಮಾತ್ರ ಸಂಬಂಧಿಸಿದ್ದೆಂದು ಪೃಥಕ್ಕರಿಸಲು ಸಾಧ್ಯವಿಲ್ಲ. ವ್ಯಕ್ತಿ, ದಾಂಪತ್ಯ, ಕುಟುಂಬ, ಸಮಾಜ, ರಾಷ್ಟ್ರ ಎಂಬ ಪಂಚಾಂಗಗಳಿಲ್ಲದೇ ಮಾನವ ಜೀವನವು ಪೂರ್ಣವಾಗುವುದಿಲ್ಲ. ಇದರ ಮೇಲೆ ಇಹ - ಪರ ಚಿಂತನೆಗಳೂ ಸೇರಿಕೊಳ್ಳುತ್ತವೆ. ಇವು ಜೀವನದ ಅವಿಭಾಜ್ಯ ಅಂಗಗಳು. ಇವೆಲ್ಲವುಗಳ ಸರ್ವತೋಮುಖವಾದ ಧಾರಣ ಪೋಷಣಗಳ ಮಾರ್ಗೋಪಾಯಗಳನ್ನು ಯಾವುದು ತಿಳಿಸಿಕೊಡುವುದೋ, ಅದು ಧರ್ಮಶಾಸ್ತ್ರವೆನಿಸುತ್ತದೆಯೆಂದು ಸಿದ್ಧವಾಗುತ್ತದೆ. ಇಹ-ಪರಚಿಂತನೆಗಳಲ್ಲಿ ಪರವನ್ನು ನಾಸ್ತಿಕ ವರ್ಗದವರು ಕೈಬಿಡಬಹುದು. ಇಹದ ಚಿಂತನೆಯು ಮಾತ್ರ ಸರ್ವ ಮಾನವ ತಲೆಯಲ್ಲಿಯೂ ಗಟ್ಟಿಯಾಗಿ ಕುಳಿತಿರುತ್ತದೆ. ಮಾನವ ಜನಾಂಗದ ಈ ಪಂಚಾಂಗಗಳ ಧಾರಣ ಪೋಷಣಗಳ ಚಿಂತನೆಯನ್ನು ನಾಸ್ತಿಕರೂ ಕೈ ಬಿಡುವಂತಿಲ್ಲ. ಸಾರಾಂಶವೇನೆಂದರೆ, ಧರ್ಮಪಾಲನೆಯು ಆಸ್ತಿಕರಿಗೆ ಮಾತ್ರವಲ್ಲ, ನಾಸ್ತಿಕರಿಗೂ ಅವಶ್ಯ ಬೇಕಾದದ್ದು. ಏವಂಚ ಧರ್ಮ ಶಾಸ್ತ್ರವು ಮನುಷ್ಯ ಜಾತಿಗೆ ಅತ್ಯವಶ್ಯವೆಂಬುದು ಸಾರವತ್ತಾದ ನುಡಿ.

ಪ್ರಮಾಣಸಿದ್ಧವಾದ ಈ ಸಮಗ್ರ ದೃಷ್ಟಿಯನ್ನು ತಳೆದಿರುವುದು ವೈದಿಕ ಧರ್ಮವೆಂದೂ, ಮನುಸ್ಮೃತಿಯು ಈ ವಿಶ್ವಧರ್ಮದ ವಿಶ್ವರೂಪವನ್ನು ಗೆರೆ ಎಳೆದು

ತೋರಿಸುವ ಪ್ರಾಮಾಣಿಕವಾದ ಕೈಪಿಡಿಯೆಂದೂ ತಿಳಿಯಬೇಕು. ಆದ್ದರಿಂದಲೇ, **'ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ '** ಎನ್ನುತ್ತದೆ ವೇದ. ಧರ್ಮವು ಸಮಸ್ತ ಜಗತ್ತಿನ ಅಸ್ತಿತ್ವಕ್ಕೆ ತಳಹದಿ ಎಂದರ್ಥ. ಇಲ್ಲಿ ಜಗತಃ ಎಂಬ ಶಬ್ದವೂ ಅರ್ಥವತ್ತಾದದ್ದು. **'ಜಂಗಮ್ಯತೇ ಕುಟಿಲಂ ಗಚ್ಛತೀತಿ ಜಗತ್'** ಎಂದು ಶಬ್ದ ವ್ಯುತ್ಪತ್ತಿ. '' **ನಿತ್ಯಂ ಕೌಟಿಲ್ಯೇ ಗತೌ''** ಸೂತ್ರದಿಂದ ಕೌಟಿಲ್ಯಾರ್ಥದಲ್ಲಿಯ ಪ್ರತ್ಯಯ ಬಂದು ಲೋಪವಾಗಿದೆ. ಲೋಕದಲ್ಲಿ ಕುಟಿಲ ಗತಿಯಲ್ಲಿ ನಾನಾ ವಕ್ರಮಾರ್ಗದಲ್ಲಿ ಸಂಚರಿಸತಕ್ಕದ್ದು ಮನುಷ್ಯ ಪ್ರಾಣಿ ! ಮನುಷ್ಯೇತರ ಪ್ರಾಣಿಗಳೆಲ್ಲವೂ ಸೃಷ್ಟಿಯ ಆದಿಯಿಂದಲೂ ಏಕರೂಪದಲ್ಲಿ ನಡೆದುಕೊಳ್ಳುತ್ತಿವೆ. ಇಲಿ, ಹುಲಿ, ಹಕ್ಕಿ, ಹಾವು, ಹುಳುಗಳ ವರ್ತನೆ ಏಕರೂಪವಾಗಿದೆ. ಈ ಮನುಷ್ಯನೆಂಬ ಪ್ರಾಣಿ ಮಾತ್ರ ತನ್ನ ವರ್ತನೆಯನ್ನು ಬದಲಾಯಿಸಿಕೊಳ್ಳುತ್ತಲೇ ಇದೆ! ಮುಖ್ಯವಾಗಿ ಈ ಮನುಷ್ಯ ಪ್ರಾಣಿಯ ಯೋಗಕ್ಷೇಮಗಳಿಗೆ ಧರ್ಮವು ಅವಶ್ಯಕವಾಗಿದೆ.

ಒಬ್ಬ ವ್ಯಕ್ತಿ ಎನ್ನುವುದು ಸಾಮಾನ್ಯ ಶಬ್ದ. ಅದರ ಅರ್ಥದಲ್ಲಿ ನಾನಾ ಭೇದಗಳುಂಟು. ಬಾಲಕ, ಯುವಕ, ಪ್ರೌಢ, ವೃದ್ಧ, ಗಂಡಸು, ಹೆಂಗಸು ಎಂಬುದೊಂದು ಪ್ರಕಾರ. ವಿದ್ಯಾರ್ಥಿ, ಉದ್ಯೋಗಿ, ವಿರಕ್ತಿ ಎಂಬುದಿನ್ನೊಂದು ಭೇದ. ಅವಲಂಬಿಸುವ ಉದ್ಯೋಗಗಳೂ ನೂರೆಂಟು. ಇತ್ಯಾದಿ ಭೇದಗಳಿಂದ ಘಟಿತವಾದ ಸಮಾಜಕ್ಕೆ ಮನುಷ್ಯ ಜಾತಿಗೆ ಒಂದೇ ಧರ್ಮಸೂತ್ರವಿರಲು ಶಕ್ಯವಾದೀತೇನು? ಸಮಾಜವೆಂದರೆ ನಾವು ಹೇಳುತ್ತಿರುವುದು ಸಭ್ಯರ ಸಮಾಜ. ಮೃಗಗಳ ಸಮಜವಲ್ಲ. ಸಮಾಜ ಬೇರೆ, ಸಮಜ ಬೇರೆ. ಸಭ್ಯರೆಂದರೆ ಒಂದಾನೊಂದು ಸಂಸ್ಕೃತಿಯನ್ನು ಪಡೆದಿರುವ ಶಿಷ್ಟರು. ಸಮಾಜದಲ್ಲಿ ಈ ಸಭ್ಯತೆ ಅಥವಾ ಶಿಷ್ಟತೆ ಉಳಿಯಬೇಕಾದರೆ ಅದು ವಿಕಾರಗೊಳ್ಳದಂತೆ ನೋಡಿಕೊಳ್ಳತಕ್ಕ ಒಬ್ಬ ನಾಯಕ ಬೇಕು. ಈ ನಾಯಕನೇ ರಾಜ ಎಂಬ ಹೆಸರನ್ನು ಪಡೆದಿದ್ದನು. ಈಗಿನ ಪ್ರಜಾಪ್ರಭುತ್ವದಲ್ಲಿ ರಾಜಪ್ರಭುತ್ವವಿಲ್ಲದ್ದರಿಂದ ಸರಕಾರ ಎಂಬ ಒಂದು ಶಬ್ದವು '' ನಿಯಾಮಕ ಶಾಸನ '' ಎಂಬ ಅರ್ಥದಲ್ಲಿ ರೂಢಿಗೆ ಬಂದಿದೆ. ಈ ಸರಕಾರವನ್ನು ನಡೆಸತಕ್ಕ ನಾಯಕರು ಬೇರೆ ಬೇರೆ ಇರುತ್ತಾರಾದ್ದರಿಂದ 'ಸರಕಾರ ' ಎಂಬ ಒಂದು ಶಬ್ದವನ್ನು ನಮ್ಮ ಉಪಯೋಗಕ್ಕೆ ಇಟ್ಟುಕೊಳ್ಳಬಹುದು. ನಾನಾಗುಣ ಕ್ರಿಯಾ ಬುದ್ಧಿಗಳುಳ್ಳ ಸಮಾಜವನ್ನು ಒಂದು ವ್ಯವಸ್ಥಿತ ರೂಪದಲ್ಲಿ ನಡೆಸಲು ಸರಕಾರವು ಕೆಲವು ನಿಬಂಧನೆಗಳನ್ನು ರಚಿಸಿ ಪಾಲಿಸಬೇಕಾಗುತ್ತದೆ. ಈ ನಿಬಂಧನೆಗಳನ್ನು ರಚಿಸತಕ್ಕವರು ಮನುಷ್ಯರು; ಮನುಷ್ಯರು ಸಹಜವಾಗಿ ಸತ್ಯದ ಸಾಕ್ಷಾತ್ಕಾರವಿಲ್ಲದವರು. ಸತ್ಯವಿಲ್ಲದಿದ್ದಲ್ಲಿ ಅಸತ್ಯವು ಎದ್ದುಕೊಳ್ಳುತ್ತದೆ ಅಸತ್ಯವೆದ್ದೊಡನೆ ಸಮಾಜವು ಸಮಜವಾಗತೊಡಗುತ್ತದೆ. ಆದ್ದರಿಂದ ಅಸತ್ಯವೇಳದಂತೆ ತಡೆಯಲು ಸರಕಾರವು

ರಚಿಸುವ ನಿಬಂಧನೆಗಳಿಗೆ ಕೆಲವು ಮಾರ್ಗದರ್ಶಕ ಸೂತ್ರಗಳನ್ನು ಧರ್ಮಶಾಸ್ತ್ರವು ಹೇರುತ್ತದೆ. ಇದೇ ರಾಜಧರ್ಮ.

ಹೀಗೆ ವಿಶ್ವತೋಮುಖವಾಗಿ ಪ್ರಸರಿಸಿದ ವ್ಯಕ್ತಿ, ಸಮಾಜ, ರಾಷ್ಟ್ರಗಳಿಗೆ ಮಾರ್ಗದರ್ಶಕವಾದ ಒಂದು ಸಂವಿಧಾನ ಅತ್ಯವಶ್ಯಕ. ಈ ಸಂವಿಧಾನವೇ ವೈದಿಕಧರ್ಮ. ಈ ವಿಷಯವನ್ನು ಇನ್ನೂ ವಿಸ್ತರಿಸದೇ ಸಂಕ್ಷೇಪವಾಗಿ ನಾಲ್ಕು ಮಾತುಗಳನ್ನು ಹೇಳಿ ಮನುಸ್ಮೃತಿಯಲ್ಲಿ ಪ್ರತಿಪಾದ್ಯವಾದ ವಿಷಯಕ್ಕೆ ಬರಬಹುದು.

## ಇಹ-ಪರ

ಇಹ, ಪರ ಎಂಬ ಎರಡು ವಿಚಾರಗಳು ಜೀವನದಲ್ಲಿ ಅವಶ್ಯಕವಾಗಿ ಬರತಕ್ಕವು. ಪರದ ವಿಷಯವು ನಂಬಿಕೆಗೆ ಒಳಪಟ್ಟಿದ್ದು. ಇಹವನ್ನು ಯಾವನೂ ಉಪೇಕ್ಷಿಸುವಂತಿಲ್ಲ. ಪರಮಾರ್ಥವನ್ನು ಚಿಂತಿಸತಕ್ಕವನು ಇಹದಲ್ಲಿ ನಿಂತವನೇ ಆಗಿರುತ್ತಾನೆ. ಇಹವೆಂಬ ನಮ್ಮ ವ್ಯವಹಾರವು ಪರಮಾರ್ಥ ಚಿಂತನೆಗೆ ತಳಹದಿಯಾಗಿದೆ. ಇದನ್ನು ಯಾರೂ ಉಪೇಕ್ಷಿಸುವಂತಿಲ್ಲ. ಇಹವೆಲ್ಲವೂ ಮಿಥ್ಯೆಯೆಂದು ಹೇಳುವ ವೇದಾಂತಿಗಳೂ ವ್ಯಾವಹಾರಿಕ ಸತ್ಯವನ್ನೊಪ್ಪಿದ್ದಾರೆ. ಬೌದ್ಧ, ಜೈನ, ಸಿಖ್ ಪಂಥ ಕ್ರೈಸ್ತ, ಇಸ್ಲಾಂ ಮೊದಲಾದವೆಲ್ಲವೂ ಪರದ ವಿಷಯವಾಗಿ ಚಿಂತನೆಯನ್ನು ಮಾಡುತ್ತವೆ. ಇಹದ ಪರಿಸ್ಥಿತಿ ಏನು? ಇಹ ಜೀವನದ ವ್ಯವಸ್ಥೆ ಹೇಗಿರಬೇಕು? ಎಂಬ ವಿಚಾರದಲ್ಲಿ ಆಸಕ್ತಿಯನ್ನು ವಹಿಸಿಲ್ಲ. ಬೌದ್ಧ ಮತವು ಸಂಸಾರವೆಲ್ಲವೂ ದುಃಖ, ದುಃಖವೆಂದು ಇಹವನ್ನು ಸಂಪೂರ್ಣವಾಗಿ ಕೈಬಿಟ್ಟಿದೆ. ಉಳಿದ ಮತಗಳ ಸ್ವರೂಪವೂ ಅಲ್ಲಿಗೆ ಬಂದು ಮುಟ್ಟುತ್ತವೆ. ಅವು ಆನುಷಂಗಿಕವಾಗಿ ಇಹದ ವಿಚಾರವನ್ನು ಸ್ಪರ್ಶಿಸಿ ಕೈಬಿಡುತ್ತವೆಯೇ ಹೊರತು ಇದರ ವ್ಯವಸ್ಥೆಯನ್ನು ಪೂರ್ಣ ಸ್ವರೂಪದಲ್ಲಿ ಹೇಳಿಯೇ ಇಲ್ಲ. ವೇದಾಂತವು ಪರಮಾರ್ಥವನ್ನೇ ವಿಮರ್ಶಿಸಿದೆಯಾದರೂ ಇಹವನ್ನು ಕೈಬಿಟ್ಟಿಲ್ಲ. ಇಹದ ವಿಚಾರವೆಲ್ಲವನ್ನೂ ಧರ್ಮಶಾಸ್ತ್ರದಿಂದ ತಿಳಿದುಕೊಳ್ಳಬೇಕೆಂದು ಬೆಟ್ಟುಮಾಡಿ ತೋರಿಸಿಬಿಡುತ್ತದೆ. ಧರ್ಮಶಾಸ್ತ್ರವು ಪೂರ್ವ ಮೀಮಾಂಸೆ. ವೇದಾಂತವು ಉತ್ತರ ಮೀಮಾಂಸೆ. ಅದ್ವೈತ ವೇದಾಂತವು ಇವುಗಳ ಕಲಬೆರಕೆ ಮಾಡಿ ಕಿಚಡಿಯನ್ನು ಮಾಡಿಲ್ಲ. ಇವೆರಡೂ ವೈದಿಕ ಧರ್ಮದಲ್ಲಿ ಸೇರುತ್ತವೆ. ಆದ್ದರಿಂದ ವೈದಿಕ ಧರ್ಮವು ಸರ್ವಾಂಗ ಪರಿಪುಷ್ಟವಾಗಿ ಪೂರ್ಣತೆಯನ್ನು ಪಡೆದದ್ದೆಂದೂ, ಉಳಿದ ಸಕಲ ಮತಗಳೂ ಪರಿಪೂರ್ಣತೆ ಇಲ್ಲದೆ ಕುಂಟುತ್ತಾ ತೆವಳುತ್ತ ಸಾಗಿವೆಯೆಂದೂ ನಮ್ಮ ದೃಢವಾದ ಅಭಿಪ್ರಾಯವುಂಟು. ಸತ್ಯ, ಅಹಿಂಸೆ, ಪರೋಪಕಾರ ಮೊದಲಾದವುಗಳನ್ನು ಎಲ್ಲ ಮತಗಳೂ ಬೋಧಿಸುತ್ತವೆ. ಅವೆಲ್ಲವೂ ನೀತಿಶಾಸ್ತ್ರಕ್ಕೆ ಸೇರಿದವು. ನೀತಿ ಶಾಸ್ತ್ರವು

ಧರ್ಮದ ಒಂದು ಅಂಶ. ನೂರರಲ್ಲಿ ಒಂದಂಶ. ವ್ಯಕ್ತಿ, ಕುಟುಂಬ, ಸಮಾಜ, ರಾಷ್ಟ್ರಗಳ ಹಿತವನ್ನು ಸಾಧಿಸುವುದಕ್ಕೆ ಅವು ಏನೇನೂ ಸಾಲವು. ಆದ್ದರಿಂದ ಸಕಲರಿಗೂ ಅನ್ವಯಿಸಿ ಅಭ್ಯುದಯ - ನಿಃಶ್ರೇಯಸಗಳಿಗೆ ಸಾಧನವಾದ, ಸರ್ವಾಂಗಪುಷ್ಟವಾದ ಧರ್ಮವು ವೈದಿಕ ಧರ್ಮವೊಂದೇ.

# ೩ - ಚಾತುರ್ವರ್ಣ್ಯ

ಮನುಸ್ಮೃತಿ, ಧರ್ಮಶಾಸ್ತ್ರ ಎಂದೊಡನೆ ಬುದ್ಧಿಜೀವಿಗಳೆಂದು ಹೆಸರಿಟ್ಟುಕೊಂಡಿರುವ ವಾಚಾಟರಿಗೆ ಮೊದಲು ತೋರತಕ್ಕದ್ದು ಚಾತುರ್ವರ್ಣ್ಯವೇ. ಜಾತಿ ಭೇದವನ್ನು ಹುಟ್ಟು ಹಾಕಿ ಮೇಲು ಕೀಳೆಂದು ಸಮಾಜವನ್ನೊಡೆದು ಮೆರೆದವರು ಬ್ರಾಹ್ಮಣರು. ಅನ್ಯರನ್ನು ತುಳಿಯುವುದಕ್ಕಾಗಿ ಧರ್ಮಶಾಸ್ತ್ರವನ್ನು ಬರೆದರು. ಇದು ಧರ್ಮಶಾಸ್ತ್ರವಲ್ಲ. ಅಧರ್ಮ ಸಂಹಿತೆ. ' **ನ ಸ್ತ್ರೀ ಸ್ವಾತಂತ್ರ್ಯಮರ್ಹತಿ** ' ಇತ್ಯಾದಿ ಘೋಷಣೆಗಳಿಂದ ಸ್ತ್ರೀಯರನ್ನು ಮೂಲೆಗೆ ತಳ್ಳಿ ತಮ್ಮ ಊಳಿಗದವರನ್ನಾಗಿ ಮಾಡಿಕೊಂಡವರೂ ಬ್ರಾಹ್ಮಣರೆಂಬ ಒಂದು ಗುಂಪಿನವರೇ - ಇತ್ಯಾದಿ ದೂಷಣೆಗಳನ್ನು ಈ ವಿಚಾರವಾದಿಗಳು ಹೇಳುತ್ತಾ ಮನುಸ್ಮೃತಿಯನ್ನು ಇವರು ಸುಟ್ಟು ಹಾಕಿದ್ದು ಉಂಟು. ಈಗಲೂ ಬ್ರಹ್ಮದ್ವೇಷಿಗಳಾಗಿಯೇ ನಡೆದುಕೊಳ್ಳುತ್ತಿದ್ದಾರೆ. ಇದನ್ನೀಗ ಪರಿಶೀಲಿಸಬೇಕಾಗಿದೆ. ದುರಾಗ್ರಹವೂ ಬೇಡ. ಛಲವಾದವೂ ಬೇಡ. ಇದ್ದುದನ್ನು ಎದ್ದು ತೋರಿಸೋಣ. ಬಿದ್ದುದನ್ನು ಎತ್ತಿ ಹೇಳೋಣ.

ಹಿಂದೆ ಹೇಳಿದಂತೆ ವ್ಯಕ್ತಿ, ಕುಟುಂಬ, ಸಮಾಜ, ರಾಷ್ಟ್ರ ಇವು ಅನ್ಯೋನ್ಯವಲಂಬಿಗಳು. ಇವುಗಳಲ್ಲಿ ಯಾವುದನ್ನೂ ಪ್ರತ್ಯೇಕಿಸುವಂತಿಲ್ಲ. ಎಲ್ಲವೂ ಸೇರಿ ಒಂದು ಸಮಗ್ರತೆಯುಂಟಾಗಿದೆ. ರಾಷ್ಟ್ರವನ್ನು ಒಬ್ಬ ಪುರುಷನಿಗೆ ಹೋಲಿಸಬಹುದು. ವ್ಯಕ್ತಿ, ಕುಟುಂಬ, ಸಮಾಜಗಳು ಈ ಪುರುಷನ ಅಂಗೋಪಾಂಗಗಳು. ತಲೆ, ಕೈ, ಹೊಟ್ಟೆ, ಕಾಲು ಇವು ಅಂಗಗಳು. ಕಣ್ಣು , ಬಾಯಿ,

ಬೆರಳು, ತೊಡೆ ಮೊದಲಾದವು ಉಪಾಂಗಗಳು. ಇವುಗಳಲ್ಲಿ ಘಟಕಗಳಾದ ಚರ್ಮ, ಮಾಂಸ, ರಕ್ತ, ಮೂಳೆ, ನರ ಇವೆಲ್ಲವೂ ಒಂದೇ. ತಲೆಯಲ್ಲಿ ಹರಿದಾಡುವ ರಕ್ತವೇ ಕಾಲ್ಬೆರಳಿನ ತುದಿಯಲ್ಲಿಯೂ ಹರಿಯುತ್ತದೆ. ಕಾಲ್ಬೆರಳಿನ ತುದಿಯಲ್ಲಿರುವ ನರವೇ ತಲೆಯವರೆಗೂ ಹರಡಿಕೊಂಡಿದೆ. ಆದರೆ ಈ ಅಂಗೋಪಾಂಗಗಳ ಕರ್ತವ್ಯವೆಲ್ಲವೂ ಬೇರೆ ಬೇರೆಯದು. ಕಣ್ಣು ನೋಡುತ್ತದೆ, ಕೇಳುವುದಿಲ್ಲ. ಕಿವಿ ಕೇಳುತ್ತದೆ, ನೋಡುವುದಿಲ್ಲ. ಕೈಗಳ ಕೆಲಸ ಬೇರೆ, ಕಾಲ್ಗಳ ಕೆಲಸ ಬೇರೆ. ಹೊಟ್ಟೆಯ ಕೆಲಸ ಬೇರೆ. ತಲೆಯ ಕೆಲಸ ಇನ್ನೊಂದು. ಒಂದರ ಕಾರ್ಯ ಇನ್ನೊಂದು ಮಾಡಲಾರವು. ಹೀಗಿರುವಾಗ ಇವುಗಳಲ್ಲಿ ಯಾವುದು ಹೆಚ್ಚು ? ಯಾವುದು ಕೀಳು ? ಎಲ್ಲವೂ ತಮ್ಮ ತಮ್ಮ ಕಾರ್ಯವನ್ನು ಸರಿಯಾಗಿ ಮಾಡುತ್ತಿದ್ದರೆ ಮನುಷ್ಯನ ಏಳ್ಗೆ ಸಾಧ್ಯ. ಅಂತೆಯೇ ರಾಷ್ಟ್ರ ಘಟಕಗಳಾದ ವ್ಯಕ್ತಿ ಮೊದಲಾದವು ತಮಗೆ ಗೊತ್ತಾದ ಕಾರ್ಯಗಳನ್ನು ಮಾಡುತ್ತ ಹೋದರೆ ರಾಷ್ಟ್ರದ ಏಳ್ಗೆ ಸಾಧ್ಯ.

ದೇಹದ ಘಟಕಗಳ ಕಾರ್ಯವು ಹೇಗೆ ವ್ಯವಸ್ಥಿತವಾಗಿದೆಯೋ ಹಾಗೇ ರಾಷ್ಟ್ರದ ಘಟಕಗಳ ಕಾರ್ಯಗಳೂ ವ್ಯವಸ್ಥಿವಾಗಿವೆ. ಈ ಕಾರ್ಯಗಳನ್ನು ನಡೆಸಲು ಬೇಕಾದ ಸಾಮಗ್ರಿಗಳನ್ನು ಸ್ಥೂಲವಾಗಿ ನಾಲ್ಕು ವಿಭಾಗ ಮಾಡಬಹುದು. ರಾಷ್ಟ್ರದ ಕ್ಷೇಮಾಭಿವೃದ್ಧಿಗಳಿಗೆ ಮಾರ್ಗವನ್ನು ತೋರಿಸಿ ರಾಷ್ಟ್ರದ ಮುನ್ನಡೆಗೆ ಅವಕಾಶವನ್ನುಂಟು ಮಾಡಿ ಕೊಡುವ ಜ್ಞಾನ, ರಾಷ್ಟ್ರದ ಅಂತರಂಗ , ಬಹಿರಂಗ ಶತ್ರುಗಳನ್ನು ನಿಗ್ರಹಿಸಿ ಪ್ರಜೆಗಳ ನೆಮ್ಮದಿಯನ್ನು ಉಳಿಸಿಕೊಡುವ ಬಾಹುಬಲ, ದೇಹದಲ್ಲಿ ರಕ್ತವು ಹರಿದಂತೆ ರಾಷ್ಟ್ರದ ಎಲ್ಲ ಪ್ರದೇಶಗಳಲ್ಲಿಯೂ ವಿಸ್ತರಿಸಿ ಪ್ರಜೆಗಳಿಗೆ ಬೇಡಿದ ಆಹಾರಾದಿ ಸಾಮಗ್ರಿಗಳನ್ನು ಒದಗಿಸತಕ್ಕ ವಾಣಿಜ್ಯ, ಪಶುಪಾಲನೆ, ಕೃಷಿ ಮತ್ತು ಸರ್ವರಿಗೂ ಅವಶ್ಯಕವಾದ ಕಾರ್ಮಿಕ ವೃತ್ತಿ, ವ್ಯವಹಾರೋಪಯೋಗಿಗಳಾದ ಈ ನಾಲ್ಕೂ ಸಾಮಗ್ರಿಗಳನ್ನು ಒದಗಿಸಿಕೊಡತಕ್ಕ ಪ್ರತಿನಿಧಿಗಳೇ ಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು.

ಈ ವಿಚಾರದಲ್ಲಿ ಕೈ ಹಾಕುವುದಕ್ಕೆ ಮೊದಲು ಮನುಸ್ಮೃತಿಯಲ್ಲಿರುವ ಈ ಎರಡು ಶ್ಲೋಕಗಳನ್ನು ಗಮನಿಸಬೇಕು.

**೧. ಲೋಕಾನಾಂ ತು ವಿವೃದ್ಧ್ಯರ್ಥಂ ಮುಖಬಾಹೂರುಪಾದತಃ ।**
**ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ಶೂದ್ರಂ ಚ ನಿರವರ್ತಯತ್ ॥**

(ಮನು ೧-೩೧)

ಜನರ ಪೋಷಣೆಯಾಗಲಿ ಮತ್ತು ಅವರ ಅಭಿವೃದ್ಧಿಯಾಗಲಿ ಎಂಬ

ಉದ್ದೇಶದಿಂದ ಪ್ರಜಾಪತಿ ಬ್ರಹ್ಮನು ಮುಖ, ಬಾಹು, ತೊಡೆ, ಪಾದಗಳಿಂದ ಕ್ರಮವಾಗಿ ಬ್ರಾಹ್ಮಣ ಕ್ಷತ್ರಿಯ, ವೈಶ್ಯ ಮತ್ತು ಶೂದ್ರರನ್ನು ಉತ್ಪಾದಿಸಿದನು.

**೨. ಸರ್ವಸ್ಯಾಸ್ಯತು ಸರ್ಗಸ್ಯ ಗುಪ್ತ್ಯರ್ಥಂ ಸ ಮಹಾದ್ಯುತಿಃ ।**
**ಮುಖಬಾಹೂರು ಪಜ್ಜಾನಾಂ ಪೃಥಕ್ಕರ್ಮಾಣ್ಯಕಲ್ಪಯತ್ ॥**

(ಮನು ೧-೮೭)

ಈ ಪ್ರಕಾರವಾದ ಸೃಷ್ಟಿಯನ್ನು ರಕ್ಷಿಸುವುದಕ್ಕಾಗಿ ಮಹಾತೇಜಸ್ವಿಯಾದ ಬ್ರಹ್ಮನು ಮುಖಾದಿಗಳಿಂದ ಜನಿಸಿದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಿಗೆ ಬೇರೆ ಬೇರೆ ಕರ್ಮಗಳನ್ನೂ ವಿಭಾಗಿಸಿ ಗೊತ್ತು ಮಾಡಿದನು.

ಮೋಕ್ಷ ಧರ್ಮಪರ್ವದಲ್ಲಿ ಭೀಷ್ಮನು ಯುಧಿಷ್ಠಿರನಿಗೆ ಹೇಳುತ್ತಾನೆ : ''**ಲೋಕಯಾತ್ರಾರ್ಥಮೇವೇಹ ಧರ್ಮಸ್ಯ ನಿಯಮಃಕೃತಃ** '' ಈ ಲೋಕಯಾತ್ರೆಯು ಕ್ಷೇಮವಾಗಿ ನಡೆಯಲೆಂಬ ಉದ್ದೇಶದಿಂದ ಪ್ರಜಾರಕ್ಷಣೆಗಾಗಿಯೇ ಬ್ರಾಹ್ಮಣಾದಿ ವರ್ಣಗಳನ್ನು ಬ್ರಹ್ಮನು ಸೃಷ್ಟಿಸಿ, ಅವರು ಮಾಡಬೇಕಾದ ಕರ್ತವ್ಯಗಳನ್ನು ಗೊತ್ತು ಮಾಡಿದನೆಂಬುದು ಈ ಎರಡು ಶ್ಲೋಕಗಳ ಒಟ್ಟೂ ಅಭಿಪ್ರಾಯ. ಇದೇ ವಿಷಯವನ್ನು ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ -

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ॥** (ಮನು ೪-೧೩)

ಎಂಬ ಒಂದೇ ಸಾಲಿನಲ್ಲಿ ತಿಳಿಸಿದ್ದಾನೆ. ಗುಣಕರ್ಮಾನುಸಾರವಾಗಿ ಈ ಬ್ರಾಹ್ಮಣಾದಿ ವಿಭಾಗವೆಂದು ಇಲ್ಲಿ ತಿಳಿಸಿದೆ. ಅದು ಹೇಗೆಂದರೆ ಸತ್ತ್ವ, ತಮಸ್, ರಜಸ್ ಎಂಬಿವು ಮೂರು ಗುಣಗಳು. ಪ್ರತಿಯೊಬ್ಬರಲ್ಲಿಯೂ ಈ ಮೂರು ಗುಣಗಳು ಇದ್ದೇ ಇರುತ್ತವೆ. ಅವುಗಳಲ್ಲಿ ಏರುಪೇರು ವ್ಯವಸ್ಥಿತವಾಗಿದೆ. ಬ್ರಾಹ್ಮಣನಲ್ಲಿ ಸತ್ತ್ವಗುಣವು ಪ್ರಧಾನವಾಗಿದ್ದು ರಜಸ್ತಮೋಗುಣಗಳು ಕಡಿಮೆ ಇರುತ್ತವೆ. ಮತ್ತು ಇರಲೇಬೇಕು. ಕ್ಷತ್ರಿಯನಲ್ಲಿ ರಜೋಗುಣವು ಅಧಿಕ. ಎರಡನೆಯದು ಸತ್ತ್ವ. ಮೂರನೆಯದು ತಮಸ್ಸು. ವೈಶ್ಯನಲ್ಲಿ ರಜೋಗುಣವೇ ಪ್ರಧಾನವಾದರೂ ಎರಡನೆಯದು ತಮಸ್ಸು. ಮೂರನೆಯದು ಸತ್ತ್ವ. ಶೂದ್ರನಲ್ಲಿ ತಮಸ್ಸು ಅಧಿಕ. ಎರಡನೆಯದು ರಜಸ್ಸು. ಮೂರನೆಯದು ಸತ್ತ್ವ.

ಈ ನಾಲ್ಕೂ ವರ್ಣಗಳ ವಿಚಾರವು ಎಲ್ಲ ಧಾರ್ಮಿಕ ಗ್ರಂಥಗಳಲ್ಲಿಯೂ ಬಂದಿರುತ್ತವೆ. ಇದಕ್ಕೆ ಪುರುಷಸೂಕ್ತವು ಆಧಾರ. ಪುರುಷಸೂಕ್ತವು ಋಗ್ವೇದ ಸಂಹಿತೆಯ ೧೦ನೆಯ ಮಂಡಲದಲ್ಲಿಯೂ ಯಜುರ್ವೇದದ ತೈತ್ತಿರೀಯಾರಣ್ಯಕದಲ್ಲಿಯೂ ಇದೆ.

ಭಾರತೀಯರಿಗೆ ಧರ್ಮವಿಚಾರದಲ್ಲಿ ವೇದವೇ ಪ್ರಮಾಣಗ್ರಂಥವೆಂಬುದನ್ನು ಮೊದಲಿನಿಂದಲೂ ಹೇಳುತ್ತಲೇ ಬಂದಿದ್ದೇವೆ. ಮನುವಿಗೆ ಈ ವಿಷಯದಲ್ಲಿ ಯಾವ ಸ್ವಾತಂತ್ರ್ಯವೂ ಇಲ್ಲ. ವೇದ ಪ್ರತಿಪಾದಿತವಾದದ್ದು ಚಾತುರ್ವರ್ಣ್ಯವೆಂಬುದನ್ನು ಮುಂದೆ ತೋರಿಸಿಕೊಡಲಾಗುತ್ತದೆ. ಅದರ ವಿವರಣಕಾರರಾದ ಮನು ಮುಂತಾದ ಸ್ಮೃತಿಕಾರರನ್ನು ದೂರುವುದು ಮೊದಲನೆಯ ಅವಿವೇಕ. ಹೀಗೆಯೇ ಬ್ರಹ್ಮಸೂತ್ರ ಭಾಷ್ಯದಲ್ಲಿ ಅಪಶೂದ್ರಾಧಿಕರಣವನ್ನು ವ್ಯಾಖ್ಯಾನ ಮಾಡುವಾಗ ಶ್ರೀ ಶಂಕರಾಚಾರ್ಯರು **ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ಬರೆದದ್ದುಂಟು.** ಸೂತ್ರಕಾರರು ಹೇಳಿದ್ದನ್ನು ಅವರು ವಿವರಿಸಿದ್ದಾರೆ. ಆಚಾರ್ಯರನ್ನೇ ದೂರುವುದು ಅರ್ಥವಿಲ್ಲದ್ದು. ಇಷ್ಟಾಗಿ ಮನುವೇನೂ ಬ್ರಾಹ್ಮಣನಲ್ಲ. ಬ್ರಾಹ್ಮಣನನ್ನು ಹೊಗಳಲು ಜಾತಿಯ ಅಭಿಮಾನವೇನೂ ಅವನನ್ನು ಕಾಡಿಸಿಲ್ಲ.

ಬುದ್ಧಿಶಾಲಿಗಳು ವಿಚಾರ ಮಾಡಬೇಕಾದ ಪ್ರಕಾರ ಇದಲ್ಲ. ವೇದದಲ್ಲಿ ಚಾತುರ್ವರ್ಣ್ಯ ಪ್ರತಿಪಾದನೆ ಹೇಗೆ ಬಂದಿದೆ ? ಏಕೆ ಬಂದಿದೆ? ಅದರಲ್ಲಿರುವ ಗುಣದೋಷಗಳೇನು? ಹಾಗೆ ವಿಭಾಗ ಮಾಡಿದ ಋಷಿಗಳ ಉದ್ದೇಶವೇನಿರಬಹುದು? ಚಾರಿತ್ರಿಕವಾಗಿ ನೋಡಿದರೂ ಸುಮಾರು ಹತ್ತು ಸಾವಿರ ವರ್ಷಗಳಿಂದ ಈ ಚಾತುರ್ವರ್ಣ್ಯವು ಭಾರತ ಭೂಮಿಯಲ್ಲಿ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿದೆ. ಇದನ್ನು ರಾಜಮಹಾರಾಜರುಗಳು ಕಾಪಾಡಿಕೊಂಡು ಬಂದಿದ್ದಾರೆ. ಅಷ್ಟು ದೀರ್ಘ ಕಾಲದವರೆಗೆ ಅದು ಬಾಳಬೇಕಾದರೆ ಅದರಲ್ಲಿ ಪ್ರಬಲವಾದ ಒಂದು ಸತ್ತ್ವವಿದ್ದೇ ಇರಬೇಕಲ್ಲವೇ? ಯಾವುದು ಹೆಚ್ಚು ಕಾಲ ಬಾಳುತ್ತದೆಯೋ ಅದು ವೀರ್ಯವತ್ತಾಗಿರಲೇಬೇಕು. ಅಂತಹ ಸತ್ತ್ವ ಯಾವುದಿರಬಹುದು ?

ಬ್ರಾಹ್ಮಣರ ಸಂಖ್ಯೆ ಯಾವ ಕಾಲದಲ್ಲಾದರೂ ಅತ್ಯಲ್ಪವೇ. ಜನಗಣತಿಯಂತೆ ಶೇಕಡಾ ನಾಲ್ಕರ ಮೇಲೆ ಬ್ರಾಹ್ಮಣರ ಸಂಖ್ಯೆ ಇಲ್ಲ. ಬ್ರಾಹ್ಮಣೇತರರ ಸಂಖ್ಯೆ ಅಧಿಕವಾಗಿದೆ. ಈ ವರ್ಣ ವಿಭಾಗವು ಅವೈಜ್ಞಾನಿಕವೂ ಮನುಷ್ಯರಲ್ಲಿಯೇ ತಾರತಮ್ಯವನ್ನುಂಟುಮಾಡುವ ಅನ್ಯಾಯದ ಕ್ರಮವೆಂದೂ ಅದರಿಂದ ಇತರ ಜನರು ಅವಮಾನಾದಿಗಳಿಗೆ ಗುರಿಯಾದರೆಂದೂ ಹೇಳುವುದು ನಿಜವಾದರೆ ಆಗ ಬ್ರಾಹ್ಮಣೇತರರು ದಂಗೆಯೆದ್ದುಬಿಡುತ್ತಿದ್ದರಲ್ಲವೆ? ಬಡಪಾಯಿ ಬ್ರಾಹ್ಮಣರನ್ನು ನಿರ್ಮೂಲ ಮಾಡಿಬಿಡುತ್ತಿದ್ದರಲ್ಲವೆ? ಇತಿಹಾಸ ಕಾಲದಲ್ಲಿಯೂ ಸಹ ಇತರ ಜಾತಿಯವರೇ ರಾಜರೂ, ನಾಯಕರೂ, ಪಾಳೇಗಾರರೂ ಆಗಿ ನಿರಂಕುಶ ವೃತ್ತಿಯಿಂದ ರಾಜ್ಯವನ್ನು ನಡೆಸಿಕೊಂಡು ಹೋಗಿದ್ದಾರೆ. ಅವರೇಕೆ ಜಾತಿ ನಿರ್ಮೂಲನಕ್ಕೆ ಪ್ರಯತ್ನಿಸಲಿಲ್ಲ? ಬ್ರಾಹ್ಮಣರನ್ನು ಜಾತಿಗೆಡಿಸಲಿಲ್ಲ? ಅಥವಾ ಕೊಂದು ಹಾಕಲಿಲ್ಲ ?

ಆ ಕಾಲದಲ್ಲಿ ಮುದ್ರಣವೇ ಇರಲಿಲ್ಲ. ಅಲ್ಲಲ್ಲಿ ದೊರಕುತ್ತಿದ್ದ ಹಸ್ತಪ್ರತಿಗಳನ್ನು ಸಂಗ್ರಹಿಸಿ ಸುಟ್ಟು ಬಿಡಬಹುದಾಗಿತ್ತು. ಮನುಸ್ಮೃತಿಯೇ ಇಲ್ಲವೆನಿಸಿಬಿಡಬಹುದಾಗಿತ್ತು.

ಆದ್ದರಿಂದ ಬುದ್ಧಿಜೀವಿಗಳು ಧರ್ಮಶಾಸ್ತ್ರಗಳ ಮೇಲೆ ದಾಳಿ ಮಾಡುವ ಪ್ರವೃತ್ತಿಯನ್ನು ತ್ಯಜಿಸಿ, ವರ್ಣವಿಭಾಗದಲ್ಲಿದ್ದ ಸತ್ತ್ವ ಯಾವುದು ? ಆ ವರ್ಣವಿಭಾಗವು ಕ್ಷಯಿಸುತ್ತ ಹೋದದ್ದರ ಹಿನ್ನೆಲೆಯೇನೆಂಬುದು ಚಾರಿತ್ರಿಕವಾಗಿ ವಿಮರ್ಶಿಸಿದಲ್ಲಿ ಅದೊಂದು ಶೋಧನ ಕಾರ್ಯವಾಗುತ್ತದೆ. ವರ್ಣ ವಿಭಾಗವನ್ನು ಮತ್ತೆ ಸ್ಥಾಪಿಸಬೇಕೆಂದು ಯಾರೂ ಹೇಳುವುದಿಲ್ಲ. ಅದು ನಶಿಸುತ್ತದೆ. ನಶಿಸಿ ಹೋಗುವುದರಲ್ಲಿ ಸಂದೇಹವೂ ಇಲ್ಲ. ಕಾಲದ ಮಹಿಮೆಯೇ ಹಾಗಿದೆ. ನದೀ ಪ್ರವಾಹವನ್ನಾದರೂ ಅಡ್ಡಗಟ್ಟಬಹುದು, ಕಾಲ ಪ್ರವಾಹವನ್ನು ಅಡ್ಡಗಟ್ಟಲಾಗುವುದಿಲ್ಲ. ಬಿರುಗಾಳಿ ಸುಂಟರಗಾಳಿಗಳ ಜಡಿತವನ್ನು ಮಾನವನು ತಡೆಯಲಾರ. ನಮ್ಮ ಪ್ರಯತ್ನವೇನಿದ್ದರೂ ಭಾರತೀಯರಲ್ಲಿ ವೈದಿಕಧರ್ಮದಲ್ಲಿದ್ದ ಶ್ರದ್ಧಾ ಬಿಂದುವನ್ನು ಉಳಿಸುವುದು. ಇದು ಬ್ರಾಹ್ಮಣರಿಗೆ ಮಾತ್ರ ಸಂಬಂಧಿಸಿದ ವಿಷಯವಲ್ಲ. ಎಲ್ಲ ಜಾತಿಯವರಿಗೂ ಎಲ್ಲ ಮಾನವರಿಗೂ ಅತ್ಯಾವಶ್ಯಕವಾದ ಧರ್ಮಶ್ರದ್ಧೆಯನ್ನು ಉಳಿಸುವುದೇ ಆಗಿದೆ. ಜಾತಿ ನಿಮಿತ್ತಿಕವಾದ ವರ್ಣವಿಭಾಗವು ತೊಡೆದು ಹೋದರೂ ಗುಣವೃತ್ತಿನಿಮಿತ್ತಕವಾದ ವರ್ಣವಿಭಾಗವು ಎಂದೆಂದಿಗೂ ಇರತಕ್ಕದ್ದೇ. ಆ ರೀತಿಯಾದ ವಿಭಾಗದಲ್ಲಿಯೂ ಧರ್ಮಪಾಲನೆ ಅತ್ಯಾವಶ್ಯಕವಾದದ್ದು. ಧರ್ಮಶಾಸ್ತ್ರಗಳ ಮೇಲೆ ಬುದ್ಧಿಜೀವಿಗಳು ಧಾಳಿ ಮಾಡಿ ಹಾವಳಿಯೆಬ್ಬಿಸಿದಾಗ ಧರ್ಮಶ್ರದ್ಧೆಯೇ ಅಳಿಸಿ ಹೋದೀತು. **ಮನುಷ್ಯ ಜಾತಿಯ ಅಳಿವು ಉಳಿವುಗಳು ಧರ್ಮದ ಮೇಲೆ ನಿಂತಿದೆಯೇ ಹೊರತು ಸರಕಾರದ ನಿಯಮಾವಳಿಯ ಮೇಲಲ್ಲ** ಎಂಬುದನ್ನು ಸ್ಪಷ್ಟವಾಗಿ ಅರಿತಿರಬೇಕು. ಆದ್ದರಿಂದಲೇ ಮನುಸ್ಮೃತಿಯು ಈಗ ಎಷ್ಟು ಪ್ರಸ್ತುತ ? ಎಷ್ಟು ಅಪ್ರಸ್ತುತ? ಎಂಬ ವಿಚಾರವೂ ಸಹ ಅವಿವೇಕದ ಇನ್ನೊಂದು ತುದಿಯಲ್ಲದೇ ಬೇರೆಯಲ್ಲ. ಅದೇ ರೀತಿಯಾಗಿ ಸರಕಾರದ ನಿಯಮಗಳು, ಕಾನೂನುಗಳು ಈಗ ಎಷ್ಟು ಪ್ರಸ್ತುತ?

ನಾನಾ ಬಗೆಯ ಭ್ರಷ್ಟಾಚಾರಗಳಿಗೆ ಜನ್ಮಭೂಮಿಯಾಗಿರುವ ಪ್ರಜಾಪ್ರಭುತ್ವವು ಎಷ್ಟು ಪ್ರಸ್ತುತ? ಎಂದು ನಾವು ಗೊಂದಲವನ್ನೆಬ್ಬಿಸಲಾರೆವೆ? ಧರ್ಮಶಾಸ್ತ್ರದ ಮಾತಿರಲಿ, ಧರ್ಮವೆಂದೊಡನೆ ಈ ಜನರಿಗೆ '**ಅಲರ್ಜಿ**' ತಲೆದೋರುತ್ತದೆ. ನೀತಿ ಶಾಸ್ತ್ರವು ಈಗ ಎಷ್ಟು ಪ್ರಸ್ತುತ ? ಎಂದು ನಾವು ಕೇಳಲಾರೆವೆ ? ನ್ಯಾಯಾಲಯಗಳೀಗ ಎಷ್ಟು ಪ್ರಸ್ತುತ ? ಎಂಬ ವಿಚಾರವನ್ನೇಕೆ ಈ ಬುದ್ಧಿಜೀವಿಗಳು ಎತ್ತುವುದಿಲ್ಲ ? ಅಪ್ರಸ್ತುತ ಪ್ರಸಂಗವು ನಮ್ಮನ್ನು ಬಿಡುವುದಿಲ್ಲ ಎಂದು ತೋರುತ್ತದೆ.

ಪುರುಷಸೂಕ್ತದಲ್ಲಿ ಹೀಗಿದೆ-

**ಬ್ರಾಹ್ಮಣೋಽಸ್ಯ ಮುಖಮಾಸೀತ್। ಬಾಹೂ ರಾಜನ್ಯಃ ಕೃತಃ।**
**ಊರೂ ತದಸ್ಯ ಯದ್ವೈಶ್ಯಃ। ಪದ್ಭ್ಯಾಗ್ ಶೂದ್ರೋ ಅಜಾಯತ॥**

ಇದರ ಅರ್ಥ ಹೀಗೆ - ವಿರಾಟ್ ಪುರುಷನ ಮುಖದಿಂದ ಬ್ರಾಹ್ಮಣನು ಹುಟ್ಟಿದರು. ಅವನ ತೋಳುಗಳಿಂದ ಕ್ಷತ್ರಿಯನ ನಿರ್ಮಾಣವಾಯಿತು. ತೊಡೆಗಳಿಂದ ವೈಶ್ಯನು ಜನಿಸಿದನು. ಪಾದಗಳಿಂದ ಶೂದ್ರನು ಹುಟ್ಟಿದನು.

ವೇದಾರ್ಥವನ್ನರಿಯುವುದು ಕಠಿಣ. ಆಲಂಕಾರಿಕವಾದ ಪರೋಕ್ಷಭಾಷೆಯಲ್ಲಿ ಮಂತ್ರಗಳಿರುತ್ತವೆ. ಪಂಚತಂತ್ರ ಹಿತೋಪದೇಶಗಳಿಗೆ ಅರ್ಥ ಮಾಡಿದಂತೆ, ಭಾಷಾವ್ಯುತ್ಪತ್ತಿಯಿಂದ ಅರ್ಥ ಹೇಳಿದರೆ ಮಹತ್ತರವಾದ ಪ್ರಮಾದವಾಗುತ್ತದೆ. ತಪ್ಪಿಸಿಕೊಳ್ಳಲಾರದ ಕಗ್ಗಂಟಿನಲ್ಲಿ ಸಿಕ್ಕಿಕೊಂಡು ನರಳುವುದು ನಿಶ್ಚಯ. '' **ಶೃಣೋತ ಗ್ರಾವಾಣಃ** = ಕಲ್ಲುಗಳೇ ಕೇಳಿರಿ ! **ಸಪ್ತಋಷಯಃ ಪ್ರತಿಹಿತಾಃ ಶರೀರೇ** = ಈ ದೇಹದಲ್ಲಿ ಏಳು ಮಂದಿ ಋಷಿಗಳಿದ್ದಾರೆ. ಇಂತಹ ವಾಕ್ಯಗಳನ್ನು ಸಮರ್ಥಿಸುವುದು ಹೇಗೆ ? **ಏಕೋ ರುದ್ರೋನ ದ್ವಿತೀಯಾಯ ತಸ್ಥೇ** ' ಎಂಬಲ್ಲಿ ರುದ್ರನು ಒಬ್ಬನೇ ಇದ್ದಾನೆ ಎಂದು ತಿಳಿಸಿದೆ, ' **ಸಹಸ್ರಾಣಿ ಸಹಸ್ರಶೋ ಯೇ ರುದ್ರಾಃ** ' ಎಂಬಲ್ಲಿ ಸಾವಿರಾರು ರುದ್ರರ ಪ್ರಸ್ತಾವ ಬರುತ್ತದೆ. ಆದ್ದರಿಂದ ಅಲ್ಪಶ್ರುತನು ವೇದಗಳಿಗೆ ಅರ್ಥ ಹೇಳುವ ಸಾಹಸ ಮಾಡಕೂಡದು.

ಈ ಪುರುಷಸೂಕ್ತದಲ್ಲಿಯೇ ಇರುವ ವೈಚಿತ್ರ್ಯವನ್ನು ನೋಡಿ. **ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।** ಆ ಪುರುಷನಿಗೆ ಸಾವಿರ ತಲೆಗಳೂ ಸಾವಿರ ಕಣ್ಣುಗಳೂ ಸಾವಿರ ಪಾದಗಳೂ ಇವೆಯಂತೆ ! ಸಾವಿರ ತಲೆಗಳಿದ್ದರೆ ಎರಡು ಸಾವಿರ ಕಣ್ಣುಗಳಾದರೂ ಇರಬೇಡವೆ ? ಎರಡು ಸಾವಿರ ಕಾಲುಗಳಾದರೂ ಇರಬೇಡವೆ ? ಇಂತಹ ಪುರುಷನಾದರೂ ಯಾರವನು ? ಬ್ರಹ್ಮನಲ್ಲ, ವಿಷ್ಣುವಲ್ಲ, ಶಿವನಲ್ಲ. ಈ ಪುರುಷನಿಂದ ಇಂದ್ರ, ಅಗ್ನಿ ಮೊದಲಾದ ದೇವತೆಗಳು ಹುಟ್ಟಿದರೆಂದು ಮುಂದೆ ವರ್ಣನೆ ಇದೆ. ದೇವತೆಗಳೇ ಪುರುಷನನ್ನು ಪಶುವನ್ನಾಗಿ ಕಟ್ಟಿ ಯಜ್ಞಮಾಡಿ ಇವನನ್ನು ಹವಿಸ್ಸಿನಲ್ಲಿ ಹೋಮ ಮಾಡಿದರಂತೆ. ಆಮೇಲೆ ದೇವತೆಗಳು ಹುಟ್ಟಿದರೆಂದು ವರ್ಣಿಸಿದೆ. ಈ ಸಮಸ್ಯೆಯನ್ನು ಬಗೆಹರಿಸಲು ಭಾಷಾಜ್ಞಾನವು ಮಾತ್ರ ಇದ್ದವರಿಂದ ಎಂದಿಗಾದರೂ ಆದೀತೆ ?

ಅದಿರಲಿ, ಬ್ರಾಹ್ಮಣಾದಿಗಳು ಈ ಪುರುಷನ ಮುಖ ಮೊದಲಾದ ಅವಯವಗಳಿಂದ ಹುಟ್ಟಿದರೆಂದು ಹಿಂದೆ ಉದಾಹರಿಸಿದೆಯಷ್ಟೆ. ಅದರಲ್ಲಿ ' **ಪದ್ಭ್ಯಾಂ**

**ಶೂದ್ರೋ ಅಜಾಯತ** ' ಎಂಬಲ್ಲಿ ಮಾತ್ರ **ಪದ್ಭ್ಯಾಂ** ಎಂದು ಪಂಚಮೀ ವಿಭಕ್ತಿ ಇದೆ. ಪಾದಗಳಿಂದ ಎಂದು ಅರ್ಥ ಮಾಡುವುದು ಸಹಜವಾಗಿ ಸಾಧ್ಯ. ಸಹಸ್ರ ಪಾದಗಳಿದ್ದ ಪುರುಷನಲ್ಲಿ ಈಗ ಎರಡೇ ಪಾದಗಳನ್ನು ಹೇಳಿದ್ದು ಏಕೆ ? ಹೋಗಲಿ, **ಬ್ರಾಹ್ಮಣೋಽಸ್ಯ ಮುಖಮಾಸೀತ್** ಎಂಬಲ್ಲಿ ಪಂಚಮೀ ವಿಭಕ್ತಿ ಇಲ್ಲ. **ಬಾಹೂ ಊರೂ** ಎಂಬಲ್ಲಿಯೂ ಇಲ್ಲ. ಅವುಗಳಿಗೆ ಈ ಪುರುಷನ ಮುಖವೇ ಬ್ರಾಹ್ಮಣ, ಭುಜಗಳೇ ಕ್ಷತ್ರಿಯ, ತೊಡೆಗಳೇ ವೈಶ್ಯ ಎಂದು ಅರ್ಥವಾಗುತ್ತದೆಯೇ ಹೊರತು ಮೇಲೆ ನಾವು ಬರೆದು ಅರ್ಥ ಬರುವುದು ಸಹಜವಲ್ಲ. ಆದ್ದರಿಂದ ಮನಸ್ಸಿಗೆ ತೋರಿದಂತೆ ವೇದವಾಕ್ಯಗಳಿಗೆ ಅರ್ಥ ಮಾಡಲು ಹೋಗಕೂಡದು. ವ್ಯಾಕರಣ, ನಿರುಕ್ತ, ಪೂರ್ವಮೀಮಾಂಸಾ, ಉತ್ತರ ಮೀಮಾಂಸಾದಿ ಶಾಸ್ತ್ರಗಳಲ್ಲಿ ಪರಿಣತನಾಗಿ ಗುರೂಪದೇಶದಿಂದ ಸಂಪ್ರದಾಯ ಕ್ರಮುವನ್ನು ಬಲ್ಲವನು ಮಾತ್ರ ವೇದಾರ್ಥವನ್ನರಿತುಕೊಳ್ಳಲು ಅಧಿಕಾರಿಯಾಗಿದ್ದಾನೆ.

ಪುರುಷಸೂಕ್ತದ ದ್ರಷ್ಟಾರನಾದ ಋಷಿಯು '' **ವೇದಾಹಮೇತಂ ಪುರುಷಂ ಮಹಾಂತಂ** ' ಇತ್ಯಾದಿ ವಾಕ್ಯಗಳಿಂದ ಮುಂದೆ ''ಈ ಮಹಾಪುರುಷನನ್ನು ನಾನು ಬಲ್ಲೆ. ಅವನನ್ನು ತಿಳಿದವನು ಮರಣವನ್ನು ದಾಟಿ ಮೋಕ್ಷವನ್ನು ಪಡೆಯುತ್ತಾನೆ. ಮೋಕ್ಷವನ್ನು ಪಡೆಯಲು ಅವನ ಜ್ಞಾನವೇ ಕಾರಣ. ಬೇರೆ ದಾರಿಯಿಲ್ಲ'' ಎಂದು ಘೋಷಿಸಿದ್ದಾನೆ. ಇಂತಹ ಪರಮಪುರುಷನನ್ನು ದೇವತೆಗಳು ಪಶುವೆಂದು ಕಟ್ಟಿ ಹಾಕಿ ಅವಯವಗಳನ್ನು ಕತ್ತರಿಸಿ ಹೋಮ ಮಾಡಿದರೆಂದರೆ ಅರ್ಥವೇನು ?

ಇದರಲ್ಲಿ ಹೇಳಿದ ಪುರುಷನು ಸಾಕ್ಷಾತ್ ಪರಮಾತ್ಮನೇ. ಅವನೇ ತನ್ನ ಮಾಯಾಶಕ್ತಿಯಿಂದ ಜಗತ್ತಾದನು. '' **ತತ್ ಸೃಷ್ಟ್ವಾ ತದೇವಾನುಪ್ರಾವಿಶತ್** '' ಈ ಜಗತ್ತಿನಲ್ಲಿರುವ ಸ್ಥಾವರ ಜಂಗಮಗಳನ್ನು ಸೃಷ್ಟಿಸಿ ಅವುಗಳಲ್ಲೇ ಸೇರಿಕೊಂಡನು. ಈ ಸಮಸ್ತ ಜಗತ್ತು ಆತನ ಶರೀರವೆಂಬುದೊಂದು ಕಲ್ಪನೆ. ಅದರಲ್ಲಿ ಮಾನವ ಜನ್ಮ ಸರ್ವೋತ್ತಮವಾದದ್ದು. ಈ ಮಾನವ ಸಮಾಜದಲ್ಲಿ ಬ್ರಾಹ್ಮಣನು ಶಿರಸ್ಸಿನ ಸ್ಥಾನದಲ್ಲಿದ್ದಾನೆ ಎಂದರೆ ಪುರುಷನ ವಿರಾಟ್ ಶರೀರದಲ್ಲಿ ಬ್ರಾಹ್ಮಣನು ಶಿರಸ್ಸು. ಕ್ಷತ್ರಿಯನು ಆ ಪುರುಷನ ಭುಜ, ವೈಶ್ಯನು ತೊಡೆ, ಶೂದ್ರನು ಪಾದ ಎಂದು ವೇದದ ಅಲಂಕಾರಿಕವಾದ ವರ್ಣನೆ.

ಇದರ ವಾಸ್ತವ ಅಭಿಪ್ರಾಯವೇನೆಂಬುದನ್ನು ನಾವು ಗಮನಿಸಬೇಕು. ಬರಿಯ ಶಬ್ದಾರ್ಥವನ್ನಲ್ಲ. ಯಾವುದೇ ಒಂದು ಸಮಾಜವು ಅಭಿವೃದ್ಧಿಯನ್ನು ಪಡೆದು ಸುಖ ಸಂತೋಷಗಳಿಂದ ಬಾಳಬೇಕಾದರೆ ಮೂಲಭೂತವಾದ ಪದಾರ್ಥಗಳು ನಾಲ್ಕೆಂದು ಹಿಂದೆ ತಿಳಿಸಿದೆ. ಬುದ್ಧಿಶಕ್ತಿಯ ಪ್ರತಿನಿಧಿಯನ್ನು ಬ್ರಾಹ್ಮಣ ಎಂದು ಶಾಸ್ತ್ರವು ಹೇಳಿದೆ.

ದೈಹಿಕ ಶಕ್ತಿಯನ್ನು ವ್ಯಕ್ತಪಡಿಸುವ ಬಾಹುಗಳ ಪ್ರತಿನಿಧಿ ಕ್ಷತ್ರಿಯ. ಇವನದು ಸಂರಕ್ಷಣ ಶಕ್ತಿ. ಸಂಪತ್ತನ್ನು ಉತ್ಪಾದಿಸುವ ಶಕ್ತಿಯನ್ನು ಪ್ರತಿನಿಧಿಸತಕ್ಕವನು ವೈಶ್ಯ. ಅಲೆದಾಟದ ಶಕ್ತಿ ತೊಡೆಗಳಲ್ಲಿ ಕೇಂದ್ರೀಕೃತವಾಗಿದೆ. ಮೇಲ್ಕಂಡ ಮೂರು ವರ್ಗದವರಿಗೆ ಬೇಕಾದ ಸಲಕರಣೆಗಳನ್ನು ಒದಗಿಸುವ ದೈಹಿಕ ಶ್ರಮವನ್ನು ವಹಿಸಿದವನು ಶೂದ್ರನೆನಿಸಿದನು.

ಚಾತುರ್ವರ್ಣ್ಯದಿಂದಾದ ಜಾತಿ ವ್ಯವಸ್ಥೆಯನ್ನು ಪುರುಷಸೂಕ್ತವು ಸ್ಪಷ್ಟವಾಗಿ ತಿಳಿಸಿದೆ. ಕೆಲವು ಪಾಶ್ಚಾತ್ಯ ವಿದ್ವಾಂಸರೂ, ಅವರ ಹೇಳಿಕೆಯನ್ನು ವಿಧೇಯತೆಯಿಂದ ಮಾನ್ಯ ಮಾಡುವ ಕೆಲವು ಭಾರತೀಯ ವಿದ್ವಾಂಸರೂ ಹೀಗೆ ಹೇಳಿದ್ದುಂಟು -'' ಈ ಜಾತಿ ವ್ಯವಸ್ಥೆ ವೇದ ಕಾಲದಲ್ಲಿರಲಿಲ್ಲ. ಇದನ್ನು ಸೂಚಿಸುವ ವೇದಭಾಗವು ಅನಂತರ ಪ್ರಕ್ಷಿಪ್ತವಾದದ್ದು'' ಎಂದು. ಈ ಬಗೆಯ ವಿಚಾರಕ್ಕೆ ಹೊರಟಾಗ ನಮಗೆ ಬೇಡವೆನಿಸುವ ಭಾಗವೆಲ್ಲ ಪ್ರಕ್ಷಿಪ್ತವೆನ್ನಬೇಕಾದೀತು. ಒಬ್ಬನಿಗೆ ಯಾಗ ಬೇಡ, ಇನ್ನೊಬ್ಬನಿಗೆ ವಿಗ್ರಹ ಪೂಜೆ ಬೇಡ, ಮತ್ತೊಬ್ಬನಿಗೆ ಶಿವನು ಬೇಡ, ಮಗದೊಬ್ಬನಿಗೆ ವಿಷ್ಣು ಬೇಡ. ಈ 'ಬೇಡ' ರ ಹಾವಳಿಯಲ್ಲಿ ವೇದವೆಲ್ಲವೂ ಪ್ರಕ್ಷಿಪ್ತ - ಅಧುನಿಕವೆನಿಸೀತು. ಆದಿಯಲ್ಲಿ ರಾಜ್ಯವ್ಯವಸ್ಥೆ ಇರಲಿಲ್ಲವೆಂದು ವೇದವ್ಯಾಸರೇ ಹೇಳಿದ್ದಾರೆ.

**ನೈವ ರಾಜ್ಯಂ ನ ರಾಜಾಸೀತ್ ನ ದಂಡೋ ನ ಚ ದಾಂಡಿಕಃ ।**
**ಧರ್ಮೇಣೈವ ಪ್ರಜಾಃ ಸರ್ವಾ ರಕ್ಷಂತಿ ಸ್ಮ ಪರಸ್ಪರಮ್ ॥**

'' ಆದಿಯಲ್ಲಿ ರಾಜ್ಯವಿರಲಿಲ್ಲ, ರಾಜನೂ ಇರಲಿಲ್ಲ. ದಂಡನೆಯೂ ಇರಲಿಲ್ಲ. ದಂಡಿಸುವವನೂ ಇರಲಿಲ್ಲ. ಪ್ರಜೆಗಳೆಲ್ಲರೂ ಧರ್ಮದಿಂದಲೇ ತಮ್ಮನ್ನು ರಕ್ಷಿಸಿಕೊಳ್ಳುತ್ತಿದ್ದರು. ''

ಆದರೆ ರಾಜ, ರಾಜ್ಯಗಳ ಪ್ರಸ್ತಾವವು ವೇದದಲ್ಲಿ ಬಹಳ ಕಡೆ ಬಂದಿದೆ. ಹಾಗಾದರೆ ವೇದವ್ಯಾಸರು ಹೇಳಿದ್ದೇನು ? ನಮ್ಮ ವಿಚಾರಸರಣಿಯೇ ಕಡಿದು ದಾರಿ ತಪ್ಪಿದಾಗ ಈ ರೀತಿಯ ವಿಪ್ರತಿಪತ್ತಿಗಳು ಎದ್ದುಕೊಳ್ಳುತ್ತವೆ. ಕೆಲವು ವರ್ಷಗಳ ಹಿಂದೆ ಒಬ್ಬ ಆರ್ಯಸಮಾಜೀಯರು ''ವಿಗ್ರಹಾರಾಧನೆಯನ್ನು ಬಿಟ್ಟುಬಿಡಬೇಕು, ಅದನ್ನು ವೇದವು ಹೇಳಿಲ್ಲ '' ಎಂದರು. ಅದಕ್ಕೆ ನಾನು '' ಉಪ್ಪಿನಕಾಯಿಯನ್ನೂ, ಹೋಳಿಗೆ ಮಾಡುವುದನ್ನೂ ವೇದವು ಹೇಳಿಲ್ಲ. ಅವನ್ನು ನೀವು ತೊರೆಯಬೇಕು ! '' ಎಂದು ಉತ್ತರ ಹೇಳಿರುವುದು ಸ್ಮರಣೆಗೆ ಬರುತ್ತದೆ.

ಮಾನವಹಿತಕ್ಕಾಗಿ ಭಗವಂತನಿಂದ ವೇದದ ಆವಿಷ್ಕಾರ ಎಂಬುದು ನಮ್ಮ ದೃಢವಾದ ನಿಲುವು. ವೇದದ ಬೋಧನೆ ಹೀಗೆ '' ಎಲೈ ಮಾನವರೆ, ಧರ್ಮವೇ ನಿಮ್ಮನ್ನು ರಕ್ಷಿಸುತ್ತದೆಯೆಂಬುದು ಸತ್ಯ. ಆದರೆ ಧರ್ಮವನ್ನು ರಕ್ಷಿಸತಕ್ಕವರು ಯಾರು ? ' **ಧರ್ಮೋ ರಕ್ಷತಿ ರಕ್ಷಿತಃ** '. ನಿಮ್ಮಲ್ಲಿ ಕೆಲವರು ದುರ್ಮಾರ್ಗಕ್ಕೆ ಇಳಿದಾಗ ಏನು

ಮಾಡುತ್ತೀರಿ ? ಆದ್ದರಿಂದ ಧರ್ಮದ ರಕ್ಷಣೆಗಾಗಿ ಒಬ್ಬ ರಾಜನನ್ನು, ಸರಕಾರವನ್ನು ಗೊತ್ತು ಮಾಡಿಕೊಳ್ಳಿರಿ. ಆಗ ಧರ್ಮದ ರಕ್ಷಣೆಯಾಗುತ್ತದೆ. ಹಾಗೆಯೇ ಸಮಾಜದ ರಕ್ಷಣೆಗೆ ಒಂದು ಧಾರ್ಮಿಕ ವ್ಯವಸ್ಥೆ ಇರಲಿ. ಸಮಾಜದ ಹಿತಕ್ಕೆ ಬೇಕಾದ ಕರ್ತವ್ಯಗಳು ಬಹಳ ಇವೆ. ಈ ಕರ್ತವ್ಯಗಳನ್ನು ಹಂಚಿಕೊಳ್ಳಿರಿ. ವೇದಗ್ರಂಥವನ್ನು ವೇದಬೋಧಿತ ಧರ್ಮಗಳೇನೆಂಬುದನ್ನೂ ಸರಿಯಾಗಿ ತಿಳಿದು ಬೋಧಿಸತಕ್ಕ ಒಂದು ವಿಭಾಗವು ಸಮಾಜದಲ್ಲಿರಲಿ. ಧರ್ಮವನ್ನು ರಕ್ಷಿಸಿ, ಅಧರ್ಮಿಗಳನ್ನು ದಂಡಿಸತಕ್ಕ ಇನ್ನೊಂದು ವಿಭಾಗವಿರಲಿ. ಇನ್ನು ಸಮಾಜದ ಸಮೃದ್ಧಿ, ಅಭಿವೃದ್ಧಿಗಳಿಗೆ ಬೇಕಾದ ವಸ್ತುಗಳನ್ನು ಉತ್ಪಾದಿಸಿ ವಿತರಣೆ ಮಾಡತಕ್ಕ ಮೂರನೆಯ ವಿಭಾಗವಿನ್ನೊಂದಿರಲಿ. ಈ ಮೂರು ವಿಭಾಗಗಳ ಯೋಗಕ್ಷೇಮಗಳಿಗೆ ನೆರವಾಗುವುದರ ಮೂಲಕ ತಮ್ಮ ಶ್ರೇಯಸ್ಸನ್ನು ಸಾಧಿಸಿಕೊಳ್ಳತಕ್ಕ ಚತುರ್ಥ ವಿಭಾಗವೂ ಆವಶ್ಯಕ ''. ಇತ್ಯಾದಿ ಹಿತಬೋಧನೆಯನ್ನು ವೇದವು ಮಾಡಿದೆ. ಈ ವೇದಾಜ್ಞೆಯನ್ನು ಪಾಲಿಸುವುದಕ್ಕಾಗಿ ರಾಜ್ಯ ವ್ಯವಸ್ಥೆಯೂ ಚಾತುರ್ವರ್ಣ್ಯ ವ್ಯವಸ್ಥೆಯೂ ಆದವು. ಕಾಲವು ಕಳೆದಂತೆ ಗಿಡಗಳು ಬೆಳೆಯುತ್ತವೆ. ಹೂವು ಹಣ್ಣುಗಳು ಹಳಸುತ್ತವೆ. ಮಾನವನ ಬುದ್ಧಿದೋಷ, ಬುದ್ಧಿವಿಪರಿಣಾಮಗಳೆರಡೂ ಸೇರಿ ಈಗಿರುವ ಜಾತಿಪದ್ಧತಿಯು ಅಳಿಯುವ ಹಂತವನ್ನು ತಲುಪಿದ್ದರೆ ಅಚ್ಚರಿಯೇನೂ ಇಲ್ಲ. ಚಾತುರ್ವರ್ಣ್ಯ ವ್ಯವಸ್ಥೆಯು ವೇದ ಸಮ್ಮತ ಮತ್ತು ವೈಜ್ಞಾನಿಕ. ಜಾತಿಪದ್ಧತಿಯು ಪ್ರಕೃತಿ ನಿರ್ಮಿತ, ಮಾನವ ಪ್ರೇರಿತ ಎಂದು ನಿರ್ಣಯಿಸುವುದು ಉಭಯ ಪಕ್ಷಗಳ ಸಮನ್ವಯ ಮಾರ್ಗವೆಂದು ತೋರುತ್ತದೆ. ಜಾತಿಪದ್ಧತಿಯು ಹೆಚ್ಚಿನ ವಿಶ್ಲೇಷಣೆಯನ್ನು ಅಪೇಕ್ಷಿಸುತ್ತದೆ. ಅದು ಮುಂದೆ ಯಥಾಸ್ಥಾನದಲ್ಲಿ ವಿಶದವಾಗಲಿದೆ.

ಮನುಷ್ಯನು ಸತ್ತ್ವರಜಸ್ತಮೋಗುಣಗಳ ಮುದ್ದೆಯಾಗಿದ್ದಾನೆ. ಒಬ್ಬೊಬ್ಬರಲ್ಲಿ ಒಂದೊಂದರ ಅಧಿಕ್ಯ. ಉಳಿದವುಗಳ ಅಲ್ಪತೆ ಇರುತ್ತದೆ. ಈ ನ್ಯೂನಾಧಿಕ ಭಾವದ ಸಮ್ಮಿಶ್ರಣದಿಂದ ಮನುಷ್ಯನ ಅಂತಃಕರಣವು ಸಾವಿರಾರು ಭೇದಗಳನ್ನು ಪಡೆಯುತ್ತದೆ. ಈ ಭೇದಗಳಿಗೆ ತಕ್ಕಂತೆ ಮನುಷ್ಯನ ಪ್ರವೃತ್ತಿ ಇರುತ್ತದೆ. ಅದರಿಂದ ಕರ್ಮಭೇದಗಳು. ಹೀಗೆ ಸಂಭವಿಸತಕ್ಕ ಗುಣಕರ್ಮಭೇದಗಳು ಅಸಂಖ್ಯವಾದವು. ಪ್ರಕೃತಿಸಿದ್ಧವಾದ ಈ ಭೇದಗಳನ್ನು ನಾಲ್ಕು ವರ್ಗಗಳನ್ನಾಗಿ ವಿಂಗಡಿಸಿದೆ. ವೇದವು ಹೇಳಿರುವುದು ವರ್ಗವಿಭಾಗ. ಭೇದವು ಮನುಷ್ಯರಿಗೆ ಸಹಜವಾಗಿ ಇರತಕ್ಕದ್ದು. ಭೇದವನ್ನುಂಟುಮಾಡಿದ್ದು ಪುರುಷಸೂಕ್ತವೂ ಅಲ್ಲ, ಇತರ ವೇದಭಾಗಗಳೂ ಅಲ್ಲ, ಮನುಸ್ಮೃತಿಯೂ ಅಲ್ಲ. ಪ್ರಕೃತಿಯಲ್ಲಿ ಸರ್ವಸಮತೆ ಎಲ್ಲಿಯೂ ಕಂಡುಬರುವುದಿಲ್ಲ. ನೀರು, ನೆಲ, ಗಾಳಿಗಳಲ್ಲಿ ವ್ಯತ್ಯಾಸ ಉಂಟು. ಭಾರತೀಯರು, ಯುರೋಪಿಯನ್ನರು, ಆಫ್ರಿಕಾದವರು, ಚೀನೀಯರು, ಜಪಾನೀಯರು ಇವರ ಆಕೃತಿ, ವರ್ಣ, ಎತ್ತರ,

ನಿಲುವುಗಳಲ್ಲಿ ತುಂಬಾ ವೈಲಕ್ಷ್ಯಣ್ಯವಿದೆ. ಹೀಗೆ ಒಂದೇ ರಾಷ್ಟ್ರದ ಜನರ ಆಕೃತಿಯಲ್ಲಿಯೂ ಭೇದವಿದೆ. ಬಹಿರಂಗದ ಭೇದದಂತೆ ಅಂತರಂಗದ ಗುಣ ಸ್ವಭಾವಗಳ ಭೇದವೂ ಸಹಜ. ತಮ್ಮ ಗುಣ ಸ್ವಭಾವಗಳಿಗೆ ತಕ್ಕಂತೆ ಜನರು ಜೀವನ ವೃತ್ತಿಯನ್ನವಲಂಬಿಸಿ ವಿಭಿನ್ನ ಉದ್ಯೋಗಗಳಲ್ಲಿ ತೊಡಗಿಕೊಳ್ಳುವುದು ಮನುಷ್ಯ ಸ್ವಭಾವ. ಒಂದು ಸಮಾಜದ ವ್ಯವಸ್ಥಿತ ಜೀವನಕ್ಕೆ ವಿದ್ಯೆ, ಬಲ, ಆಹಾರಾದಿ ಸಮೃದ್ಧಿ, ದೈಹಿಕ ಶ್ರಮ ಇವು ನಾಲ್ಕೂ ಪ್ರಧಾನವಾದ ಅಂಗಗಳು. ಪ್ರಜೆಗಳು ತಮ್ಮ ಮನಃ ಪ್ರವೃತ್ತಿಗನುಗುಣವಾಗಿ ಈ ನಾಲ್ಕರಲ್ಲಿ ಒಂದೊಂದನ್ನು ಆರಿಸಿಕೊಳ್ಳುತ್ತಾರೆ. ಪೂರ್ವಕಾಲದಲ್ಲಿ ಈಗಿರುವಂತೆ ಜನಪದ ಸಂಪರ್ಕವು ನಿಕಟವಾಗಿರಲಿಲ್ಲ. ಒಂದು ಗ್ರಾಮ ಅಥವಾ ಎರಡು ಮೂರು ಗ್ರಾಮಗಳ ಸಮುದಾಯವು ಸ್ವಯಂಪೂರ್ಣವಾಗಿರಬೇಕಾಗಿತ್ತು. ತಂದೆತಾಯಿಗಳು ಆರಿಸಿಕೊಂಡ ವೃತ್ತಿ, ಉದ್ಯೋಗಗಳೇ ಮಕ್ಕಳಿಗೆ ಪರಿಚಿತವಾಗಿ ಅವುಗಳಲ್ಲಿಯೇ ಆಸಕ್ತಿಯು ಬೆಳೆದು ಅವರೂ ಆಯಾ ಜೀವನೋದ್ಯೋಗಗಳನ್ನೇ ಆರಿಸಿಕೊಳ್ಳುವುದು ಸಹಜವೇ ಆಗಿದೆ. ಈ ಪ್ರಕಾರವಾಗಿ ವಂಶಪಾರಂಪರ್ಯದಲ್ಲಿ ಒಂದೇ ವೃತ್ತಿಪ್ರವೃತ್ತಿಗಳು ಬೆಳೆದು ಬಂದದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಹೀಗೆ ಒಂದೊಂದು ಕಸಬು ಒಂದೊಂದು ಗುಂಪಿನಲ್ಲಿ ರೂಢಮೂಲವಾದ್ದರಿಂದ ಜಾತಿಪದ್ಧತಿ ಹುಟ್ಟಿಕೊಂಡಿತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಗಗಳಾದವು. ನಾಲ್ಕನೆಯ ವರ್ಗದವರು ದೈಹಿಕ ಶ್ರಮದಿಂದ ಜೀವಿಸತಕ್ಕವರು. ಎಲ್ಲರಿಗೂ ಉಪಯುಕ್ತವಾದ ಬೇರೆ ಬೇರೆ ಕಸಬುಗಳನ್ನು ಅವರು ಆರಿಸಿಕೊಂಡದ್ದರಿಂದ ಕಸುಬಿಗೆ ಅನುಗುಣವಾಗಿ ಕುಂಬಾರ, ಚಮ್ಮಾರ, ಬಡಗಿ, ನಾಪಿತ, ಎಂಬ ಹೆಸರುಗಳು ಬಂದು ಅದೇ ಹೆಸರಿನ ಜಾತಿಗಳೆನಿಸಿದವು. ಕೃಷಿಯು ವೈಶ್ಯ ವೃತ್ತಿಯಾದರೂ ಉಳುವುದು, ಅಗೆಯುವುದು ಮುಂತಾದ ದೈಹಿಕ ಶ್ರಮದ ಕಾರ್ಯಗಳು ಶೂದ್ರ ವರ್ಗದ ಪಾಲಾಗಿ ಒಕ್ಕಲಿಗ ಇತ್ಯಾದಿ ನಾಮಗಳೂ, ಜಾತಿಗಳೂ ಆದವು. ಇದು ಊಹಾಪೋಹದ ಮಾತಲ್ಲ. ಸಮಾಜಶಾಸ್ತ್ರ ವಿದ್ವಾಂಸರ ನಿರ್ಣೀತವಾದ ಅಭಿಪ್ರಾಯ.

ದೇಹಬಲವೆಂದರೆ ವೀರ್ಯ, ಪರಾಕ್ರಮ, ಹೋರಾಟದ ಪ್ರವೃತ್ತಿ. ವಾಣಿಜ್ಯವು ಧನಬಲದಿಂದ ಸಾಧಿಸುವ ವ್ಯಾಪಾರ, ಹಣದ ವ್ಯವಹಾರ. ಕಾರ್ಮಿಕರ ಸಮುದಾಯದಿಂದಾಗುವ ಯಾಂತ್ರಿಕ ಉದ್ಯೋಗ. ದೇಹ ಶ್ರಮವೆಂದರೆ ಕೂಲಿ ಕೆಲಸ, ಹೆಚ್ಚು ಧನಬಲವಿಲ್ಲದೇ ನಡೆಸಬಹುದಾದ ಕಮ್ಮಾರ, ಕುಂಬಾರ, ಬಡಗಿ ಮುಂತಾದ ಚಿಕ್ಕಪುಟ್ಟ ಶಿಲ್ಪೋದ್ಯೋಗ. ಈ ಮೂರು ವರ್ಗದ ಜನರು ಜಗತ್ತಿನ ಎಲ್ಲ ದೇಶಗಳಲ್ಲಿಯೂ ಇದ್ದಾರೆಂದು ಸಮಾಜಶಾಸ್ತ್ರಜ್ಞರು ಹೇಳುತ್ತಾರೆ. ಈ ವರ್ಗದವರು ತಮ್ಮ ತಮ್ಮ ವರ್ಗದವರಲ್ಲಿಯೇ ವಿವಾಹಾದಿ ಸಂಬಂಧಗಳನ್ನು ಬೆಳೆಸುತ್ತಾರೆಂದೂ ವಿಭಿನ್ನವರ್ಗಗಳ ಮಿಶ್ರಣವು ಅಲ್ಪಪ್ರಮಾಣದಲ್ಲಿಯೇ ಹೊರತು ಸಾರ್ವತ್ರಿಕ

ವಾಗಿಲ್ಲವೆಂದೂ ಹೇಳಿದ್ದಾರೆ. ಹೀಗೆ ಸ್ಥೂಲವಾಗಿ ಮೂರು ವರ್ಗಗಳು ಏರ್ಪಟ್ಟದ್ದು ವೃತ್ತಿನಿಮಿತ್ತವಾಗಿ, ಜಾತಿ ನಿಮಿತ್ತವಾಗಿ ಅಲ್ಲ ಎಂಬುದೇ ವಿಶೇಷ. ಭಾರತ ದೇಶದಲ್ಲಿ ಮಾತ್ರ ಜಾತಿಯು ತಲೆಯೆತ್ತಿತ್ತೆಂಬುದು ವಿಶೇಷ. ಇನ್ನೊಂದು ವಿಶೇಷವೇನೆಂದರೆ ಇತರ ದೇಶಗಳಲ್ಲಿ ವಿದ್ಯಾನಿಮಿತ್ತವಾಗಿ ಒಂದು ವರ್ಗವೇರ್ಪಡದೇ ಇರುವುದು. ಭಾರತದೇಶದಲ್ಲಿ ವಿದ್ಯಾನಿಮಿತ್ತವಾದ ಇನ್ನೊಂದು ವರ್ಗವೇರ್ಪಟ್ಟು ಬ್ರಾಹ್ಮಣ ಜಾತಿಯೆಂಬ ಹೆಸರನ್ನು ತಳೆಯಿತು.

ಬ್ರಾಹ್ಮಣನೆಂದರೆ ಶಬ್ದಾರ್ಥವೇನು ? ಈ ಶಬ್ದವು ಬ್ರಹ್ಮಶಬ್ದದಿಂದ ಹುಟ್ಟಿದ್ದು. ಬ್ರಹ್ಮ ಶಬ್ದಕ್ಕೆ ಹಲವಾರು ಅರ್ಥಗಳಿದ್ದರೂ ಮೂರು ಅರ್ಥಗಳನ್ನು ಬ್ರಾಹ್ಮಣ ಶಬ್ದ ನಿಷ್ಪತ್ತಿಗೆ ಇಟ್ಟುಕೊಳ್ಳಬಹುದು.

೧. ಬ್ರಹ್ಮವೆಂದರೆ ಪರಬ್ರಹ್ಮವಸ್ತು, ಪರಮಾತ್ಮ, ಈಶ್ವರ, ದೇವರು. ಯಾವಾತನು ಬ್ರಹ್ಮವನ್ನು ತಿಳಿದಿದ್ದಾನೋ, ತಿಳಿಯಲು ಪ್ರಯತ್ನಿಸುತ್ತಿದ್ದಾನೋ, ಅವನು ಬ್ರಾಹ್ಮಣ. ಬ್ರಹ್ಮ ಶಬ್ದಕ್ಕೆ ಬಹಳ ದೊಡ್ಡದು ಎಂದರ್ಥ. ಬ್ರಹ್ಮವು ಸರ್ವವ್ಯಾಪಿಯಾದ ವಿಭುವಾದ್ದರಿಂದಲೂ ದೊಡ್ಡದು. ಅರಿತುಕೊಳ್ಳುವುದು ಅತ್ಯಂತ ಕಠಿಣವಾದ್ದರಿಂದಲೂ ದೊಡ್ಡದು. ಈ ಕಾರಣಗಳಿಂದ ವೇದಕ್ಕೂ ಬ್ರಹ್ಮವೆಂಬ ಹೆಸರಿದೆ.

೨. ಬ್ರಹ್ಮವೆನಿಸಿದ ವೇದವನ್ನು ಅಧ್ಯಯನ ಮಾಡತಕ್ಕವನು, ವೇದಾರ್ಥವನ್ನು ತಿಳಿದವನು, ತಿಳಿಯುವ ಪ್ರಯತ್ನದಲ್ಲಿರತಕ್ಕವನು ಬ್ರಾಹ್ಮಣ.

೩. ಬ್ರಹ್ಮವೆಂದರೆ ಧರ್ಮವೆಂದು ಇನ್ನೊಂದು ಅರ್ಥ. ಬ್ರಹ್ಮವೆನಿಸಿದ ವೇದದಿಂದ ಪ್ರತಿಪಾದ್ಯವಾದ್ದರಿಂದಲೂ ಸ್ವರೂಪವು ದುರವಗಾಹವಾದ್ದರಿಂದಲೂ ಬ್ರಹ್ಮವೆಂದರೆ ಧರ್ಮ. ಯಾವಾತನು ವೇದಪ್ರತಿಪಾದ್ಯವಾದ ಧರ್ಮವನ್ನರಿತಿದ್ದಾನೋ ಧರ್ಮಮಾರ್ಗದಲ್ಲಿ ನಡೆಯುತ್ತಿದ್ದಾನೋ ಆತನು ಬ್ರಾಹ್ಮಣ.

ಈ ಮೂರು ಬಗೆಯ ಲಕ್ಷಣಗಳಿಗೂ ಅರ್ಹನಾದವನು ಬ್ರಾಹ್ಮಣ. ಇದೇನೋ ಸರಿ. ಇನ್ನೊಂದು ಗಹನವಾದ ಪ್ರಶ್ನೆಯನ್ನು ಎದುರಿಸಬೇಕಾಗಿದೆ. ಪ್ರಜಾವರ್ಗದಲ್ಲಿರುವ ಮನುಷ್ಯ ಸಾಮಾನ್ಯರಲ್ಲಿ ಕೆಲವರಿಗೆ ಮಾತ್ರ ವೇದವಿದ್ಯೆಯು ಲಭಿಸಿದ್ದು ಹೇಗೆ ? ಅವರಿಗೆ ಯಾರು ವೇದವಿದ್ಯೆಯನ್ನು ಕಲಿಸಿದರು? ಕಲಿಸಿದವರಿಗೆ ಅದು ಪ್ರಾಪ್ತವಾದದ್ದು ಹೇಗೆ ? ಈ ವಿಷಯವನ್ನು ಪಾಶ್ಚಾತ್ಯ ವಿದ್ವಾಂಸರಾಗಲೀ, ಭಾರತೀಯ ಪರಿಶೋಧಕ ವಿದ್ವಾಂಸರಾಗಲೀ ಚರ್ಚಿಸಿರುವುದು ಕಾಣುವುದಿಲ್ಲ. ಕೆಲವರ ಅಭಿಪ್ರಾಯವೇನೆಂದರೆ '' ಹಳ್ಳಿಗರು ಜನಪದ ಸಾಹಿತ್ಯವನ್ನು ರಚಿಸಿರುವಂತೆ ಪ್ರಾಚೀನಕಾಲದಲ್ಲಿ ಜನರು ವೇದಗಳನ್ನು ರಚಿಸಿದರು. ಅದನ್ನು ಮೆಚ್ಚಿದ ಸಮೀಪವರ್ತಿಗಳಾದ ಅನ್ಯರು

ಕಲಿತುಕೊಂಡರು. ಆ ಗಾಥೆಗಳನ್ನು ತಮ್ಮ ಆಪ್ತರಿಗೂ, ಸಂತತಿಯವರಿಗೂ ಹೇಳಿಕೊಡುತ್ತಾ ತಮ್ಮದೇ ಆದ ಒಂದು ವರ್ಗವನ್ನು ಕಲ್ಪಿಸಿಕೊಂಡರು. ಅವರೇ ತಮ್ಮನ್ನು ಹೆಗ್ಗಳಿಕೆಯಿಂದ ಬ್ರಾಹ್ಮಣರೆಂದು ಹೇಳಿಕೊಂಡು ಒಂದಾದರು. ಸಂಕುಚಿತ ದೃಷ್ಟಿಯಿಂದ ಇತರರಿಗೆ ಹೇಳಿಕೊಡಲಿಲ್ಲ.''

ನೀರಿನಲ್ಲಿ ಮುಳುಗುತ್ತಿದ್ದವನು ತೃಣಕಾಷ್ಠಾವಲಂಬನವನ್ನು ಮಾಡಿದಂತಿದೆ ಈ ಸಮಾಧಾನ. ಜನಪದ ಸಾಹಿತ್ಯವನ್ನು ಜ್ಞಾನರಾಶಿಯಾದ ವೇದದೊಡನೆ ಹೋಲಿಸಬಹುದೆ ? ಮಿಣಗುಟ್ಟುವ ಮೇಣದ ಬತ್ತಿಯನ್ನು ಪ್ರಖರ ಪ್ರಕಾಶದ ಸೂರ್ಯ ಮಂಡಲದೊಡನೆ ಹೋಲಿಸಬಹುದೆ? ಜನಪದ ಸಾಹಿತ್ಯ ತಮಗೆ ಹೇಳಿಕೊಡಲಿಲ್ಲ ಎಂಬ ಅಸೂಯೆಯ ಮಾತೇಕೆ ? ತಾವೂ ಜನಪದದಲ್ಲಿ ಸೇರಿದವರೇ ಅಲ್ಲವೆ? ಎಲ್ಲ ಜನಪದ ವರ್ಗದವರೂ ವೇದವೆಂಬ ಗಾಥೆಗಳನ್ನು ರಚಿಸಿ ಹಾಡಿಕೊಳ್ಳಬಹುದಿತ್ತು.

ಮೇಲ್ಕಂಡ ಪ್ರಶ್ನೆಗಳಿಗೆ ಸನಾತನಿಗಳೆಂಬ ಪಟ್ಟವನ್ನು ಕಟ್ಟಿಸಿಕೊಂಡಿರುವ ಪಂಡಿತರು ಹೇಳುವ ಸಮಾಧಾನವೇನೆಂದರೆ '' ಈ ಜಗತ್ತು ಅನಾದಿಯಾದದ್ದು. ವೇದ ಪ್ರಕಾಶನವೂ ಅನಾದಿ. ಆದಿಯೇ ಇಲ್ಲದಿರುವಾಗ ಆದಿಯನ್ನು ಹುಡುಕಿ '**ಇದಮಿತ್ಥಂ**' ಎಂದು ನಿರ್ಣಯಿಸುವುದು ಶಕ್ಯವಾದದ್ದಲ್ಲ. ಬಹುಶಃ ಹೀಗಿರಬಹುದು. ಈಶ್ವರನು ಕಶ್ಯಪಾದಿ ಮಹರ್ಷಿಗಳನ್ನು ಮಾನಸಪುತ್ರರನ್ನಾಗಿ ಸೃಷ್ಟಿಸಿ ತಪಸ್ಸನ್ನಾಚರಿಸುವಂತೆ ಪ್ರೇರಿಸಿರಬೇಕು. ಅವರ ತಪಸ್ಸಿಗೆ ಮೆಚ್ಚಿ ವೇದವು ಅವರಿಗೆ ಸ್ಫುರಿಸುವಂತೆ ಈಶ್ವರನು ಅನುಗ್ರಹಿಸಿದ್ದಾನೆ. ಈ ಕಶ್ಯಪಾದಿ ಮಹರ್ಷಿಗಳು ತಮಗೆ ಸ್ಫುರಿಸಿದ ವಿಭಿನ್ನ ಶ್ರುತಿಸೂಕ್ತಿಗಳನ್ನು ಲೋಕಹಿತಕ್ಕಾಗಿ ಜನರಿಗೆ ಬೋಧಿಸಿದರು. ಕೆಲವರು ಶ್ರದ್ಧೆಯಿಂದ ನಂಬಿಕೊಂಡು ಉಪದಿಷ್ಟವೇದವನ್ನು ಕಲಿತು ವೇದಬೋಧಿತವಾದ ಧರ್ಮ ಮಾರ್ಗದಲ್ಲಿಯೇ ನಡೆಯುತ್ತಾ ಹೋದರು. ಈಶ್ವರ ಪ್ರೇರಣೆಯಿಂದ ಲಭಿಸಿದ ವೇದವು ಪರಮಪವಿತ್ರವೆಂದು ನಂಬಿಕೊಂಡರು. ಈ ಜನರ ಸಮೂಹವೇ ಬ್ರಾಹ್ಮಣವರ್ಗವೆನಿಸಿತು.

ಇದು 'ಗೊಡ್ಡು ಬ್ರಾಹ್ಮಣ ಪಂಡಿತರು' ಹೇಳುವ ಸಮಾಧಾನವೆಂದೇ ಭಾವಿಸಿ ಆಚೆಗೆ ಇರಿಸಿಕೊಳ್ಳೋಣ. ಆದರೆ ಆಧುನಿಕ ವಿದ್ವಜ್ಜನರೆಲ್ಲರೂ ಮೆಚ್ಚುವ ಸಮೀಚೀನವಾದ ಇನ್ನೊಂದು ಸಮಾಧಾನವನ್ನು ಬುದ್ಧಿಜೀವಿಗಳು ಹೇಳುವುದಾದರೆ, ಈ ಗೊಡ್ಡು ಲೇಖಕನೂ ಕೃತಜ್ಞತೆಯಿಂದ ತಲೆಬಾಗಿ ಒಪ್ಪಿಕೊಳ್ಳುವನು.

''ಇದುವರೆಗೆ ವೈದಿಕಮತವನ್ನು ಹೊಗಳಿ ಧರ್ಮಶಾಸ್ತ್ರವನ್ನು ಅಟ್ಟಕ್ಕೇರಿಸಿದಿರಿ. ಈಗ ನಮ್ಮ ಹೇಳಿಕೆಯನ್ನು ಸ್ವಲ್ಪ ಕೇಳೋಣವಾಗಲಿ. ಮನುಷ್ಯರೆಲ್ಲರೂ ದೇವರ ಮಕ್ಕಳೇ

ಸರಿಯಷ್ಟೆ? '' **ಅಮೃತಸ್ಯ ಪುತ್ರಾಃ** '' ಎಂದು ನಿಮ್ಮ ವೇದವೇ ಘೋಷಿಸಿದೆ. ಮನುಷ್ಯರೆಲ್ಲರೂ ಈಶ್ವರನ ದೃಷ್ಟಿಯಲ್ಲಿ ಸಮಾನರು. ಹೀಗಿರುವಾಗ ಮನುಷ್ಯರನ್ನು ನಾಲ್ಕು ವರ್ಗವಾಗಿ ವಿಂಗಡಿಸಿದಿರಿ. ಇದರ ಮೂಲತತ್ತ್ವವನ್ನು ಒಪ್ಪಿಕೊಳ್ಳೋಣ. ಆದರೆ ಶೂದ್ರವರ್ಗವನ್ನು ಸಮಾಜದಲ್ಲಿ ಕೀಳುವರ್ಗವೆಂದು ತಳ್ಳಿಹಾಕಿದ್ದೇಕೆ ? ವೇದಾಧಿಕಾರವು ಶೂದ್ರನಿಗಿಲ್ಲವೆಂದು ಮನುಸ್ಮೃತಿ ಹೇಳಿತು. '' **ನ ಶೂದ್ರಾಯ ಮತಿಂ ದದ್ಯಾತ್** '' ಎಂದು ಘೋಷಿಸಿತು. ಶೂದ್ರನಿಗಿಂತ ಬ್ರಾಹ್ಮಣನು ಅಧಿಕವೆಂದೂ, ಶೂದ್ರನು ಸೇವೆಯನ್ನು ಮಾಡುವುದಕ್ಕೇ ಹುಟ್ಟಿದವನೆಂದೂ ಹೇಳಿತು. ಶೂದ್ರನು ಈಶ್ವರನ ಕಾಲಿನಿಂದ ಹುಟ್ಟಿದವನೆಂದು ಅವನನ್ನು ಕಾಲಿನ ಕಸವಾಗಿ ಭಾವಿಸಿತು. ಬ್ರಾಹ್ಮಣರು ಶೂದ್ರರನ್ನು ಅಜ್ಞಾನದ ಅಂಧಕಾರಕ್ಕೆ ತಳ್ಳಿ ಅವರು ಯಾವ ವಿಧದಲ್ಲೂ ಮೇಲಕ್ಕೆ ಏರದಂತೆ ತುಳಿಯುತ್ತಲೇ ಬಂದರು. ಜಗತ್ತಿನಲ್ಲಿ ಎಲ್ಲಿಯೂ ಇಲ್ಲದ ಜಾತಿಗಳನ್ನು ಸೃಷ್ಟಿಸಿ ಘೋರವಾದ ಪಕ್ಷಪಾತವನ್ನು ಈ ಬ್ರಾಹ್ಮಣರು ಧರ್ಮಶಾಸ್ತ್ರಗಳನ್ನು ಬರೆದು ಅನ್ಯಾಯ ಮಾಡಿದ್ದಾರೆ. ಯಾವ ವರ್ಗದಲ್ಲಿಯೋ ಹುಟ್ಟುವುದು, ಕೇವಲ ಜನ್ಮ ಮಾತ್ರದಿಂದಲೇ ಒಬ್ಬನು ಅಧಿಕ, ಇನ್ನೊಬ್ಬನು ನೀಚ ಎಂದು ಹೇಳುವುದು ನೀತಿಯೆ ? ಧರ್ಮವೆ ? ಪಕ್ಷಪಾತಗಳಿಂದ ತುಂಬಿಹೋದ ಧರ್ಮಶಾಸ್ತ್ರಗಳನ್ನು ನಾವು ಮಾನ್ಯ ಮಾಡಬಹುದೆ ? ವೀರಶೈವ, ಬೌದ್ಧ, ಜೈನ, ಕ್ರಿಶ್ಚಿಯನ್, ಮುಸ್ಲಿಂ ಮುಂತಾದ ಯಾವ ಮತಗಳಲ್ಲಿಯೂ ಇಲ್ಲದ ಈ ಅನಿಷ್ಟ ಜಾತಿ ಪದ್ಧತಿಯನ್ನು ತಂದು ಹಾಕಿರುವ ಈ ಹಿಂದೂ ಪದ್ಧತಿಯನ್ನು ಹೊಗಳುವುದಕ್ಕೆ ನಿಮಿತ್ತವೇ ಇಲ್ಲ. ಈ ಜಾತಿ ಪದ್ದತಿಯ ಭೂತವು ಹಿಂದೂ ಮತದಲ್ಲಿರುವುದರಿಂದಲೇ ಶೂದ್ರಾದಿಗಳು ಕ್ರಿಶ್ಚಿಯನ್ ಮುಂತಾದ ಮತಾಂತರಗಳಿಗೆ ಹೋಗಿ ಸೇರಿಕೊಳ್ಳುತ್ತಿದ್ದಾರೆ. ಶೂದ್ರರಲ್ಲಿಯೂ ಹರಿಜನರೆಂಬ ಇನ್ನೊಂದು ವರ್ಗವನ್ನು ಮಾಡಿ, ಅವರನ್ನು ಅಸ್ಪೃಶ್ಯರೆಂದು ಈ ಜನರು ತಳ್ಳಿಹಾಕಿದ್ದಾರೆ. ಪಶುಗಳನ್ನು ಮುಟ್ಟಬಹುದಂತೆ, ಈ ಮನುಷ್ಯರನ್ನು ಮುಟ್ಟಬಾರದು. ಈ ರೀತಿಯಾಗಿ ಸ್ವೇಚ್ಛಾಕಲ್ಪಿತ ನಿಯಮಗಳನ್ನು ಮಾಡಿರುವ ಮನುಸ್ಮೃತಿಯನ್ನು ಧರ್ಮಶಾಸ್ತ್ರವೆನ್ನಬಹುದೆ ? ಈ ಸವಾಲಿಗೆ ಉತ್ತರವೇನು?'' ಇದು ನಮ್ಮೆದುರಿಗಿರುವ ಒಂದು ವಾದ ಸರಣಿ.

ಪುರುಷಸೂಕ್ತದಲ್ಲಿ ಹೇಳಿರುವ ನುಡಿಯೇ ಹಿಂದೂಗಳಲ್ಲಿ ಜಾತಿವಿಭಾಗಕ್ಕೆ ಮುಖ್ಯ ಕಾರಣವಾಯಿತೆಂದೂ, ಈ ಜಾತಿ ವಿಭಾಗವು ಜನರಲ್ಲಿ ತಾರತಮ್ಯವನ್ನು ತಂದು ಮೇಲು ಜಾತಿ, ಕೆಳಜಾತಿ ಎಂಬ ಕಲ್ಪನೆಯಿಂದ ಜನರಲ್ಲಿ ಒಡಕನ್ನುಂಟು ಮಾಡಿದೆಯೆಂದೂ ಹೇಳುತ್ತ, ಮನುಸ್ಮೃತಿ ಮೊದಲಾದವು ಅದಕ್ಕೆ ಪೋಷಕವಾದವೆಂದು ಅದನ್ನು ಹಂಗಿಸುತ್ತ ಬುದ್ಧಿಜೀವಿಗಳೆಂಬ ಒಂದು ಗುಂಪು ಮೆರೆಯುತ್ತಿದೆಯಷ್ಟೆ.

ಈ ವಿಚಾರವಾಗಿ ಕೆಲವು ಮಾತುಗಳನ್ನಾಡಲು ಇದು ಒಂದು ಸನ್ನಿವೇಶವನ್ನು ಒದಗಿಸಿದೆ.

ಮೊದಲನೆಯದಾಗಿ, ಮೇಲು ಕೀಳು, ಹೆಚ್ಚು-ಕಡಿಮೆ, ಅಧಿಕ - ನ್ಯೂನ ಎಂಬ ತಾರತಮ್ಯವು ಈ ಜಗತ್ತಿನಲ್ಲಿ ಸರ್ವಜನಾಂಗಗಳಲ್ಲಿಯೂ ಸಾರ್ವತ್ರಿಕವಾಗಿ ಇರತಕ್ಕದ್ದೇ. ಅದಿಲ್ಲದೆ ಜಗದ್ವ್ಯವಹಾರವೇ ನಡೆಯಲಿಕ್ಕಿಲ್ಲ. ಯಾವ ನಿಮಿತ್ತದಿಂದ ಯಾವ ಅಂಶದಲ್ಲಿ ತಾರತಮ್ಯ ಎಂಬುದು ಗಮನಾರ್ಹವೇ ಹೊರತು ಸರ್ವದಾ ಸರ್ವಾಂಶಗಳಲ್ಲಿ ತಾರತಮ್ಯವಿದೆಯೆಂಬುದು ಒಪ್ಪತಕ್ಕದ್ದಲ್ಲ. ಹಾಗೆ ಇರಲು ಶಕ್ಯವೂ ಇಲ್ಲ. ಪ್ರತಿಯೊಂದು ಧರ್ಮವೂ, ಪ್ರತಿಯೊಂದು ಕಾನೂನೂ ತಾರತಮ್ಯದ ಮೇಲೆಯೇ ಪ್ರತಿಷ್ಠಿತವಾಗಿದೆ. ತಾರತಮ್ಯವನ್ನೊಪ್ಪದ ಮನುಷ್ಯ ಜಾತಿಯೇ ಇಲ್ಲ.

ಮನೆಗಳಲ್ಲಿ ತಾಯಿತಂದೆಗಳಿಗೆ ಗೌರವ. ಮಕ್ಕಳು ಅವರ ಅಧೀನ. ಶಾಲೆಗಳಲ್ಲಿ ಉಪಾಧ್ಯಾಯರಿಗೆ ಗೌರವ. ವಿದ್ಯಾರ್ಥಿಗಳು ಅವರಿಗೆ ವಿಧೇಯರು. ಅಣ್ಣತಮ್ಮಂದಿರಲ್ಲಿ ಅಣ್ಣನಿಗೆ ಅಗ್ರಸ್ಥಾನ. ರಾಮಾಯಣದಲ್ಲಿ ಶ್ರೀರಾಮನಿಗೂ, ಭಾರತದಲ್ಲಿ ಯುಧಿಷ್ಠಿರನಿಗೂ ತಮ್ಮಂದಿರು ವಿಧೇಯರಾಗಿ ನಡೆದುಕೊಂಡಿದ್ದಾರೆ. ಸಮಾಜದಲ್ಲಿ ವಯಸ್ಸಾದ ಹಿರಿಯರಿಗೆ ಮನ್ನಣೆ ಅಧಿಕ. ಸರಕಾರದಲ್ಲಿ ಪ್ರಧಾನನಿಗೆ ಮಂತ್ರಿ ಅಧೀನ. ಮಂತ್ರಿಗೆ ಅಧಿಕಾರಿಗಳೂ, ಅವರಿಗೆ ಗುಮಾಸ್ತರೂ, ಗುಮಾಸ್ತರಿಗೆ ಜವಾನರೂ ವಿಧೇಯಕರಾಗಿರಬೇಕಾಗಿದೆ. ಸಮಾಜವು ವಿದ್ವಾಂಸರಿಗೆ ಗೌರವ ಸಲ್ಲಿಸುತ್ತದೆ. ಸರಕಾರವು ಪ್ರಶಸ್ತಿಯನ್ನು ನೀಡುತ್ತದೆ. ಎಲ್ಲರಿಗೂ ಪ್ರಶಸ್ತಿಯನ್ನು ನೀಡುವುದಿಲ್ಲ. ನಿಸರ್ಗವೇ ತಾರತಮ್ಯವನ್ನು ಏರ್ಪಡಿಸಿದೆ. ಕೈಬೆರಳುಗಳು ಒಂದೇ ಅಳತೆಯಲ್ಲಿಲ್ಲ. ಹೆಬ್ಬೆರಳು ಅಡ್ಡಪಂಕ್ತಿಯಲ್ಲಿದೆ. ಒಂದೇ ಅಳತೆಯಲ್ಲಿ, ಒಂದೇ ಸಾಲಿನಲ್ಲಿ ಈ ಬೆರಳುಗಳಿದ್ದರೆ ಕೈಗೆ ಕೆಲಸ ಮಾಡಲಾದೀತೆ? ತಾರತಮ್ಯ ಪಕ್ಷಪಾತಗಳಿಲ್ಲದೇ ಹೆಬ್ಬೆರಳನ್ನು ಒಂದೇ ಸಾಲಿನಲ್ಲಿ ನಿರ್ಮಿಸಿದ್ದರೆ, ಚಾತುರ್ವರ್ಣ್ಯವನ್ನು ನಿಂದಿಸತಕ್ಕವರಿಗೆ ನಿಂದಾಪೂರ್ಣವಾದ ಉದ್ದುದ್ದ ಲೇಖನಗಳನ್ನು ಬರೆಯಲು ಸಾಧ್ಯವಿತ್ತೆ?

ಈ ಸೃಷ್ಟಿಯಲ್ಲಿಯೇ ಪಕ್ಷಪಾತವು ಅನಾದಿಯಾಗಿ ನಡೆದಿದೆ. ದೈಹಿಕಬಲದಲ್ಲಿ ಗಂಡುಜಾತಿ ಪ್ರಬಲ, ಹೆಣ್ಣುಜಾತಿ ದುರ್ಬಲ, ಗಂಡು ನವಿಲುಗಳ ರೆಕ್ಕೆ ಪುಕ್ಕಗಳು ಬಣ್ಣ ಬಣ್ಣಗಳಿಂದ ರಂಜಿತ. ಹೆಣ್ಣು ನವಿಲುಗಳಿಗೆ ಆ ಭಾಗ್ಯವಿಲ್ಲ. ಗಂಡಾನೆಗಳಿಗೆ ಕೋರೆ ದಂತಗಳಿವೆ. ಹೆಣ್ಣಾನೆಗಳಿಗಿಲ್ಲ. ತೇಗ, ಬೀಟೆ, ಮರಗಳಿಗೆ ಪರಿಮಳವಿಲ್ಲ. ಶ್ರೀಗಂಧದಲ್ಲಿ ಉಂಟು. ಮಲ್ಲಿಗೆ ಗುಲಾಬಿಗಳು ಸುಗಂಧಿ. ಕರವೀರ ದಾಸವಾಳಗಳು ನಿರ್ಗಂಧ. ಕೆಲವು ಹೂಗಳು ದುರ್ಗಂಧಿ. ಚಿನ್ನದ ಕಾಂತಿ ಬೆಳ್ಳಿಗಿಲ್ಲ. ಬೆಳ್ಳಿಯ ಕಾಂತಿ ತಾಮ್ರಕ್ಕಿಲ್ಲ. ತಾಮ್ರದ ಕಾಂತಿ ಕಬ್ಬಿಣಕ್ಕಿಲ್ಲ. ಆದ್ದರಿಂದ ಅವುಗಳ ಮೌಲ್ಯದಲ್ಲಿಯೂ ತಾರತಮ್ಯ ಉಂಟು. ಇದೆಲ್ಲವೂ ದೈವ ನಿರ್ಮಿತ. ಮನುಷ್ಯ ಕೃತವಲ್ಲ.

ಒಂದು ದೃಷ್ಟಿಯಿಂದ ಈ ವಿಭಾಗ, ಈ ತಾರತಮ್ಯ. ಇನ್ನೊಂದು ದೃಷ್ಟಿಯಿಂದ ಕಳಪೆಯ ವಸ್ತುವಿನಿಂದಲೇ ಹೆಚ್ಚು ಪ್ರಯೋಜನ. ಕಳಪೆಯ ವಸ್ತುವೇ ಅತ್ಯಾವಶ್ಯಕ. ಮನೆ ಕಟ್ಟುವವನಿಗೆ ತೇಗದ ಮರ ಅಥವಾ ಇನ್ನೊಂದು ಜಾತಿಯ ಮರ ಅವಶ್ಯಕ. ಅವನಿಗೆ ಶ್ರೀಗಂಧದ ಮರ ಬೇಕಿಲ್ಲ. ಕಳಪೆಯೆನಿಸಿದ ಕಬ್ಬಿಣವೇ ಚಾಕು, ಕತ್ತರಿ, ಮೊದಲಾದವನ್ನು ನಿರ್ಮಿಸುತ್ತದೆ. ಸಕಲ ಯಂತ್ರಗಳಿಗೂ ಕಬ್ಬಿಣ ಬೇಕು. ಚಿನ್ನ, ಬೆಳ್ಳಿಗಳಲ್ಲ. ಚಿನ್ನ, ಬೆಳ್ಳಿಗಳಿಲ್ಲದಿದ್ದರೂ ಈ ಜಗತ್ತು ನಡೆಯುತ್ತದೆ. ಕಬ್ಬಿಣವಿಲ್ಲದಿದ್ದರೆ ಮಾನವನ ಸಕಲ ವ್ಯವಹಾರಗಳೂ ನಿಂತು ಹೋದಾವು. ಆದ್ದರಿಂದ ತಾರತಮ್ಯ, ಪಕ್ಷಪಾತ ಎಂಬ ಮಾತು ಹುರುಳಿಲ್ಲದ್ದು. ಸರಿಯಾಗಿ ವಿಮರ್ಶಿಸಿ ನೋಡಿದಲ್ಲಿ ಬ್ರಾಹ್ಮಣನಿಗಿಂತ ಕ್ಷತ್ರಿಯನೂ, ಕ್ಷತ್ರಿಯನಿಗಿಂತ ವೈಶ್ಯನೂ, ವೈಶ್ಯನಿಗಿಂತ ಶೂದ್ರನೂ ಜಗದ್ವ್ಯವಹಾರದಲ್ಲಿ ಕ್ರಮವಾಗಿ ಅಧಿಕ ಪಾತ್ರವನ್ನು ವಹಿಸತಕ್ಕವರೆಂದು ನಿರ್ಣೀತವಾಗುತ್ತದೆ. ಒಂದು ವೇಳೆ ತಾರತಮ್ಯವೇ ಇಲ್ಲದೆ ಸರ್ವಸಮವಾದಲ್ಲಿ ಈ ಜಗತ್ತು ಗುರಿಯಿಲ್ಲದ, ನೆಲೆಯಿಲ್ಲದ, ಸ್ಥಿರವಲ್ಲದ ಶಾಂತಿ ಇಲ್ಲದ ವನ್ಯ ವ್ಯವಹಾರವಾಗಿ ಪರಿಣಮಿಸೀತು. ನಾನಾ ವಿಧದಲ್ಲಿ ಸೇವಾ ಕಾರ್ಯವನ್ನು ಮಾಡುವ ಬೇಸಾಯಗಾರರು, ಕಮ್ಮಾರರು, ಕುಂಬಾರರು, ನೇಯ್ಗೆಯವರು ಮುಂತಾದ ಕಾರ್ಮಿಕರು ಪ್ರಾಯೇಣ ಶೂದ್ರವರ್ಣದವರಾದರೂ ಅವರು ಮಾಡುವ ಸೇವಾಕಾರ್ಯವು ಅಮೂಲ್ಯವಾದದ್ದು. ಅವರ ಸೇವೆಯಿಲ್ಲವಾಗಿದ್ದರೆ ಸಮಾಜವು ಒಂದು ಹೆಜ್ಜೆ ಮುಂದೆ ಚಲಿಸಲಾರದು. ಲೋಕವ್ಯವಹಾರದಲ್ಲಿ ಶೂದ್ರವರ್ಗದವರ ಸೇವೆ ಗಣನೀಯವಾದದ್ದು. ಇದನ್ನು ಧರ್ಮಶಾಸ್ತ್ರವು ಲಕ್ಷ್ಯದಲ್ಲಿ ಇರಿಸಿಕೊಂಡಿದೆ.

ನಮ್ಮ ದೇಹದಲ್ಲಿಯೇ ನಾವೇ ತಾರತಮ್ಯ ಭಾವದಿಂದ ಉಚ್ಚ ನೀಚಗಳನ್ನು ಮಾಡಿಕೊಂಡಿದ್ದೇವೆ. ಬಲಗೈಗಿಂತ ಎಡಗೈ ಕೀಳು. ಎಡಗೈಯಿಂದ ಕೊಡಬಾರದು. ತೆಗೆದುಕೊಳ್ಳಬಾರದು. ಕೈಗಳಿಗಿಂತ ಕಾಲು ಕೀಳು. ಕೈಯಿಂದ ಸ್ನೇಹಿತರನ್ನು ಗುರುಹಿರಿಯರನ್ನು ಮುಟ್ಟಬಹುದು. ಕಾಲಿಂದ ಮುಟ್ಟಿದರೆ ಹೇಗೆ ? ಅನ್ನವನ್ನು ತಿಂದು ನೀರನ್ನು ಗುಟುಕರಿಸುವುದು ಮುಖ. ಮಲ ಮತ್ತು ನೀರನ್ನು ವಿಸರ್ಜಿಸುವ ಅಂಗಗಳನ್ನು ಮಾತ್ರ ಮುಚ್ಚಿಕೊಂಡಿರಬೇಕು. ಏಕೆ ಹೀಗೆ ? ಪಶುಗಳು ಸಹ ಇಂತಹ ಪಕ್ಷಪಾತವನ್ನು ಮಾಡುವುದಿಲ್ಲ!

ಪರಮಾತ್ಮನು 'ಬಹು ಸ್ಯಾಮ್' ಎಂದುಕೊಂಡು ಯಾವಾಗ ಬಹುವಾದನೋ ಆಗಲೇ ದ್ವೈತಪೂರ್ವಕವಾದ ತಾರತಮ್ಯವು ಅಂಕುರಿಸಿತು. ಪಂಚಭೂತಗಳಲ್ಲಿಯೇ ವಿಭಿನ್ನಗುಣಗಳನ್ನು ಯೋಜಿಸಿರುವ ಪಕ್ಷಪಾತವನ್ನು ಕಾಣಬಹುದು. ವಾಯುವಿನ ಗುಣ

ಅಗ್ನಿಗಿಲ್ಲ. ಅಗ್ನಿಯ ಗುಣ ಜಲಕ್ಕಿಲ್ಲ. ಚಂಡಮಾರುತಕ್ಕೆ ಬಲಿಯಾಗುವಂತೆ ಒರಿಸ್ಸಾ, ಬಿಹಾರ, ಬಂಗಾಳ ಮೊದಲಾದವುಗಳನ್ನು ನಿರ್ಮಿಸಿದವನು ಕರ್ನಾಟಕ, ಮಹಾರಾಷ್ಟ್ರ ಮೊದಲಾದ ದೇಶಗಳಿಗೆ ಚಂಡಮಾರುತ, ಸುಂಟರಗಾಳಿ ಇವುಗಳ ಬಾಧೆಯಾಗದಂತೆ ಪಕ್ಷಪಾತವೆಸಗಿದ್ದಾನೆ.

ಪುರುಷಸೂಕ್ತದಲ್ಲಿ ಜಾತಿಯ ಪ್ರಸ್ತಾವವಿರುವುದರಿಂದ ಇದು ಅರ್ವಾಚೀನವೆನ್ನುವುದೂ ಯಾರೋ ಈ ನಾಲ್ಕು ವಾಕ್ಯಗಳನ್ನು ಹೊಸದಾಗಿ ತುರುಕಿದರು ಎಂದು ಹೇಳುವುದೂ ಆಧಾರವಿಲ್ಲದ್ದು. ವೇದದಲ್ಲಿ ಇದು ಪ್ರಾಚೀನ, ಇದು ನವೀನ ಎಂದು ವಿಭಾಗ ಮಾಡುವುದೇ ಯುಕ್ತವಲ್ಲ. ಅದನ್ನಿಲ್ಲಿ ಬೆಳೆಸುವುದು ಅಪ್ರಸ್ತುತ. ಬ್ರಾಹ್ಮಣಾದಿ ಚಾತುರ್ವರ್ಣ್ಯದ ಸೂಚನೆ ವೇದದಲ್ಲಿ ಅನೇಕ ಕಡೆ ಬಂದಿದೆ. ಉಪನಿಷತ್ತುಗಳಲ್ಲಿಯೂ ಇದರ ಪ್ರಸ್ತುತಿ ಇದೆ. ವೇದಕಾಲದಲ್ಲಿ ಜಾತಿ ಪದ್ಧತಿ ಇರಲಿಲ್ಲ ಎನ್ನುವುದು ಸಹ ಭ್ರಾಂತಿಯಿಂದಲೇ. ಮೊದಲನೆಯದಾಗಿ ನಾವು ಈ ವಿಚಾರವನ್ನು ಹಿಂದೆ ವಿವೇಚನೆ ಮಾಡಿದ್ದೇವೆ. ಸಾಂಪ್ರದಾಯಿಕರ ಪ್ರಕಾರ ಅಪೌರುಷೇಯವಾದ ವೇದದ ಕಾಲ ಎನ್ನುವುದೇ ಹೊಂದುವುದಿಲ್ಲ. ಗುಣಕರ್ಮಗಳನ್ನು ಮಾತ್ರ ಅವಲಂಬಿಸಿಕೊಂಡು ಈ ಹೆಸರುಗಳಿದ್ದವೆಂದೂ ಜನ್ಮವು ಇದಕ್ಕೆ ಕಾರಣವಲ್ಲವೆಂದೂ ವಾದಿಸುವುದೂ ಪ್ರಮಾಣರಹಿತವೇ.

'' **ವಿದ್ಯಾತಪಶ್ಚ ಯೋನಿಶ್ಚ ತ್ರಯಂ ಬ್ರಾಹ್ಮಣ ಕಾರಣಮ್** '' ಇತ್ಯಾದಿ ಪ್ರಾಚೀನ ವಾಕ್ಯಗಳಲ್ಲಿ ' ಯೋನಿ (ಜನ್ಮ)'ಯೂ ಸೇರಿ ಬ್ರಾಹ್ಮಣಕ್ಕೆ ನಿಮಿತ್ತ ಎಂದು ಹೇಳಿದ ಸಾವಿರಾರು ವಾಕ್ಯಗಳನ್ನು ಇಲ್ಲಿ ಉದಾಹರಿಸಬಹುದು. ಅಲ್ಲದೆ ವೇದಕಾಲದಲ್ಲಿ ಈ ವ್ಯವಸ್ಥೆ ಇರಲಿಲ್ಲವೆಂದು ವಾದಿಸುವುದರಿಂದ ಪ್ರಯೋಜನವೂ ಇಲ್ಲ. ಅನಂತರವೇ ಈ ವ್ಯವಸ್ಥೆ ಹುಟ್ಟಿದೆಯೆಂದೂ ' **ತುಷ್ಯತು ದುರ್ಜನಂ** ' ಎಂಬ ನ್ಯಾಯದಿಂದ ಒಪ್ಪಿದರೂ ಈ ವ್ಯವಸ್ಥೆ ದುಷ್ಟವಾದದ್ದೆಂದು ಸಿದ್ಧವಾಗುವುದಿಲ್ಲ.

ಭಗವದ್ಗೀತೆಯಲ್ಲಿ ಹೇಳಿರುವ ಶ್ಲೋಕದ ಅರ್ಥವೇನೆಂದು ಮೊದಲು ವಿಚಾರ ಮಾಡೋಣ. ಅದನ್ನು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ.

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥** (೪.೧೩)

'' ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳ ವ್ಯವಸ್ಥೆಯನ್ನು ಗುಣ ಮತ್ತು ಕರ್ಮಗಳ ವಿಭಾಗಾನುಸಾರವಾಗಿ (ಈಶ್ವರನಾದ) ನಾನು ಸೃಷ್ಟಿಸಿದ್ದೇನೆ. ಈ ಸೃಷ್ಟಿಗೆ ನಾನು (ಮಾಯಾ ಸಂಬಂಧದಿಂದ ) ಕರ್ತೃವಾದರೂ ಪರಮಾರ್ಥದಲ್ಲಿ ಕರ್ತೃವಲ್ಲವೆಂದೇ ತಿಳಿ.

ಇಲ್ಲಿ ಶ್ಲೋಕದ ದ್ವಿತೀಯಾರ್ಧವು ವೇದಾಂತಕ್ಕೆ ಮಾತ್ರ ಸಂಬಂಧಿಸಿದ್ದು. ಪ್ರಥಮಾರ್ಧವು ಈಗ ನಮ್ಮ ವಿಚಾರಕ್ಕೆ ಸೇರಿದ್ದು. ಗುಣಕರ್ಮವಿಭಾಗ ಹೇಗೆಂದರೆ -

**ಬ್ರಾಹ್ಮಣ** - ಸತ್ತ್ವಗುಣವು ಪ್ರಧಾನ. ರಜಸ್ತಮೋಗುಣಗಳು ಅಲ್ಪಪ್ರಮಾಣದಲ್ಲಿರುತ್ತವೆ ಶಮ, ದಮ, ತಪಸ್ಸು, ಮೊದಲಾದವುಗಳ ಸಾಧನೆ, ಅಧ್ಯಯನ,ಅಧ್ಯಾಪನ, ಯಾಜನ, ದಾನ, ಪ್ರತಿಗ್ರಹ ಇವು ಆರು ಕರ್ಮಗಳು. ಇವುಗಳಲ್ಲಿ ಅಧ್ಯಾಪನ, ಯಾಜನ, ಪ್ರತಿಗ್ರಹ ಇವು ಮೂರು ಜೀವಿಕೆಗಾಗಿ ಮಾಡುವ ಕರ್ಮಗಳು.

**ಕ್ಷತ್ರಿಯ** - ರಜೋಗುಣವು ಪ್ರಧಾನ. ಸತ್ತ್ವ, ತಮೋಗುಣಗಳು ಅಲ್ಪಪ್ರಮಾಣದಲ್ಲಿರುತ್ತವೆ. ಶೌರ್ಯ, ತೇಜಸ್ಸು ಮೊದಲಾದವುಗಳ ವರ್ಧನೆ. ರಾಜ್ಯಪಾಲನೆ ವೃತ್ತಿ. ರಾಜನ ಸೈನಿಕರೂ ರಾಜಭಟರೂ ಬಹುಶಃ ಕ್ಷತ್ರಿಯರಾಗಿಬೇಕೆಂದು ತೋರುತ್ತದೆ.

**ವೈಶ್ಯ** - ರಜೋಗುಣವು ಪ್ರಧಾನ. ತಮೋಗುಣವು ಎರಡನೆಯದು. ಸತ್ತ್ವಗುಣವು ಅತ್ಯಲ್ಪ. ಸತ್ತ್ವರಜೋಗುಣಗಳು ಅತ್ಯಲ್ಪ ಪ್ರಮಾಣದಲ್ಲಿರುತ್ತವೆ. ಕೃಷಿ, ಪಶುಪಾಲನೆ, ವಾಣಿಜ್ಯ ಇವು ಕರ್ಮಗಳು. ಕೃಷಿ ಎಂದರೆ ಬಹುಶಃ ಜಮೀನ್ದಾರನಾಗಿರುವುದು. ಪಶು ಪಾಲನೆಯೆಂದರೆ ಗೋವು, ಎಮ್ಮೆ , ಕುರಿ ಮೊದಲಾದವನ್ನು ದೊಡ್ಡ ಪ್ರಮಾಣದಲ್ಲಿ ಸಾಕುವುದು. ( ಕೃಷಿಯಲ್ಲಿ ದೈಹಿಕವಾದ ಕ್ರಿಯೆಯನ್ನು ಶೂದ್ರರಿಂದ ಮಾಡಿಸುತ್ತಿರಬಹುದು)

ಕೃಷಿ, ಪಶುಪಾಲನೆಗಳಿಂದ ಬರುವ ಧಾನ್ಯ, ಹಾಲು, ಮೊದಲಾದ ವಸ್ತುಗಳ ಮಾರಾಟವೇ ವೈಶ್ಯನ ಕರ್ಮವಾಗಿರಬಹುದು.

**ಶೂದ್ರ** - ತಮೋಗುಣವು ಪ್ರಧಾನ. ಎರಡನೆಯದು ರಜೋಗುಣ. ಸತ್ತ್ವಗುಣವು ಅತ್ಯಲ್ಪ. ಸೇವೆ ಮುಖ್ಯವೃತ್ತಿ. ಸೇವೆಯು ನಾನಾ ವಿಧ. ಬ್ರಾಹ್ಮಣಾದಿಗಳ ( ಅರ್ಥಾತ್ ಜ್ಞಾನಿಗಳ, ಸಾಧಕರ ) ಸಾಕ್ಷಾತ್ ಸೇವೆ ಒಂದು. ಅನಂತರ ವಿವಿಧ ವೃತ್ತಿಗಳು. ಕಬ್ಬಿಣದ ಕೆಲಸ, ಮಣ್ಣಿನಿಂದ ಗಡಿಗೆ ಮೊದಲಾದವುಗಳನ್ನು ಮಾಡುವುದು, ಬಡಗಿಯ ಕೆಲಸ, ವಿವಿಧ ಶಿಲ್ಪಗಳು, ಎಲ್ಲ ಬಗೆಯ ಕಸುಬುಗಳು ಈ ವೃತ್ತಿಯೇ ಅನುವಂಶಿಕವಾಗಿ ಬಂದು ಕಮ್ಮಾರ, ಕುಂಬಾರ, ಬಡಗಿ, ನಾಪಿತ ಮೊದಲಾದ ವಿವಿಧ ಜಾತಿ ಭೇದಗಳಾದವು.

ಭಗವದ್ಗೀತೆಯಲ್ಲಿ ಹಿಂದಿನ ಶ್ಲೋಕಗಳಲ್ಲಿರುವ ' **ಮಾನುಷೇ ಲೋಕೇ** ' ಈ ಶ್ಲೋಕಕ್ಕೆ ಅನುವರ್ತಿಸಿಕೊಳ್ಳಬೇಕು. ಮನುಷ್ಯರ ಈ ಲೋಕದಲ್ಲಿ ಮಾತ್ರ

ಈ ವರ್ಣವ್ಯವಸ್ಥೆ. ಇತರ ಲೋಕಗಳಲ್ಲಿಲ್ಲ ಎಂದು ಶ್ರೀ ಶಂಕರಾಚಾರ್ಯರು ಬರೆದಿದ್ದಾರೆ. ಈ ಮನುಷ್ಯ ಲೋಕವು ಮಾತ್ರ ಕರ್ಮಭೂಮಿ. ಉಳಿದವು ಭೋಗಭೂಮಿಗಳು. ಎಂದರೆ ಕರ್ಮಭೂಮಿಯು ಸಾಧನಕ್ಷೇತ್ರ. ಪಾಪಪುಣ್ಯಗಳ ವ್ಯವಸ್ಥೆ ಇಲ್ಲಿದೆ. ತನ್ನ ಶ್ರೇಯಸ್ಸಿಗಾಗಿ ಕರ್ಮವನ್ನು ಮಾಡಬೇಕಾದದ್ದು ಈ ಲೋಕದಲ್ಲಿ. ಮೋಕ್ಷವನ್ನು ಸಹ ಇಲ್ಲಿ ಪಡೆದುಕೊಳ್ಳಲು ಶಕ್ಯವಿದೆ. ಉಳಿದ ಲೋಕಗಳು ಸಾಧ್ಯಕ್ಷೇತ್ರ. ಅಲ್ಲಿ ಪಾಪಪುಣ್ಯಗಳ ಫಲಭೋಗವು ಮಾತ್ರ. ಪುಣ್ಯದ ಫಲ ಸುಖವನ್ನೋ, ಪಾಪದ ಫಲ ದುಃಖವನ್ನೋ ಅನುಭವಿಸಿ '**ಕ್ಷೀಣೇ ಪುಣ್ಯೇ ಮರ್ತ್ಯಲೋಕಂವಿಶಂತಿ**' ಎಂಬ ಉಕ್ತಿಯಂತೆ, ಪುನಃ ಈ ಮನುಷ್ಯ ಲೋಕಕ್ಕೆ ಬರಬೇಕಾಗುವುದೆಂದು ಶಾಸ್ತ್ರವು ಹೇಳುತ್ತದೆ. ಅವೆಲ್ಲವೂ ಭೋಗಭೂಮಿಗಳು. ಕರ್ಮಫಲದ ಭೋಗವು ಮಾತ್ರ ಅಲ್ಲಿ ಪ್ರಸಕ್ತವಾಗುತ್ತದೆ. ಆ ಲೋಕದಲ್ಲಿದ್ದೂ ಹೊಸದಾಗಿ ಯಾವುದನ್ನೂ ಸಾಧಿಸಲಾಗುವುದಿಲ್ಲ. ಒಂದು ವಿಧದಲ್ಲಿ ಭೋಗಭೂಮಿಯು ಕೇವಲ ಕಾರಾಗೃಹವೆನ್ನಬಹುದು. ಸ್ವತಂತ್ರವಾಗಿ ಅಲ್ಲಿ ಏನನ್ನೂ ಮಾಡುವಂತಿಲ್ಲ. ಮನುಷ್ಯಲೋಕದಲ್ಲಿಯೂ ಸಹ ಭರತಖಂಡದಲ್ಲಿ ಮಾತ್ರ ವೇದೋಕ್ತವಾದ ಕರ್ಮಾಧಿಕಾರ ಉಂಟು. ಇತರ ದೇಶಗಳಲ್ಲಿಲ್ಲ. ವಿಷ್ಣುಪುರಾಣದ ಈ ಉಕ್ತಿಗಳನ್ನು ಗಮನಿಸಬೇಕು.

**೧. ಉತ್ತರಂ ಯತ್ ಸಮುದ್ರಸ್ಯ ಹಿಮಾದ್ರೇಶ್ಚೈವ ದಕ್ಷಿಣಮ್ ।**
**ವರ್ಷಂ ತದ್ ಭಾರತಂ ನಾಮ ಭಾರತೀಯತ್ರ ಸಂತತಿಃ ॥** (ಪ್ರಥಮಾಂಶ ೩-೧)

ಸಮುದ್ರಕ್ಕೆ ಉತ್ತರದಲ್ಲಿ ಮತ್ತು ಹಿಮಾಲಯದ ದಕ್ಷಿಣದಲ್ಲಿ ಇರತಕ್ಕ ದೇಶಕ್ಕೆ ಭಾರತವರ್ಷವೆಂದು ಹೆಸರು. ಭರತನ ಸಂತತಿ ಇಲ್ಲಿ ನೆಲೆಸಿದೆ.

**೨. ನ ಖಲ್ವನ್ಯತ್ರ ಮರ್ತ್ಯಾನಾಂ ಕರ್ಮ ಭೂಮೌ ವಿಧೀಯತೇ ॥**
(ಪ್ರಥಮಾಂಶ ೩ -೫)

ಭೂಲೋಕದಲ್ಲಿ ಭಾರತವರ್ಷವನ್ನು ಬಿಟ್ಟು ಇನ್ನೆಲ್ಲಿಯೂ (ಶಾಸ್ತ್ರೋಕ್ತವಾದ) ಕರ್ಮವು ವಿಹಿತವಾಗಿಲ್ಲ.

**೩. ಗಾಯಂತಿ ದೇವಾಃ ಕಿಲ ಗೀತಕಾನಿ**
**ಧನ್ಯಾಸ್ತು ತೇ ಭಾರತಭೂಮಿಭಾಗೇ ।**
**ಸ್ವರ್ಗಾಪವರ್ಗಾಸ್ಪದ ಮಾರ್ಗಭೂತೇ**
**ಭವಂತಿ ಭೂಯಃ ಪುರುಷಾಃ ಸುರತ್ವಾತ್ ॥**

ದೇವತೆಗಳು ತಮ್ಮಲ್ಲಿ ಹೀಗೆ ಹಾಡಿಕೊಳ್ಳುತ್ತಾರೆ. "ಆಹಾ ! ಭರತಖಂಡದಲ್ಲಿ ಹುಟ್ಟತಕ್ಕ ಜನರೇ ಧನ್ಯರು. ದೇವತೆಗಳಿಗಿಂತ ಇಲ್ಲಿಯ ಜನರೇ ಉತ್ತಮ ! ಸ್ವರ್ಗ ಮತ್ತು

ಮೋಕ್ಷಗಳಿಗೆ ಯೋಗ್ಯವಾದ ಮಾರ್ಗವನ್ನು ತೋರಿಸತಕ್ಕ ಕರ್ಮಭೂಮಿ ಅದು.

ಭಾರತೀಯರಿಗೆ ತಮ್ಮ ಮಾತೃಭೂಮಿಯಲ್ಲಿ ಎಷ್ಟು ಪ್ರೀತಿ, ಗೌರವಗಳಿದ್ದವೆಂಬುದಕ್ಕೆ ಈ ಶ್ಲೋಕಗಳು ಸಾಕ್ಷಿಯಾಗಿವೆ. ಒಟ್ಟಿನಲ್ಲಿ ಇದು ಕರ್ಮಭೂಮಿಯಾದ್ದರಿಂದ ಕರ್ಮವಿಭಾಗವನ್ನು ಮಾಡಿ ಚಾತುರ್ವರ್ಣ್ಯವನ್ನು ಇಲ್ಲಿ ಪ್ರತಿಷ್ಠಾಪಿಸಲಾಯಿತೆಂದು ಗೊತ್ತಾಗುತ್ತದೆ. ಇತರ ದೇಶಗಳಲ್ಲಿಲ್ಲದ ಜಾತಿಪದ್ಧತಿ ಈ ದೇಶದಲ್ಲೇಕೆಂಬ ಪ್ರಶ್ನೆಗೂ ಇಲ್ಲಿ ಉತ್ತರ ದೊರೆಯುತ್ತದೆ.

ಭಗವಂತನು ''**ಚಾತುರ್ವರ್ಣ್ಯಂ ಮಯಾ ಸೃಷ್ಟಂ**'' ಎಂದು ಹೇಳಿದ್ದಾನಷ್ಟೇ. ವ್ಯಾಸರೇ ಈ ಮಾತನ್ನು ತಮ್ಮ ಕೈಯಿಂದ ಸೇರಿಸಿ ಹೇಳಿರಬಹುದೆಂದು ವಾದಿಸತಕ್ಕವರೂ ಇದ್ದಾರು. ಹೇಗಿದ್ದರೂ ಈ ಗೀತಾವಾಕ್ಯದಿಂದ ಕೆಲವು ಅಂಶಗಳು ದೃಢಪಡುತ್ತವೆ-

೧. ಮಹಾಭಾರತಕ್ಕೂ ಹಿಂದಿನಿಂದ ಈ ವ್ಯವಸ್ಥೆ ಇತ್ತು.

೨. ಇದು ಶ್ರೀಕೃಷ್ಣ, ಅರ್ಜುನ ಮೊದಲಾದ ಮಹಾವ್ಯಕ್ತಿಗಳಿಂದಲೂ ಪರಿಗೃಹೀತವಾಗಿತ್ತು.

೩. '**ಸ್ವಧರ್ಮೇ ನಿಧನಂ ಶ್ರೇಯಃ**' ಅರ್ಜುನನು ಕ್ಷತ್ರಿಯನಾದ್ದರಿಂದ ಯುದ್ಧಮಾಡಿ ದುಷ್ಟರನ್ನು ದಂಡಿಸುವುದು ಸ್ವಧರ್ಮ. ಶಮದಮಾದಿಗಳನ್ನು ಆಶ್ರಯಿಸಿ ಅರಣ್ಯಕ್ಕೆ ಹೋಗುವುದಾಗಲಿ, ಸನ್ಯಾಸವನ್ನು ಸ್ವೀಕರಿಸುವುದಾಗಲಿ ಅವನಿಗೆ ಪರಧರ್ಮ. ಆದ್ದರಿಂದ ಭಯಾವಹ.

೪. ಉಪನಿಷತ್ತುಗಳ ಸಾರವಾದ ಗೀತೆಯೆಂಬ ದಾರ್ಶನಿಕ ಗ್ರಂಥದಲ್ಲಿ ತತ್ತ್ವಬೋಧನೆಗೆ ಪ್ರವೃತ್ತನಾದ ಶ್ರೀಕೃಷ್ಣನು ಈ ಚಾತುರ್ವರ್ಣ್ಯದ ವಿಚಾರವನ್ನು ಎತ್ತಿದ್ದರಿಂದ ಇದು ವೈಯಕ್ತಿಕವಾದ ಮತಕ್ಕೆ ಸಂಬಂಧಿಸಿದ್ದಲ್ಲ. ಅತಿ ವಿಶಾಲವಾದ ಸಾರ್ವಜನಿಕ ಹಿತಕ್ಕೆ ಸಂಬಂಧಿಸಿದ ಒಂದು ತಾತ್ತ್ವಿಕವಾದ ವ್ಯವಸ್ಥೆ ಇತ್ಯಾದಿ.

ಆನೆಗೆ ನಾಲ್ಕು ಪಾದಗಳಿದ್ದಂತೆ, ಒಂದು ಸಮಾಜಕ್ಕೆ, ಒಂದು ರಾಷ್ಟ್ರಕ್ಕೆ ಬ್ರಾಹ್ಮಣಾದಿ ನಾಲ್ಕು ವರ್ಣಗಳು. ಆನೆಯ ಗಾತ್ರಕ್ಕೆ ತಕ್ಕಂತೆ ಪಾದಗಳೂ ಗಟ್ಟಿಮುಟ್ಟಾಗಿ ಆರೋಗ್ಯಸಂಪನ್ನಗಳಾಗಿದ್ದರೆ ಮಾತ್ರ ಆನೆಯು ಎದ್ದು ಸಂಚರಿಸೀತು. ಒಂದು ಪಾದವು ದೃಢವಾಗಿಲ್ಲದಿದ್ದರೂ, ಒಂದು ಚಿಕ್ಕ ಮುಳ್ಳು ಚುಚ್ಚಿದ್ದರೂ ಆನೆಯು ಕುಂಟುತ್ತದೆ. ಈ ಪಾದಗಳಲ್ಲಿ ಉಚ್ಚ ನೀಚ ಭಾವಗಳೇನೂ ಇಲ್ಲ. ಸಂಚಾರದ ದೃಷ್ಟಿಯಿಂದ ನಾಲ್ಕು ಪಾದಗಳೂ ಸಮಾನವಾದವು. ಆದರೆ ಎರಡು ಪಾದಗಳು ಮುಂದೆ, ಎರಡು ಪಾದಗಳು ಹಿಂದೆ ಇರಬೇಕಾದದ್ದು ಅನಿವಾರ್ಯ. ಎಡ ಬಲ ಎಂಬುದೂ ಸ್ವತಃಸ್ಸಿದ್ಧ. ನಾಲ್ಕೂ ಪಾದಗಳು ಒಂದೇ ಸಾಲಿನಲ್ಲಿರುವುದಾದರೆ ಸಂಚರಿಸುವುದಿರಲಿ, ನಿಂತುಕೊಳ್ಳಲೂ

ಆನೆಗೆ ಸಾಧ್ಯವಾಗದು. ಗಜದೇಹದ ಸಮತೋಲನಕ್ಕಾಗಿ ನಾಲ್ಕೂ ಪಾದಗಳು ಮುಂದೆ, ಹಿಂದೆ, ಎಡಬಲಗಳಲ್ಲಿ ವ್ಯವಸ್ಥಿತವಾಗಿರಬೇಕು. ಅಂತೆಯೇ ರಾಷ್ಟ್ರದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೂ ತಮಗೆ ವ್ಯವಸ್ಥಿತವಾದ ಸ್ಥಾನಗಳಲ್ಲಿ ನಿಂತು ಸ್ವಧರ್ಮದಲ್ಲಿ ನಿರತರಾಗಿದ್ದರೆ ರಾಷ್ಟ್ರದಲ್ಲಿ ಸಮತೋಲನವಿದ್ದು ನೆಮ್ಮದಿ ಇರುತ್ತದೆ.

ಮನುಷ್ಯನು ಆರೋಗ್ಯದಿಂದ ನೆಮ್ಮದಿಯಾಗಿರಲು ಆಹಾರ, ವಿಹಾರಗಳ ಗುಣದೋಷ ಜ್ಞಾನವೂ ಸ್ವತಃ ಸಿದ್ಧವಾದ ರೋಗನಿರೋಧಕ ಶಕ್ತಿಯೊಡನೆ ಔಷಧಗಳ ನೆರವೂ ಆವಶ್ಯಕ. ಒಂದು ಜ್ಞಾನ, ಇನ್ನೊಂದು ಬಲ. ಮನುಷ್ಯನು ಸೌಖ್ಯದಿಂದಿರಲು ಈ ಜ್ಞಾನಬಲಗಳು ಮುಖ್ಯವಾದವು. ಹಾಗೆಯೇ ರಾಷ್ಟ್ರದ ನೆಮ್ಮದಿಗೆ ಜ್ಞಾನದ ಪ್ರತಿನಿಧಿಯಾಗಿ ಬ್ರಾಹ್ಮಣನೂ ಬಲದ ಪ್ರತಿನಿಧಿಯಾಗಿ ಕ್ಷತ್ರಿಯನೂ ಮುಂದೆ ನಿಲ್ಲಬೇಕಾದವರು, ಮುಂಚೂಣಿಯಲ್ಲಿರತಕ್ಕವರು.

'' ಬ್ರಾಹ್ಮಣ್ಯವನ್ನೂ , ಕ್ಷತ್ರಿಯ ಧರ್ಮವನ್ನೂ ಸರಿಯಾಗಿ ಪಾಲಿಸಿಕೊಂಡಿದ್ದರೆ, ಬ್ರಾಹ್ಮಣ ಕ್ಷತ್ರಿಯರು ಜಗತ್ತನ್ನೇ ಸಂರಕ್ಷಿಸಲು ಸಮರ್ಥರಾಗುತ್ತಾರೆ ಎಂದು ಶ್ರೀ ಶಂಕರಾಚಾರ್ಯರು ಗೀತಾಭಾಷ್ಯದಲ್ಲಿ ಹೇಳಿದ್ದಾರೆ. (ಗೀತಾ ೪-೧). ಈ ಎರಡು ಜಾತಿಗಳು ಅಂತರಂಗಬಲವಾದ ಬುದ್ಧಿಶಕ್ತಿಯನ್ನೂ, ಬಹಿರಂಗಶಕ್ತಿಯಾದ ದೇಹಬಲ, ಸೇನಾಬಲಗಳನ್ನೂ ಪ್ರತಿನಿಧಿಸುತ್ತವೆ. ಒಂದು ರಾಷ್ಟ್ರದ ರಕ್ಷಣೆಯಿರಲಿ, ಜಗತ್ತನ್ನೇ ರಕ್ಷಿಸಲು ಇವರು ಸಮರ್ಥರೆಂದು ಆಚಾರ್ಯರು ಹೇಳಿರುವುದು ಅರ್ಥಯುತವಾದದ್ದು. ಎರಡು ರಾಜ್ಯಗಳಿಗೆ ಯುದ್ಧ ನಡೆಯಲು ಅಜ್ಞಾನವೇ ಮೂಲ ಕಾರಣ. ಅಜ್ಞಾನ ಜನ್ಯವಾದ ರಾಗ-ದ್ವೇಷಗಳೂ ಅಸೂಯೆ, ಅತ್ಯಾಸೆಗಳೂ ಯುದ್ಧದ ಅನರ್ಥಗಳಿಗೆ ಕಾರಣಗಳಾಗಿ ನಿಲ್ಲುತ್ತವೆ. ಅಜ್ಞಾನದ ನಿವಾರಣೆ, ವಿವೇಕಜ್ಞಾನದಿಂದಲೇ ಆಗಬೇಕು., ಶ್ರೇಷ್ಠರಾದ ಜ್ಞಾನೋಪದೇಶಕರಿಂದ ಎಷ್ಟೋ ಜಗಳಗಳೂ, ಹೊಡೆದಾಟ , ಯುದ್ಧಗಳೂ ನಿಂತು ಹೋಗುತ್ತವೆ. ಅವು ನಿಲ್ಲದಾಗ ಬಲ ಪ್ರಯೋಗವು ಅನಿವಾರ್ಯವಾಗುತ್ತದೆ. ಆಗಲೇ ಕ್ಷತ್ರಿಯ ಧರ್ಮದ ಪ್ರವೇಶ. ದಂಡನೀತಿಯ ಪ್ರಸಕ್ತಿ. ಕಾರ್ಯಸಿದ್ಧಿಗೆ ಬಳಸಬೇಕಾದ ಚತುರುಪಾಯಗಳಲ್ಲಿ ಮೊದಲನೆಯದು ಜ್ಞಾನಗಮ್ಯವಾದ ಸಾಮ. ಸಾಮವು ಫಲಿಸದಾಗ ದಂಡ. ಈ ಸಾಮ, ದಂಡಗಳೆರಡೇ ಪ್ರಧಾನವಾದ ಉಪಾಯಗಳು. ಆದ್ದರಿಂದಲೇ ಹಿಂದೆ ಹೇಳಿದಂತೆ ಗೀತಾಭಾಷ್ಯದಲ್ಲಿ **'' ಬ್ರಹ್ಮಕ್ಷತ್ರೇ ಹಿ ಪರಿಪಾಲಿತೇ ಜಗತ್ ಪರಿಪಾಲಯಿತು ಮಲಂ''** ಎಂದು ಶ್ರೀ ಶಂಕರಾಚಾರ್ಯರು ಬರೆದರು.

ಈ ಇಪ್ಪತ್ತೊಂದನೆಯ ಶತಮಾನದಲ್ಲಿರುವ ಬ್ರಾಹ್ಮಣ್ಯವನ್ನೂ, ಬ್ರಾಹ್ಮಣರನ್ನೂ

ಕುರಿತು ಈ ಪ್ರಶಂಸೆಯ ಮಾತನ್ನು ಹೇಳುತ್ತಿಲ್ಲ. ಇದನ್ನು ಸ್ಪಷ್ಟವಾಗಿ ತಿಳಿದಿರಬೇಕು. ಈಗ ನಿಜವಾದ ಬ್ರಾಹ್ಮಣ್ಯವಿದೆಯೆ ? ಅದನ್ನು ಪಾಲಿಸತಕ್ಕ ಬ್ರಾಹ್ಮಣರಿದ್ದಾರೆಯೆ ? ಎಂಬುದು ವಿಚಾರಣೀಯವೇ ಸರಿ. ವಜ್ರದಲ್ಲಿಯೂ, ಇದ್ದಲಿನಲ್ಲಿಯೂ ಘಟಕವಾದ ವಸ್ತು ಸಾಮಗ್ರಿ ಒಂದೇ ಎಂದು ಹೇಳುತ್ತಾರೆ. ಈಗ ವಜ್ರವು ಇದ್ದಿಲಾಗಿದೆ ಎನ್ನಬೇಕಾಗಿದೆ. ಮನುಸ್ಮೃತಿಯು ಪ್ರಶಂಸೆ ಮಾಡಿರುವುದು ವಜ್ರವನ್ನು, ಇದ್ದಿಲನ್ನಲ್ಲ. ಧರ್ಮಶಾಸ್ತ್ರಗಳು ವಿಧಿಸಿದ ನಿಯಮಾವಳಿಗಳನ್ನು ಪಾಲಿಸತಕ್ಕವನು ನಿಜವಾದ ಬ್ರಾಹ್ಮಣ. ಅವನಿಗೆ ಸರ್ವವಿಧವಾದ ಪ್ರಶಂಸೆಯೂ ಸಲ್ಲಲೇಬೇಕು. ಈ ಕಾಲದ ಬ್ರಾಹ್ಮಣಬ್ರುವರನ್ನು ಮನುಸ್ಮೃತಿ ಹೊಗಳಿಲ್ಲ, ನಿಂದಿಸಿದೆ. ಮನುಸ್ಮೃತಿಯಲ್ಲಿ ಹೇಳಿದ ಲಕ್ಷಣ, ಪ್ರಶಂಸೆಗಳು ಆ ಕಾಲದ ಬ್ರಾಹ್ಮಣರಿಗೆ ಸಂಬಂಧಿಸಿದ್ದು. ಆ ಕಾಲದವನು ಹೇಗಿದ್ದ ? ಅವನ ಗುಣಲಕ್ಷಣಗಳೇನೆಂಬುದನ್ನು ಮುಂದೆ ವಿವರಿಸಲಾಗುವುದು. ವಜ್ರದ ಪ್ರಶಂಸೆಯನ್ನು ಇದ್ದಿಲಿಗೆ ಅನ್ವಯಿಸಿಕೊಂಡು ಮನುಸ್ಮೃತಿಯನ್ನಾಗಲಿ, ಇತರ ಧರ್ಮಶಾಸ್ತ್ರ ಪುರಾಣಗಳನ್ನಾಗಲಿ ತೆಗಳುವುದು ವಿಚಾರ ಶೂನ್ಯವೇ ಸರಿ.

ಇನ್ನು ಕ್ಷತ್ರಿಯ ಧರ್ಮವನ್ನು ಪಾಲಿಸತಕ್ಕವರೂ ಈಗ ದುರ್ಲಭ. '**ನಂದಾಂತಂ ಕ್ಷತ್ರಿಯ ಕುಲಂ**' ಎಂಬುದೊಂದು ಪುರಾಣ ವಚನ. ಶಿಶುನಾಭವಂಶದ ರಾಜನಾದ ಮಹಾನಂದಿಗೆ ಶೂದ್ರ ಸ್ತ್ರೀಯಲ್ಲಿ ಮಹಾನಂದನೆಂಬ ಮಗನು ಹುಟ್ಟಿದನೆಂದೂ, ಈ ಮಹಾನಂದನು ಸಮಸ್ತ ಕ್ಷತ್ರಿಯರನ್ನೂ ಕೊಂದು ಏಕಚಕ್ರಾಧಿಪತಿಯಾಗಿ ಮೆರೆದನೆಂದೂ ಈತನನ್ನೂ, ಈತನ ಮಕ್ಕಳನ್ನು ಚಾಣಕ್ಯನು ಉಪಾಯದಿಂದ ಸಂಹರಿಸಿ ಚಂದ್ರಗುಪ್ತನಿಗೆ ಪಟ್ಟಾಭಿಷೇಕ ಮಾಡಿದನೆಂದೂ ವಿಷ್ಣುಪುರಾಣದಲ್ಲಿ ಹೇಳಿದೆ. ( ಅಂಶ ೪ - ಅಧ್ಯಾಯ ೨೪). ಚಂದ್ರಗುಪ್ತನು ಜಾತಿಯಲ್ಲಿ ಶೂದ್ರನಾದರೂ ಕ್ಷತ್ರಿಯ ಗುಣಗಳು ಅವನಲ್ಲಿದ್ದವು. ಸರ್ವನಾಶವಾಗುತ್ತಿರುವಾಗ ಆತನಾದರೂ ಧರ್ಮರಕ್ಷಕನಾಗಿರಲಿ ಎಂಬುದು ಚಾಣಕ್ಯನ ಉದ್ದೇಶವಾಗಿತ್ತು. ಆ ಸಮಯದಲ್ಲಿ ಮಗಧರಾಜ್ಯಕ್ಕೆ ತಾನೇ ರಾಜನೆಂದು ಘೋಷಿಸಿ ಸಿಂಹಾಸನವನ್ನೇರುವುದು ಚಾಣಕ್ಯನಿಗೆ ಸುಲಭವಾಗಿತ್ತು. ರಾಜನಾಗುವುದು ಬ್ರಾಹ್ಮಣ ಧರ್ಮವಲ್ಲವೆಂಬ ನಿಶ್ಚಯವಿದ್ದುದರಿಂದ ಆತನು ರಾಜ್ಯಪದವಿಯನ್ನು ಆಶಿಸಲಿಲ್ಲ. ರಾಜ ಪದವಿ ಇರಲಿ, ಮಂತ್ರಿಯಾಗಲೂ ಹವಣಿಸಲಿಲ್ಲ. ಮೊದಲಿದ್ದಂತೆ ಅಮಾತ್ಯ ರಾಕ್ಷಸನನ್ನೇ ಮಂತ್ರಿಯ ಸ್ಥಾನದಲ್ಲಿ ಕುಳ್ಳಿರಿಸಿ, ತನ್ನ ಶ್ರಮಕ್ಕೆ ಮೂರು ಕಾಸಿನ ಪ್ರಯೋಜನವನ್ನೂ ಪಡೆಯದೆ, ಈ ಬ್ರಾಹ್ಮಣನು ಅಲ್ಲಿಂದ ನಿರ್ಗಮಿಸಿದನು. ಬ್ರಾಹ್ಮಣ್ಯದ ಈ ವಿರಕ್ತ ನೀತಿಯನ್ನು ಯಾರಾದರೂ ಎತ್ತಿ ಹೊಗಳಿದ್ದುಂಟೇನು?

ಈಗ ಪುರುಷಸೂಕ್ತಕ್ಕೆ ಬರೋಣ. ವೇದವು ಬಹಳ ಗಂಭೀರಾರ್ಥವುಳ್ಳದ್ದು.

ಅದು ಆಲಂಕಾರಿಕ ಭಾಷೆಯಲ್ಲಿ ವಸ್ತುವನ್ನು ಪ್ರತಿಪಾದಿಸುತ್ತದೆ. ಒಗಟಿನ ರೂಪದಲ್ಲಿರುತ್ತದೆ. ಬಾಹ್ಯಾರ್ಥ ಬೇರೆ, ಅಂತರಾರ್ಥ ಬೇರೆ. ಕೆಲವು ಕಡೆ ವಿವಿಧಾರ್ಥಗಳೂ ಸಂಮತ. '**ಪದ್ಭ್ಯಾಂ ಶೂದ್ರೋऽಜಾಯತ**' ಎಂದು ಶೂದ್ರರು ಪಾದಜಾತರೆಂದು ವರ್ಣಿಸಿದ್ದರಿಂದ ಶೂದ್ರರನ್ನು ಪುರುಷಸೂಕ್ತವು ನಿಂದಿಸಿದೆ ಎಂದು ಆಪಾದಿಸುತ್ತಾರಷ್ಟೆ? ಒಳ್ಳೆಯದು. ಈ ಪುರುಷಸೂಕ್ತವೇ '**ಪಾದೋऽಸ್ಯ ವಿಶ್ವಾ ಭೂತಾನಿ**' ಎಂದು ಹೇಳುತ್ತದೆ. ವಿಶ್ವದಲ್ಲಿರುವ ಸಮಸ್ತ ಪ್ರಾಣಿಗಳೂ ವಿರಾಟ್ ಪುರುಷನ ಪಾದಗಳು ಎಂದರ್ಥ. ಇದರ ಪ್ರಕಾರ ಬ್ರಾಹ್ಮಣನೂ ವಿರಾಟ್ ಪುರುಷನ ಪಾದವಾಗಿ ಬಿಡುತ್ತಾನಲ್ಲಾ. ಇದಕ್ಕೆ ಉತ್ತರವೇನು? '**ಅಬಧ್ನನ್ ಪುರುಷಂ ಪಶುಂ**'. = (ಪುರುಷನಿಂದ ಹುಟ್ಟಿದ) ದೇವತೆಗಳು ಹುಟ್ಟುವ ಮೊದಲೇ ಆ ಪುರುಷನನ್ನು ಕಟ್ಟಿಹಾಕಿ ತುಂಡು ತುಂಡು ಮಾಡಿ ಯಜ್ಞಮಾಡಿದರು. **ಯಜ್ಞೇನ ಯಜ್ಞಮಯಜಂತ ದೇವಾಃ** = ದೇವತೆಗಳು ಯಜ್ಞದಿಂದ ಯಜ್ಞ ಮಾಡಿದರು! ಇದು ವೇದಭಾಷೆ. ವೇದೋಪನಿಷತ್ತುಗಳು ಜನಪದ ಸಾಹಿತ್ಯವೆಂದೂ, ಲಾವಣಿಗಳೆಂದೂ ಈ ವಿಚಾರವಾದಿಗಳು ತಿಳಿದಿದ್ದಾರೇನು? ಮಹಾನ್ಯಾಸದಲ್ಲಿ ಅರ್ಚಕನು ತನ್ನದೇಹದಲ್ಲಿ ದೇವತೆಗಳನ್ನು ಆವಾಹಿಸಿಕೊಳ್ಳುತ್ತಾನೆ. ಆಗ '**ಪಾದಯೋರ್ವಿಷ್ಣುಸ್ತಿಷ್ಠತು। ಹಸ್ತಯೋರ್ಹರಸ್ತಿಷ್ಠತು**' = ನನ್ನ ಪಾದಗಳಲ್ಲಿ ವಿಷ್ಣುವಿರಲಿ, ತೋಳುಗಳಲ್ಲಿ ಹರನಿರಲಿ ಎನ್ನುತ್ತಾನೆ. ಕಾಲುಗಳಲ್ಲಿ ವಿಷ್ಣುವನ್ನು ಆವಾಹಿಸಿದರೆ ಅವನನ್ನು ತುಚ್ಛವಾಗಿ ಕಂಡಂತಾಗಲಿಲ್ಲವೆ? ವಿಷ್ಣುವಿಗೆ ಚಪ್ಪಲಿಯ ಸ್ಥಾನವನ್ನು ಕೊಡಬಹುದೆ - ಎಂದು ವಿಷ್ಣುಭಕ್ತರು ಕ್ರುದ್ಧರಾಗುವುದಿಲ್ಲವೆ?

ರಾಷ್ಟ್ರದ ಪ್ರಜಾಸಮುದಾಯಕ್ಕೆ ಚಾತುರ್ವರ್ಣ್ಯವು ಭದ್ರವಾದ ವಿಶ್ರಾಂತಿ ಮಂಟಪವಾಗಿತ್ತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಈ ಮಂಟಪಕ್ಕೆ ನಾಲ್ಕು ಆಧಾರಸ್ತಂಭಗಳು. ವಿದ್ಯೆ, ಬಲ, ಧನಧಾನ್ಯ ಸಮೃದ್ಧಿ, ವಿವಿಧೋದ್ಯೋಗಗಳಲ್ಲಿ ದೈಹಿಕ ಶ್ರಮ ಇವು ಕ್ರಮವಾಗಿ ಈ ವರ್ಣಗಳ ಕಾರ್ಯಗಳು. ಈ ನಾಲ್ಕು ವಿಭಾಗಗಳು ಜಗತ್ತಿನಲ್ಲಿರುವ ಸಕಲ ರಾಷ್ಟ್ರಗಳಲ್ಲಿ ಇಂದಿಗೂ ಇವೆ. ಭಾರತದಲ್ಲಿ ಈ ಪದ್ಧತಿಯಿಂದ ಕ್ರಮೇಣ ಜಾತಿಗಳು ತಲೆದೋರಿದವು ಎಂಬುದು ವಿಶೇಷ. ಹೊಸದಾಗಿ ನಿರ್ಮಿತವಾದವೆಂಬ ಕಾರಣದಿಂದ ಅದು ತ್ಯಾಜ್ಯವೆನ್ನಲಾಗದು. ಆರಂಭದಲ್ಲಿ ರಾಜನೂ ಇರಲಿಲ್ಲ. ಸರಕಾರವೂ ಇರಲಿಲ್ಲ. ಆದ್ದರಿಂದ ಈಗಲೂ ಸರಕಾರ ಬೇಡ. ರಾಜ್ಯ ವ್ಯವಸ್ಥೆ ಬೇಡವೆನ್ನಲಾದೀತೇನು? ಜಾತಿಪದ್ಧತಿಯು ಏಕೆ ತಲೆದೋರಿತು? ಸಾವಿರಾರು ವರ್ಷಗಳಿಂದ ಅದು ದೃಢವಾಗಿ ತಳವೂರಿ ನಿಂತಿರಲು ಕಾರಣಗಳೇನು? ಆ ಪದ್ಧತಿಯಲ್ಲಿ ಯಾವ ಪ್ರಯೋಜನವಿತ್ತು?- ಎಂಬುದನ್ನು ವಿಚಾರಿಸುವುದು ಯೋಗ್ಯವಾದ ಮಾರ್ಗ.

ನಾಗರಿಕ ಸಮಾಜವೆನಿಸಿದ ಪಾಶ್ಚಾತ್ಯ ಪ್ರಜಾ ಸಮುದಾಯದಲ್ಲಿಯೂ ವಿದ್ಯಾವಂತರ ವರ್ಗ, ವಾಣಿಜ್ಯ ವ್ಯವಸಾಯ ವೃತ್ತಿಗಳಿರುವ ಶ್ರೀಮಂತ ವರ್ಗ, ಕಾರ್ಖಾನೆಗಳಲ್ಲಿ ದುಡಿಯುವ ಕೂಲಿಗಳ ವರ್ಗ ಎಂಬ ಮೂರು ವರ್ಗಗಳಿವೆಯೆಂದು ಸಮಾಜ ಶಾಸ್ತ್ರಜ್ಞರು ಹೇಳಿದ್ದಾರೆ. ಅವರಲ್ಲಿ ಸಹಭೋಜನ, ವಿವಾಹಾದಿ ವ್ಯವಹಾರಗಳು ಪರಸ್ಪರ ನಿಷಿದ್ಧವಲ್ಲವಾದರೂ ಹೀಗೆ ನಡೆಯುವುದು ಅತಿವಿರಳವೆಂದೂ ಬರೆದಿದ್ದಾರೆ. ಗ್ರೀಸ್ ದೇಶದ ಪ್ರಾಚೀನ ಇತಿಹಾಸಕಾರರಾದ ಹೆರೊಡೋಟಸ್ ಎಂಬುವನು ಈಜಿಪ್ಟ್ ದೇಶದಲ್ಲಿ ಏಳು ಜಾತಿಗಳಿದ್ದವೆಂದು ಬರೆದಿದ್ದಾನೆ. ಈ ಜಾತಿ ವಿಭಾಗವು ನಮ್ಮ ಚಾತುರ್ವರ್ಣ್ಯದಂತೆ ಬೇರೆ ಬೇರೆ ಉದ್ಯೋಗ, ಗುಣಸ್ವಭಾವಗಳುಳ್ಳದ್ದು. ಮನುಷ್ಯರಲ್ಲಿ ಗುಣಕರ್ಮ ಭೇದವು ನೈಸರ್ಗಿಕವಾಗಿ ಪ್ರಾಪ್ತವಾದದ್ದು. ಪುರುಷಸೂಕ್ತವಾಗಲಿ, ಮನುಸ್ಮೃತಿಯಾಗಲಿ ಇದಕ್ಕೆ ಕಾರಣವಲ್ಲ. ಈ ಗುಣಸ್ವಭಾವಗಳು ಯಾವುದೆಂದರೆ -

**ಶಮೋ ದಹಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್॥**

(ಗೀತಾ ೧೮-೪೨)

ಬಾಹ್ಯೇಂದ್ರಿಯಗಳ ನಿಗ್ರಹ, ಅಂತರಿಂದ್ರಿಯವಾದ ಮನಸ್ಸಿನ ನಿಗ್ರಹ, ತಪಸ್ಸು, ತ್ರಿಕರಣಶುದ್ಧಿ , ತಾಳ್ಮೆ , ಋಜು ಸ್ವಭಾವ, ವೇದಾದಿ ಶಾಸ್ತ್ರಾರ್ಥ ಜ್ಞಾನ , ಈಶ್ವರನಲ್ಲಿ ಅಚಲವಾದ ನಂಬಿಕೆ ಇವು ಬ್ರಾಹ್ಮಣನಿಗೆ ಸ್ವಭಾವಜನ್ಯವಾದವು. ಇವನ್ನು ಪಾಲಿಸತಕ್ಕವನೇ ಬ್ರಾಹ್ಮಣ.

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಂ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥**

ಪರಾಕ್ರಮ, ಶತ್ರುಗಳನ್ನೆದುರಿಸುವ ಕೆಚ್ಚು, ಕಷ್ಟಕ್ಕೆ ಜಗ್ಗದ ಎದೆಗಾರಿಕೆ, ಯುದ್ಧದಲ್ಲಿ ಹೆದರಿ ಓಡಿಹೋಗದಿರುವುದು, ಪಾತ್ರವರಿತು ದಾನ, ಪ್ರಭುತ್ವ ಇವು ಕ್ಷತ್ರಿಯನಿಗೆ ನೈಜವಾದ ಕರ್ತವ್ಯ.

**ಕೃಷಿ ಗೋರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಂ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರ ಸ್ಯಾಪಿ ಸ್ವಭಾವಜಮ್ ॥** (ಗೀತಾ ೧೮-೪೪)

ಭೂವ್ಯವಸಾಯ, ಗೋರಕ್ಷಣೆ ( ಪಶುಪಾಲನೆ ) , ವಾಣಿಜ್ಯ ಇವು ವೈಶ್ಯನಿಗೆ ಸಹಜವಾದ ಕರ್ತವ್ಯಗಳು. ಸೇವೆ ಮುಂತಾದ ದೈಹಿಕ ಶ್ರಮವು ಶೂದ್ರನಿಗೆ ಸಹಜವಾದದ್ದು. ಈ ಕರ್ಮಗಳು ಸ್ವಭಾವಜನ್ಯವಾದ ಗುಣಗಳಿಂದ ವಿಭಕ್ತವಾಗಿವೆ.

ಈ ಗುಣಗಳನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಧರ್ಮಶಾಸ್ತ್ರಗಳು ಕರ್ಮವನ್ನು ವಿಭಾಗಿಸಿವೆ. ಇವುಗಳಲ್ಲಿ ಕ್ಷತ್ರಿಯರೇ ಮೊದಲಾದವರಿಗೆ ಹೇಳಿದ ಕರ್ಮಗಳು ಶಾರೀರಿಕವಾದವು. ಬ್ರಾಹ್ಮಣನಿಗೆ ಹೇಳಿದವು ಮುಖ್ಯವಾಗಿ ಮಾನಸವಾದವು. ದೈಹಿಕ ಕರ್ಮಕ್ಕಿಂತಲೂ ಮಾನಸವಾದದ್ದು ಕಠಿಣತರ. ಈ ಗುಣಗಳು ಜನ್ಮಾಂತರ ಸಂಸ್ಕಾರದಿಂದ ಬರತಕ್ಕವು, ಆಕಸ್ಮಿಕವಾದವುಗಳಲ್ಲ. ಆಕಸ್ಮಿಕವಾಗಿ ಯಾವುದೋ ಒಂದು ನಿಮಿತ್ತದಿಂದ ಬರತಕ್ಕ ಗುಣವು ಕ್ಷಣಿಕವಾದದ್ದು , ಶಾಶ್ವತವಲ್ಲ. ಕ್ಷಣಿಕವಾದ ಗುಣವು ಜಾತಿ ವಿಭಾಗಕ್ಕೆ ಕಾರಣವಲ್ಲ. ಕಾರಣವಾಗಿದ್ದರೆ ಅರ್ಜುನನಿಗೆ ಯುದ್ಧಭೂಮಿಯಲ್ಲೊದಗಿದ ಕಾರುಣ್ಯ, ಅಹಿಂಸಾಭಾವ, ವೈರಾಗ್ಯ ಮೊದಲಾದವುಗಳಿಂದ ಅವನು ಬ್ರಾಹ್ಮಣನಾಗಿ ಬಿಡುತ್ತಾನೆ. ಆಗ ಶ್ರೀ ಕೃಷ್ಣನು ' ಅರ್ಜುನ, ನೀನೀಗ ಬ್ರಾಹ್ಮಣನಾಗಿದ್ದೀಯೆ. ಒಳ್ಳೆಯ ವೈರಾಗ್ಯ ಬಂದಿದೆ. ನೀನು ಕಾಡಿಗೆ ಹೋಗಿ ತಪಸ್ಸು ಮಾಡು. ಯುದ್ಧವು ನಿನಗೆ ಬೇಡ ' ಎಂದು ಉಪದೇಶಿಸಬೇಕಾಗಿತ್ತು. ' **ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹ** ' ಎಂದು ಹೇಳಿ ಅವನು ಅರ್ಜುನನನ್ನು ಯುದ್ಧಕ್ಕೆ ಚೋದಿಸದೇ ವೈರಾಗ್ಯವೇ ನಿನ್ನ ಸ್ವಧರ್ಮ ಎಂದು ಹೇಳುತ್ತಿದ್ದ. ಹಾಗಾಗಲಿಲ್ಲ.

## ಜನ್ಮವೂ ವರ್ಣ ವಿಭಾಗಕ್ಕೆ ಕಾರಣ

ಪಾಂಡವರಲ್ಲಿ ಧರ್ಮರಾಜನು ಬ್ರಾಹ್ಮಣನೆಂದು ಗಣಿಸಬೇಕಾಗಿತ್ತು. ದ್ರೋಣ, ಪರಶುರಾಮ ಪರಧರ್ಮವನ್ನಾಶ್ರಯಿಸಿದ್ದರಿಂದ ಕ್ಷತ್ರಿಯರೆನ್ನಬೇಕಾದೀತು. ಆದ್ದರಿಂದ ಚಾತುರ್ವರ್ಣ್ಯದಲ್ಲಿ ಜನ್ಮವೂ ಒಂದು ಕಾರಣವಾಗಿ ಸೇರಿಕೊಂಡಿದೆ. ಆಯಾ ಜಾತಿಯಲ್ಲಿ ಜನಿಸಿದವನಿಗೆ ಆ ಜಾತಿ ಧರ್ಮವೇ ಸ್ವಧರ್ಮ. ಅದನ್ನು ಕಟ್ಟುನಿಟ್ಟಾಗಿ ಪಾಲಿಸಬೇಕೆಂದು ಧರ್ಮ ಶಾಸ್ತ್ರವು ಉಪದೇಶಿಸುತ್ತದೆ. ಯಾವನು ಬ್ರಾಹ್ಮಣ ಜಾತಿಯಲ್ಲಿ ಜನಿಸಿ ತನ್ನ ಧರ್ಮವನ್ನು ಪಾಲಿಸುವುದಿಲ್ಲವೋ ಅವನು ಬ್ರಾಹ್ಮಣಬ್ರುವನೆಂದು ಶಾಸ್ತ್ರವು ನಿಂದಿಸುತ್ತದೆ,

ಬ್ರಾಹ್ಮಣನೆಂದು ತನ್ನನ್ನು ಹೊಗಳಿಕೊಳ್ಳತಕ್ಕವನು ಬ್ರಾಹ್ಮಣಬ್ರುವ. ಯಾವುದೋ ಧರ್ಮಶಾಸ್ತ್ರದಲ್ಲಿದ್ದ ಈ ಶ್ಲೋಕವು ವ್ಯಾಕರಣ ಮಹಾಭಾಷ್ಯದಲ್ಲಿ ಉದಾಹೃತವಾಗಿದೆ.

**ವಿದ್ಯಾ ತಪಶ್ಚಯೋನಿಶ್ಚ ತ್ರಯಂ ಬ್ರಾಹ್ಮಣಕಾರಣಂ ।**
**ವಿದ್ಯಾತಪೋಭ್ಯಾಂ ಯೋ ಹೀನೋ ಜಾತಿಬ್ರಾಹ್ಮಣ ಏವ ಸಃ ॥**

'' ವಿದ್ಯೆ, ತಪಸ್ಸು, ಜನ್ಮ ಇವು ಮೂರು ಬ್ರಾಹ್ಮಣನೆನಿಸಲು ಕಾರಣ. ಯಾವನಿಗೆ ವಿದ್ಯೆ, ತಪಸ್ಸುಗಳೆರಡೂ ಇಲ್ಲವೋ, ಅವನು ಜಾತಿ ಬ್ರಾಹ್ಮಣನೇ ಸರಿ !'' ಜಾತಿ

ಬ್ರಾಹ್ಮಣನೆಂದರೆ ಜನ್ಮದಿಂದ ಮಾತ್ರ ಬ್ರಾಹ್ಮಣ, ಆಚರಣೆಯಿಂದಲ್ಲ. ಅವನು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವನು. ಆದರೂ ಸ್ವತಃ ಬ್ರಾಹ್ಮಣನಲ್ಲ ಎಂದು ಅಭಿಪ್ರಾಯ. ಜಾತಿಯೂ ಬ್ರಾಹ್ಮಣ್ಯಕ್ಕೆ ಕಾರಣವಾದದ್ದನ್ನು ಧಿಕ್ಕರಿಸಿ, ವಿಶ್ವಾಮಿತ್ರನು ಘೋರವೂ ಆಶ್ಚರ್ಯಕರವೂ ಆದ ತಪಸ್ಸನ್ನೂ ಮಾಡಿ ಬ್ರಾಹ್ಮಣ್ಯವನ್ನು ಸಂಪಾದಿಸಿಕೊಂಡು ಬ್ರಹ್ಮರ್ಷಿ ಎನಿಸಿದನು. ಯೋಗವಾಸಿಷ್ಠದಲ್ಲಿ ದೈವಕ್ಕಿಂತ ಪೌರುಷವು ಪ್ರಬಲವಾದದ್ದು. ಪೌರುಷದಿಂದ ದೈವವನ್ನು ಹಿಮ್ಮೆಟ್ಟಿಸಬಹುದು ಎಂದು ಹೇಳುವಾಗ ಈ ಶ್ಲೋಕ ಬಂದಿದೆ.

**ವಿಶ್ವಾಮಿತ್ರೇಣ ಮುನಿನಾ ದೈವಮುತ್ಸೃಜ್ಯದೂರತಃ ॥**
**ಪೌರುಷೇಣೈವ ಸಂಪ್ರಾಪ್ತಂ ಬ್ರಾಹ್ಮಣ್ಯಂ ರಾಮ ನಾನ್ಯಥಾ ॥**

ವಸಿಷ್ಠರು ಶ್ರೀರಾಮನಿಗೆ ಹೇಳುತ್ತಾರೆ. 'ರಾಮ, ವಿಶ್ವಾಮಿತ್ರ ಮುನಿಯು (ಜನ್ಮದಿಂದ ಕ್ಷತ್ರಿಯನಾದರೂ) ಆ ದೈವವನ್ನು ದೂರಕ್ಕೆ ತಳ್ಳಿ ಹಾಕಿ ತನ್ನ (ತಪಸ್ಸು) ಪೌರುಷದಿಂದಲೇ ಬ್ರಾಹ್ಮಣ್ಯವನ್ನು ಪಡೆದಿದ್ದಾನೆ. ಬೇರೆ ಕಾರಣದಿಂದಲ್ಲ.' ಆದ್ದರಿಂದ ಚಾತುರ್ವರ್ಣ್ಯ ವ್ಯವಸ್ಥೆಗೆ ಜಾತಿಯೂ (ಜನ್ಮ) ಒಂದು ಪ್ರಬಲ ಕಾರಣವಾಗಿಕೊಂಡಿದ್ದನ್ನು ಅಲ್ಲಗಳೆಯಲಾಗುವುದಿಲ್ಲ. ಇಲ್ಲದಿದ್ದರೆ ವಿಶ್ವಾಮಿತ್ರನು ಬ್ರಾಹ್ಮಣನಾಗಲು ಅಷ್ಟು ಕಷ್ಟಪಡಬೇಕಾಗಿರಲಿಲ್ಲ.

ಈ ಪ್ರಬಂಧದಲ್ಲಿ ನಾವು ಹೇಳುತ್ತಿರುವುದು ವಿದ್ಯಾತಪೋಯೋನಿಗಳಿಂದ ತೇಜಸ್ವಿಯಾಗಿ, ಮನುಸ್ಮೃತಿಯಲ್ಲಿ ಹೇಳಿದಂತೆ ತನ್ನ ಧಾರ್ಮಿಕ ವಿಧಿಗಳನ್ನು ಪಾಲಿಸುತ್ತಾ ಲಕ್ಷಣಾನ್ವಿತನಾಗಿದ್ದ ಬ್ರಾಹ್ಮಣನನ್ನು ಮಾತ್ರ ಕುರಿತು ಆಗಿದೆ. ಈ ಕಾಲದಲ್ಲಿ ಕೇವಲ ಜಾತಿಯಲ್ಲಿ ಹುಟ್ಟಿದ, ಯಾವ ಧಾರ್ಮಿಕ ನಿಯಮುವನ್ನೂ ಪಾಲಿಸದ ಬ್ರಾಹ್ಮಣಬ್ರುವನನ್ನು ಕುರಿತು ಅಲ್ಲ ಎಂಬುದನ್ನು ಸ್ಪಷ್ಟವಾಗಿ ತಿಳಿದಿರಬೇಕು.

ಇಂಗ್ಲೆಂಡ್, ಫ್ರಾನ್ಸ್, ಚೀನಾ, ರಷ್ಯಾ, ಜಪಾನ್ ಇತ್ಯಾದಿ ರಾಷ್ಟ್ರ ವಿಭಾಗಗಳನ್ನು ಮಾಡಿಕೊಂಡವರು ಯಾರು ? ಮನುಷ್ಯರೇ ಅಲ್ಲವೆ? ಈಚೆಗೆ ಭಾರತ ದೇಶವನ್ನೊಡೆದು ಪಾಕಿಸ್ತಾನ, ಬಾಂಗ್ಲಾ ಎಂಬ ಎರಡು ಹೊಸ ರಾಷ್ಟ್ರಗಳನ್ನು ನಿರ್ಮಿಸಿದವರು ನಾವೇ ಅಲ್ಲವೆ ? ಇವೆಲ್ಲ ಒಂದೇ ರಾಷ್ಟ್ರ ಒಂದೇ ಸರಕಾರದ ಆಡಳಿತಗಳಲ್ಲಿ ಸೇರಿ ಹೋಗಿದ್ದರೆ ಮಹಾಯುದ್ಧಗಳೂ, ಕಚ್ಚಾಟಗಳೂ ನಡೆಯುತ್ತಲೇ ಇರಲಿಲ್ಲ. ಕಮ್ಯೂನಿಸಂ, ಪ್ರಜಾಪ್ರಭುತ್ವ, ನಿರಂಕುಶ ಪ್ರಭುತ್ವ ಮೊದಲಾದ ಭೇದಗಳು ಯಾಕಾಗಿ ? ನಮ್ಮ ಕಣ್ಣ ಮುಂದೆಯೇ ಕರ್ನಾಟಕ, ತಮಿಳುನಾಡು, ಆಂಧ್ರ ಮುಂತಾದ ಪ್ರಾಂತಗಳ ರಚನೆಯಾದದ್ದೇಕೆ? ಈ ವಿಭಾಗವು ಸಹಜವಾದದ್ದರಿಂದ ನಿಂದಾಸ್ಪದವಲ್ಲವೆಂದು ಲೋಕವು ಮನ್ನಿಸಿರುತ್ತದೆ. ಈ ವಿಭಾಗವೇ ತಪ್ಪು. ಒಂದೇ ಭಾಷೆ, ಒಂದೇ ವೇಷ

ಭೂಷಣಗಳಿದ್ದರೆ ಸಮಾನತೆ ಬರುತ್ತದೆ. ಮನುಷ್ಯರಲ್ಲಿ ಭೇದಭಾವ ಹುಟ್ಟದೇ ಐಕಮತ್ಯದಿಂದ ಇರಬಹುದಾಗಿತ್ತು ಎಂದೂ ವಾದಿಸಬಹುದಲ್ಲವೇ ? ಗುಣಗ್ರಹಣದ ಪ್ರವೃತ್ತಿಯೇ ಇಲ್ಲದೆ ನಿಂದಿಸುವ ಉದ್ದೇಶವೇ ಪ್ರಧಾನವಾದಾಗ ಬಯ್ಯುವ ಬಾಯಿಯನ್ನು ಅಕ್ಷರಗಳನ್ನು ಕೆತ್ತುವ ಕೈಯನ್ನು ಹಿಡಿದು ನಿಲ್ಲಿಸಲಾಗುವುದಿಲ್ಲ. ಚಾತುರ್ವರ್ಣ್ಯಕ್ಕೆ ನಮ್ಮ ಧರ್ಮಶಾಸ್ತ್ರಗಳನ್ನು ಬರೆದವರೇ ಹೊಣೆ ಎಂದಿಟ್ಟುಕೊಳ್ಳೋಣ. ಅವರು ನಾಲ್ಕು ಜಾತಿಗಳನ್ನು ಕಲ್ಪಿಸಿದರು. ಈಗ ನೂರಾರು ಜಾತಿಗಳಾಗಿರುವುದಕ್ಕೆ ಹೊಣೆಯಾರು ? ಜಾತಿಗಳನ್ನು ಒಟ್ಟುಗೂಡಿಸುವುದಕ್ಕಾಗಿ ಕೆಲವರು ತುಂಬಾ ಕೆಲಸ ಮಾಡಿದರೆಂದು ಅವರನ್ನು ಸ್ತುತಿಸುವುದಕ್ಕೆ ಮಿತಿಯೇ ಇಲ್ಲದಾಗಿದೆ. ಜಾತಿಭೇದವನ್ನು ತೊಡೆದು ಹಾಕಿ ಲೋಕೋದ್ಧಾರ ಮಾಡ ಹೊರಟ ಈ ಜನರಿಂದ ಹೊಸಹೊಸ ಜಾತಿಗಳ' ನಿರ್ಮಾಣವಾಯಿತೇ ಹೊರತು ಯಾವ ಒಂದು ಜಾತಿಯೂ ಕಡಿಮೆಯಾಗಲಿಲ್ಲ. ಈ ಸತ್ಯವನ್ನೇಕೆ ಜನರು ಕಾಣದೇ ಹೋಗಿದ್ದಾರೆ?

ಮನುಷ್ಯವರ್ಗದಲ್ಲಿ ಗುಣ, ಕರ್ಮ, ಉದ್ದೇಶ, ಪ್ರವೃತ್ತಿ ಮುಂತಾದ ಭೇದಗಳು ಸಹಜವಾಗಿ ಬಂದಿರುತ್ತವೆ. ಅವನ್ನು ಪುರುಷಸೂಕ್ತವೂ ನಿರ್ಮಿಸಲಿಲ್ಲ. ಮನುಸ್ಮೃತಿಯೂ ಜಾತಿಭೇದವನ್ನು ಹುಟ್ಟಿಸಲಿಲ್ಲ. ಸ್ವಭಾವ ಸಿದ್ಧವಾಗಿರುವುದನ್ನು ಅವು ವಿವರಿಸಿ ಹೇಳಿವೆ. ಗೋವುಗಳಲ್ಲಿ, ಕುದುರೆಗಳಲ್ಲಿ, ನಾಯಿಗಳಲ್ಲಿ, ಆನೆಗಳಲ್ಲಿ ಎಷ್ಟು ಒಳಭೇದಗಳಿವೆಯೆಂಬುದನ್ನು ಲಕ್ಷಿಸಬೇಕು. ಹಲಸಿನಲ್ಲಿ, ಕಬ್ಬಿನಲ್ಲಿ, ಬಾಳೆಯಲ್ಲಿ ಇರುವ ಭೇದಗಳನ್ನು ಮನುಷ್ಯ ಕಲ್ಪಿಸಿದ್ದಲ್ಲ. ಆಫ್ರಿಕನ್ನರು ಕಪ್ಪು ಜನರೆಂದೂ, ಯುರೋಪಿಯನ್ನರು ಬಿಳಿಯರೆಂದೂ ವಿಭಾಗಿಸುವುದು ಪಕ್ಷಪಾತವಲ್ಲ.

ಯಾವ ಪಕ್ಷಪಾತವನ್ನೂ ಇಡದೆ ವಸ್ತು ನಿಷ್ಠವಾಗಿ ವಿಚಾರ ಮಾಡಿದರೆ ಚಾತುರ್ವರ್ಣ್ಯ ಸಂದೇಶವು ಜಾತಿ ವಿಭಾಗವೇ ಅಲ್ಲ. ಅದು ವೃತ್ತಿ ವಿಭಾಗ. ಹುಟ್ಟಿನಿಂದಲೇ ಇವರು ಮೇಲು, ಇವರು ಕೀಳು ಎಂಬ ದುಷ್ಟ ಸಂಕಲ್ಪ ಇದ್ದಿದ್ದರೆ ವೃತ್ತಿಗಳನ್ನು ವಿಂಗಡಿಸಬೇಕಾದದ್ದೇ ಇರಲಿಲ್ಲ. ತಮಗೆ ಬೇಕಾದ ವೃತ್ತಿಯನ್ನೇ ಅವರು ಆರಿಸಿಕೊಳ್ಳುತ್ತಿದ್ದರು. ಶೂದ್ರ ವರ್ಗದಲ್ಲಿ ಯಾವ ವೃತ್ತಿ ಭೇದವಿಲ್ಲದೇ ನೂರಾರು ಜಾತಿಗಳಿಲ್ಲವೆ ? ಹಾಗೆಯೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ಜನ್ಮದಿಂದಲೇ ಜಾತಿಯನ್ನು ಶಾಸ್ತ್ರಕಾರರು ಗೊತ್ತುಮಾಡಿಬಿಡಬಹುದಾಗಿತ್ತು. ಹಾಗೆ ಹೇಳಲೇ ಇಲ್ಲ. ವೃತ್ತಿಗಳೇ ಸಮಾಜವನ್ನು ಅಭ್ಯುದಯಕ್ಕೇರಿಸಿ ಪಾಲಿಸತಕ್ಕವು. ಜಾತಿಯಿಂದ ಆಗತಕ್ಕದ್ದೇನಿದೆ ? ಅತ್ಯಂತ ಉಪಕಾರಿಯಾದ ವೃತ್ತಿಗಳನ್ನು ನಿಷ್ಠೆಯಿಂದ ಪಾಲಿಸತಕ್ಕದ್ದೆಂಬ ನಿಯಮವು ಜಾತಿಗಳನ್ನು ಸೃಷ್ಟಿಸಿತು. ಮೊದಲನೆಯದು ಕರ್ಮರೂಪವಾದ ವೃತ್ತಿ. ಎರಡನೆಯದು ಗುಣಸಂಪತ್ತು. ಆದ್ದರಿಂದಲೇ **' ಗುಣ ಕರ್ಮ ವಿಭಾಗಶಃ '** ಎಂದು

ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ನುಡಿದಿದ್ದಾನೆ. ಕರ್ಮ ಎಂದರೆ ವೃತ್ತಿ ಉದ್ಯೋಗ. ಅದಕ್ಕೆ ಅನುರೂಪವಾಗಿ ಹೊಂದಿಕೊಂಡು ಬರತಕ್ಕದ್ದು ಗುಣ. ಹಿಂದೆ ಹೇಳಿದಂತೆ ವಿದ್ಯೆ, ಬಲ, ಕೃಷಿ ವಾಣಿಜ್ಯಗಳು, ದೈಹಿಕ ಶ್ರಮರೂಪವಾದ ಸೇವೆ ನಾಲ್ಕೂ ವೃತ್ತಿಗಳನ್ನು ನಿಷ್ಠೆಯಿಂದ ಪಾಲಿಸಿ ಉಳಿಸಿಕೊಳ್ಳುವುದಕ್ಕಾಗಿ ಸಮಾಜವು ಯತ್ನಿಸಿದಾಗ ನಾಲ್ಕೂ ಜಾತಿಗಳು (ಅರ್ಥಾತ್ ಗುಂಪು ವಿಂಗಡಣೆಯು) ಸ್ವಾಭಾವಿಕವಾಗಿ ಆವಿರ್ಭವಿಸಿದವು.

ಇವುಗಳಲ್ಲಿ ವಿದ್ಯಾವೃತ್ತಿಯನ್ನು ಸ್ವಲ್ಪ ಪರೀಕ್ಷಿಸೋಣ. ಈ ರಾಷ್ಟ್ರದಲ್ಲಿ ಅನಾದಿಯಾಗಿ ಬಂದ ವಿದ್ಯೆಯೆಂದರೆ ವೇದಗಳು. ಅವುಗಳ ರಕ್ಷಣೆಗಾಗಿ ಆರು ವೇದಾಂಗಳು. ಇತರ ಸಾಂಖ್ಯಾದಿದರ್ಶನ ಶಾಸ್ತ್ರಗಳು, ಸಂಗೀತ ನಾಟ್ಯ ಮುಂತಾದ ಕುಶಲ ವಿದ್ಯೆಗಳು, ಅರ್ಥಶಾಸ್ತ್ರ ಧರ್ಮಶಾಸ್ತ್ರ ಕಾವ್ಯಾಲಂಕಾರಾದಿಗಳೆಲ್ಲವೂ ವೇದಮೂಲಕವಾಗಿಯೇ ಪ್ರಚುರವಾದವು. ಇವೆಲ್ಲವುಗಳ ಅಧ್ಯಯನ, ಬೋಧನೆ, ಆಚರಣೆಗಳು ಯಾರ ಪಾಲಿಗೆ ಗಂಟು ಬಿದ್ದವೋ ಅವರದು ಒಂದು ವರ್ಗವಾಯಿತು. ಈ ವರ್ಗವು ವಿದ್ಯಾಭ್ಯಾಸ, ಶಾಸ್ತ್ರ ರಚನೆ ಮುಂತಾದ ವಿದ್ಯಾಸಂಬಂಧಿ ಕಾರ್ಯಗಳನ್ನೇ ಪಾಲಿಸಬೇಕಾದ್ದರಿಂದ ಇವರ ಸಂತತಿಯವರಿಗೂ ಈ ಕಾರ್ಯವು ಪಾರಂಪರ್ಯ ರೀತಿಯಲ್ಲಿ ಸ್ವತಃ ಪ್ರಾಪ್ತವಾಯಿತು. '**ಕುತೋವಿದ್ಯಾರ್ಥಿನಃ ಸುಖಂ**' ಎಂಬ ಸುಭಾಷಿತದಂತೆ ಈ ವರ್ಗದವರು ಧನಾರ್ಜನೆಯ ಪ್ರವೃತ್ತಿಯನ್ನೇ ಕೈಬಿಡಬೇಕಾಯಿತು. ಧನವನ್ನು ಬಯಸಿದರೆ ವಿದ್ಯೆಯಿಲ್ಲ. ವಿದ್ಯೆಯನ್ನು ಬಯಸಿದರೆ ಧನವಿಲ್ಲ. ಇಂತಹ ಪರಿಸ್ಥಿತಿಯಲ್ಲಿ '' ಇದು ನಮ್ಮ ಕುಲದ ವೃತ್ತಿ, ಪರಂಪರೆಯಿಂದ ಬಂದ ವೃತ್ತಿ '' ಎಂಬ ಅಭಿಮಾನದಿಂದ ವಿದ್ಯೆಗೆ ಬೆಲೆ ಕೊಟ್ಟು ಹಣವನ್ನು ಕೈಬಿಟ್ಟವರದು ಒಂದು ವರ್ಗವೇ ಆಯಿತು. ಈ ವರ್ಗದವರೇ ಬ್ರಾಹ್ಮಣರೆನಿಸಿದರು. ಧನಾರ್ಜನೆಗೆ ಇವರು ಹೋಗಕೂಡದೆಂದು ಕಟ್ಟುಪಾಡು ಬಂದಿತು. ಆದರೆ ಜೀವನ ನಡೆಯಬೇಕಲ್ಲವೆ? ಅದಕ್ಕಾಗಿ ಅಧ್ಯಾಪನ, ಯಾಜನ, (ಪೌರೋಹಿತ್ಯ ) ಎಂಬ ಎರಡೇ ವೃತ್ತಿಗಳಿಗೆ ಅವಕಾಶ ದೊರೆಯಿತು. ಮೂರನೆಯ ಪರಿಗ್ರಹವು ಭಿಕ್ಷಾವೃತ್ತಿಗೆ ಸಮಾನ. ಗುರುಕುಲವನ್ನಿಟ್ಟು ಅಧ್ಯಾಪನವನ್ನು ನಡೆಸಬೇಕು. ಆದರು ಇಷ್ಟು ಹಣವನ್ನು ಕೊಡಬೇಕೆಂದು ನಿಯಮವನ್ನು ಹಾಕತಕ್ಕದ್ದಲ್ಲ. ಗುರುಕುಲದಲ್ಲಿ ವಿದ್ಯಾರ್ಜನವು ಮುಗಿದ ಮೇಲೆ ಶಿಷ್ಯನು ಗುರುದಕ್ಷಿಣೆಯನ್ನು ಕೊಡಬಹುದು. ಕೊಡದೇ ಇದ್ದರೆ ಕೇಳುವಂತಿಲ್ಲ. ಹಣವನ್ನು ತೆಗೆದುಕೊಂಡು ಪಾಠವನ್ನು ಹೇಳಿದರೆ ಆತನು ವಿದ್ಯಾವಿಕ್ರಯಿಯೆಂದೂ ವೇದವಿಕ್ರಯಿಯೆಂದೂ ನಿಂದೆಗೆ ಪಾತ್ರನಾಗುತ್ತಿದ್ದನು. ಬಡತನವೇ ಈ ಬ್ರಾಹ್ಮಣನ ಆಸ್ತಿ. ಸಂಪಾದನೆಯ ಮಾರ್ಗವೆಲ್ಲಾ ಕ್ಷತ್ರಿಯರಿಗೂ, ವೈಶ್ಯರಿಗೂ, ಶೂದ್ರರಿಗೂ ಮೀಸಲಾಗಿತ್ತು. ಬ್ರಾಹ್ಮಣನಿಗೆ 'ವಾಡವ' ಎಂಬ ಇನ್ನೊಂದು ಶಬ್ದವಿದೆ. 'ವಾಡವ'

ಎಂದರೆ ಬ್ರಾಹ್ಮಣನೆಂದು ಅರ್ಥ. ಈ ವಾಡವ ಶಬ್ದವೇ ಕನ್ನಡದಲ್ಲಿ ಬಡವ ಎಂಬ ತದ್ಭವ ರೂಪವನ್ನು ತಾಳಿದೆ. ಬಡವನಿಗೂ ಬ್ರಾಹ್ಮಣನಿಗೂ ಹೇಗೆ ತಾದಾತ್ಮ್ಯವು ಬಂದಿದೆಯೆಂಬುದನ್ನು ಗಮನಿಸಬೇಕು. ಹೀಗೆ ಸ್ವಯಂ ಪ್ರೇರಣೆಯಿಂದ ಬಡತನವನ್ನು ತಮ್ಮ ಮೇಲೆ ಹೇರಿಕೊಂಡು ವಿದ್ಯೆಗಾಗಿ ಶ್ರಮಿಸುತ್ತಿದ್ದ ಬ್ರಾಹ್ಮಣ ವರ್ಗವನ್ನು ನಿಂದಿಸುವುದು ಅಜ್ಞಾನದಿಂದ ಅಥವಾ ದುರ್ಬುದ್ಧಿಯಿಂದಲೇ ಹೊರತು ಬೇರೆ ಯಾವ ನಿಮಿತ್ತವೂ ಇಲ್ಲ. ' ಭಾರತೀಯರು ವಿದ್ಯಾಬುದ್ಧಿಗಳಿಂದ ನಾಗರಿಕತೆಯ ಉಚ್ಚ ಶಿಖರವನ್ನೇರಿದಾಗ, ಪಾಶ್ಚಾತ್ಯರು ಅನಾಗರಿಕರಾದ ಕಾಡುಜನರಾಗಿದ್ದರು'. ಎಂದು ಸ್ವಾಮಿ ವಿವೇಕಾನಂದರು ಒಮ್ಮೆ ನುಡಿದಿದ್ದರು. ಉಚ್ಚ ಮಟ್ಟಕ್ಕೆ ಏರಿದವರು ಈ ಬ್ರಾಹ್ಮಣರೇ ಎಂಬುದನ್ನು ಮರೆಯಬಾರದು. ತಮ್ಮ ಸಂಸಾರ ಸೌಖ್ಯಗಳನ್ನು ಬದಿಗೊತ್ತಿ ಆರ್ಥಿಕವಾಗಿ ಯಾವ ಪ್ರಯೋಜನವೂ ಇಲ್ಲದ ವೇದಶಾಸ್ತ್ರಾದಿ ಗ್ರಂಥಗಳ ಅಧ್ಯಯನಕ್ಕಾಗಿ, ನಿರ್ಮಾಣಕ್ಕಾಗಿ ತನುಧನಮನಗಳೆಲ್ಲವನ್ನೂ ಧಾರೆಯೆರೆದು ಭಾರತದೇಶಕ್ಕಾಗಿ ಮಾನವ ಜಾತಿಗಾಗಿ ಹಗಲಿರುಳೆನ್ನದೇ ದುಡಿದು ಭಾರತಾಂಬೆಯ ಕೀರ್ತಿಯನ್ನು ಆಚಂದ್ರಾರ್ಕವಾಗಿ ಸ್ಥಿರಗೊಳಿಸಿದವರು ಬ್ರಾಹ್ಮಣರು ಎಂಬುದನ್ನು ಸ್ವಲ್ಪ ವಿಮರ್ಶನ ಶಕ್ತಿ ಇದ್ದವನು ಒಪ್ಪಿಕೊಳ್ಳಲೇಬೇಕಾಗುತ್ತದೆ. ಈ ರೀತಿಯಲ್ಲಿ ಅವರು ದುಡಿಯಲೇಬೇಕಾದ ಪ್ರಸಂಗವು ಒದಗಿದ್ದು ಈ ಜಾತಿ ವಿಭಾಗದಿಂದಲೇ. ಭಾರತೀಯರಿಗೆ ಈ ವಿದ್ಯಾಕ್ಷೇತ್ರದಲ್ಲಿ ಎಣೆಯಿಲ್ಲದ ಗೌರವವನ್ನೂ, ಪ್ರತಿಷ್ಠೆಯನ್ನೂ ತಂದುಕೊಟ್ಟವರು ಈ ಬ್ರಾಹ್ಮಣರೇ ಎಂಬುದರಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ.

ಚಾತುರ್ವರ್ಣ್ಯವು ವೇದಮೂಲಕವಾದದ್ದೆಂದೂ, ಅದು ಮನುಸ್ಮೃತಿಯ ಕಲ್ಪನೆಯಲ್ಲವೆಂದೂ ಹಿಂದೆ ಪ್ರತಿಪಾದಿಸಲಾಗಿದೆ. ವಿದ್ಯೆ, ಪರಾಕ್ರಮ, ವಾಣಿಜ್ಯ, ಕೃಷಿ ಕಾರ್ಮಿಕ ವೃತ್ತಿಗಳು ಸಮಾಜದ ರಕ್ಷಣೆಗೆ ಅತ್ಯಾವಶ್ಯಕವಾದ ಧರ್ಮಗಳೆಂದೂ ಈ ಧಾರ್ಮಿಕ ವೃತ್ತಿಗಳ ಸಂರಕ್ಷಣೆಗಾಗಿ ವರ್ಣ ವಿಭಾಗವು ಸಹಜವಾಗಿ ವ್ಯವಸ್ಥಿತವಾಯಿತೆಂದೂ ನಿರೂಪಿಸಿದೆ. ಜಾತಿ ವಿಭಾಗವನ್ನು ಪಡೆಯದ ದೇಶಗಳಲ್ಲಿಯೂ ಒಂದಲ್ಲ ಒಂದು ವಿಧದಲ್ಲಿ ಈ ವೃತ್ತಿಗಳೂ ವಂಶಾನುಕ್ರಮವನ್ನು ತಳೆದು ಉಳಿದುಕೊಂಡವು.

ವೃತ್ತಿಯಿಂದಲೇ ವರ್ಣವಿಭಾಗವಾಯಿತೆಂದು ಹೇಳುವುದಾದರೆ ಪುರುಷ ಸೂಕ್ತದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಪರಮಪುರುಷನಿಂದ ಹುಟ್ಟಿದರೆಂದು ಹೇಳಿರುವುದು ಹೇಗೆ ಹೊಂದುತ್ತದೆ ? ಮತ್ತು **' ವಿದ್ಯಾ ತಪಶ್ಚ ಯೋನಿಶ್ಚ ತ್ರಯಂ ಬ್ರಾಹ್ಮಣ ಕಾರಣಂ '** ಇತ್ಯಾದಿ ವಚನಗಳ ಗತಿ ಏನು? ಇತ್ಯಾದಿ ಪ್ರಶ್ನೆಗಳು ಏಳುತ್ತವೆ . ಅವುಗಳಿಗೆ ಸಮಾಧಾನವೇನು? ನಿಜ. ಈ ಸೃಷ್ಟಿ ಅನಾದಿಯಾದದ್ದು . ಇನ್ನೂರು ಕೋಟಿ ವರ್ಷಗಳ

ಹಿಂದೆ 'ಬಾಂ ' ಎಂದು ಒಂದು ಅಂಡವು ಒಡೆದು ಸೃಷ್ಟಿಯಾಯಿತೆನ್ನುವುದು ಬರೀ ಊಹೆಯ ಮಾತು. ಅಂಡವೇ ಹೇಗೆ ಹುಟ್ಟಿತು ? ಯಾವಾಗ ಹುಟ್ಟಿತು ? 'ಬಾಂ ' ಎಂದು ಒಡೆಯಲು ನಿಮಿತ್ತವೇನು ? ಯಾರು ಒಡೆದರು ? ಅದಕ್ಕೂ ಹಿಂದೆ ಏನಿತ್ತು ? ಅದಕ್ಕೂ ಹಿಂದೆ ? ಇತ್ಯಾದಿ ಪ್ರಶ್ನೆಗಳ ಸರಮಾಲೆಗೆ ಉತ್ತರವೇನು ? ಎಂದು ನಾವು ಕೇಳಲಾರೆವೆ ? ಆದ್ದರಿಂದ ತಾರ್ಕಿಕರೇ ಮೊದಲಾದ ಸಕಲ ಶಾಸ್ತ್ರಕಾರರೂ ಸೃಷ್ಟಿಯು ಅನಾದಿಯೆಂದು ಒಪ್ಪಿದ್ದಾರೆ. ಹಾಗೆಯೇ ಕರ್ಮಜನ್ಯವಾದ ಪಾಪಪುಣ್ಯಗಳೂ ಅನಾದಿ. ಸಂಸಾರವೂ ಅನಾದಿ. ವೃತ್ತಿ ವಿಭಾಗದಿಂದಾದ ಜಾತಿಗಳು ಅನಾದಿಯಾಗಿದ್ದು ಅವರವರ ಜನ್ಮಾಂತರೀಯ ಸಂಸ್ಕಾರಗಳಿಂದ ಅನುರೂಪವಾದ ಜಾತಿಯಲ್ಲಿ ಹುಟ್ಟುತ್ತಾರೆ. ಇದನ್ನೇ ಪುರುಷಸೂಕ್ತ ಮೊದಲಾದವು ಪ್ರತಿಪಾದಿಸುತ್ತವೆ. ಇದೇ ಸಮೀಚೀನವಾದ ಸಮಾಧಾನ. ಪಾಪಪುಣ್ಯಗಳನ್ನು ಅವಶ್ಯ ಒಪ್ಪಲೇಬೇಕಾದ ಸಂಸಾರಗತಿಯಲ್ಲಿ ಆದಿಯನ್ನು ಹೇಳಲು ಸಾಧ್ಯವೇ ಇಲ್ಲ. ಜಾತಿ ವಿಭಾಗ ಪ್ರಶ್ನೆ ಇರಲಿ, ಜೀವಿಗಳಲ್ಲಿ ಗಂಡು, ಹೆಣ್ಣು, ಮನುಷ್ಯ, ಮೃಗ, ಹಕ್ಕಿ, ಹುಳು, ಬಡವ, ಶ್ರೀಮಂತ, ರೋಗಿ, ಆರೋಗ್ಯಶಾಲಿ ಇತ್ಯಾದಿ ವಿಭಾಗವು ಹೇಗಾಯಿತು ? ಕರ್ಮನಿಮಿತ್ತವಾಗಿ ವಿಭಾಗವಾಯಿತು ಎಂಬುದೇ ಉತ್ತರವಾಗುತ್ತದೆ. ಕರ್ಮವು ಯಾವಾಗ ಆರಂಭವಾಯಿತು. ದೇಹವಿಲ್ಲದೇ ಕರ್ಮವಿಲ್ಲ. ಕರ್ಮವಿಲ್ಲದೇ ದೇಹವು ಹುಟ್ಟುವುದಿಲ್ಲ. ಇದಕ್ಕೆ ಆದಿ ಯಾವುದು? ಕರ್ಮನಿಮಿತ್ತವಾಗಿಯೇ ಮೇಲ್ಕಂಡ ವಿಭಾಗಗಳಿವೆಯೆಂದು ಹೇಳಲೇಬೇಕು. ಹಾಗೆಯೇ ವೃತ್ತಿನಿಮಿತ್ತವಾಗಿ ಜಾತಿ ವಿಭಾಗವೆಂದು ಹೇಳುತ್ತೇವೆ. ಆಯಾ ದೇಹದಲ್ಲಿ ಮಾಡಿದ ಕರ್ಮಾನುಗುಣವಾಗಿ ಮುಂದಿನ ಜನ್ಮದಲ್ಲಿ ಗಂಡು, ಹೆಣ್ಣು ಇತ್ಯಾದಿ ಜನ್ಮ ಬರುತ್ತದೆ. ಆಯಾ ಜಾತಿಯಲ್ಲಿ ಮಾಡಿದ ಕರ್ಮಾನುಗುಣವಾಗಿ ಮುಂದಿನ ಜನ್ಮದಲ್ಲಿ ಬೇರೆ ಬೇರೆ ಜಾತಿಯಲ್ಲಿ ಹುಟ್ಟಬೇಕಾಗುತ್ತದೆ. ಬ್ರಾಹ್ಮಣನು ಜನ್ಮಾಂತರದಲ್ಲಿ ಶೂದ್ರನಾಗಬಹುದು. ಶೂದ್ರನೂ ಬ್ರಾಹ್ಮಣನಾಗಬಹುದು.

ಭರದ್ವಾಜನು ಭೃಗುಮುನಿಯನ್ನು ಕುರಿತು ಹೀಗೆ ಹೇಳುತ್ತಾನೆ '' ಬ್ರಾಹ್ಮಣಾದಿ ನಾಲ್ಕು ವರ್ಣಗಳ ವಿಭಾಗಕ್ಕೆ ಕಾರಣವೇನು ? ಬ್ರಾಹ್ಮಣನ ವರ್ಣ ಬಿಳುಪು. ಕ್ಷತ್ರಿಯನ ವರ್ಣ ಕೆಂಪು. ವೈಶ್ಯನದು ಹಳದಿ. ಶೂದ್ರನದು ಕಪ್ಪು ಎಂದು ಹೇಳಿದಿರಲ್ಲ. ಎಲ್ಲ ಜಾತಿಯಲ್ಲಿ ಎಲ್ಲ ಮೈ ವರ್ಣದವರೂ ಇದ್ದಾರೆ. ವರ್ಣ ಸಂಕರವಾಗಿ ಬಿಟ್ಟಿದೆಯಲ್ಲ. ಎಲ್ಲ ಜಾತಿಯವರಿಗೂ ಕಾಮ, ಕ್ರೋಧ, ಭಯ, ಲೋಭಗಳಿವೆ. ಬೆವರು, ಮಲ, ಮೂತ್ರ, ಶ್ಲೇಷ್ಮ, ರಕ್ತ ಮುಂತಾದವು ಸಮಾನವಾಗಿವೆ. ಎಲ್ಲರ ದೇಹಗಳೂ ಕಶ್ಮಲ ವಸ್ತುಗಳನ್ನು ಸುರಿಸುತ್ತವೆ. ಹೀಗಿರುವಾಗ ಯಾವ ಕಾರಣದಿಂದ ಈ ಜಾತಿ ವಿಭಾಗ ? ''
ಅದಕ್ಕೆ ಭೃಗು ಮುನಿಯು ಹೇಳಿದ್ದೇನೆಂದರೆ -

**ನ ವಿಶೇಷೋಽಸ್ತಿ ವರ್ಣಾನಾಂ ಸರ್ವಂಬ್ರಾಹ್ಮಮಿದಂ ಜಗತ್ ।**
**ಬ್ರಹ್ಮಣಾ ಪೂರ್ವಸೃಷ್ಟಂ ಹಿ ಕರ್ಮಭಿರ್ವರ್ಣತಾಂ ಗತಮ್ ॥**

'' ಬಿಳುಪು ಮುಂತಾದ ಬಣ್ಣಗಳಿಂದ ಜನರಲ್ಲಿ ವಿಶೇಷವೇನೂ ಇರುವುದಿಲ್ಲ. ಈ ಜಗತ್ತಿನಲ್ಲಿ ಜನತೆಯಲ್ಲವೂ ಬ್ರಾಹ್ಮಣ ವರ್ಗವಾಗಿಯೇ ಹುಟ್ಟಿದೆ. ಹಿಂದೆ ಬ್ರಹ್ಮನು ಸೃಷ್ಟಿಸಿದ ಈ ಬ್ರಾಹ್ಮಣ ವರ್ಗವು ಕರ್ಮಗಳಿಂದ ಬೇರೆ ಬೇರೆ ವಿಭಾಗವನ್ನು ಪಡೆಯಿತು. ( ಮೋಕ್ಷಧರ್ಮಪರ್ವ - ಅಧ್ಯಾಯ ೧೮೮) ಅನಂತರ ಯಾವ ಯಾವ ಕರ್ಮಗಳನ್ನು ಮಾಡಿ ಬೇರೆ ಬೇರೆ ಜಾತಿಯವರಾದರು ಎಂದು ವಿವರಣೆ ಇದೆ. ಬ್ರಾಹ್ಮಣಾದಿಗಳಿಗೆ ಬಿಳುಪು, ಕೆಂಪು ಇತ್ಯಾದಿ ವರ್ಣಗಳನ್ನು ಹೇಳಿದ್ದು ಆ ಜನರ ಮೈಬಣ್ಣವಲ್ಲ. ವರ್ಣವೆಂದರೆ ಇಲ್ಲಿ ಗುಣಕರ್ಮಗಳ ಅರ್ಹತಾನಿಮಿತ್ತವಾದ ಸ್ಥಾನ. ಬಿಳುಪು ಕೆಂಪು, ಹಳದಿ, ಕಪ್ಪು, ಎಂಬಿವು ಕ್ರಮವಾಗಿ ಪ್ರಥಮಾ , ದ್ವಿತೀಯಾದಿ ಸ್ಥಾನಗಳ ಸಂಕೇತ ಎಂಬುದೂ ಇಲ್ಲಿ ಸ್ಪಷ್ಟವಾಗಿ ತಿಳಿದುಬರುತ್ತದೆ. ಈ ವರ್ಣ ವಿಭಾಗವು ಒಂದು ರೀತಿಯ (Division of labour) ಉದ್ಯೋಗಗಳ ವಿಂಗಡಣೆ. ಭಾರತದಲ್ಲಿದ್ದ ಈ ಪದ್ಧತಿಯು ಅತ್ಯಂತ ವೈಜ್ಞಾನಿಕವಾದದ್ದೆಂದು ಮಹಾತ್ಮಾ ಗಾಂಧೀಜಿಯವರು ' **ಯಂಗ್ ಇಂಡಿಯಾ** ' ಎಂಬ ಪತ್ರಿಕೆಯಲ್ಲಿ ಒಮ್ಮೆ ಬರೆದಿದ್ದರು. ನಮ್ಮ ದೇಶವು ಪರಕೀಯರ ಆಕ್ರಮಣಕ್ಕೆ ಒಳಗಾದದ್ದು ಜಾತಿ ವಿಭಾಗದಿಂದಲ್ಲ. ಆ ಕಾಲದಲ್ಲಿದ್ದ ರಾಜರ ಒಳಜಗಳ, ಸ್ವಾರ್ಥತೆ, ದುರಾಸೆಗಳಿಂದ ಆಕ್ರಮಣಕ್ಕೆ ಒಳಗಾಯಿತು. ಜಾತಿ ನಿಮಿತ್ತವಾಗಿ ಈ ದೇಶದಲ್ಲಿ ದಂಗೆಗಳಾದದ್ದಕ್ಕೆ ಇತಿಹಾಸದಲ್ಲಿ ಒಂದು ಉದಾಹರಣೆಯೂ ದೊರೆಯಲಾರದು. ಜಾತಿವಿಭಾಗವಿಲ್ಲದ ಪರ್ಷಿಯಾ, ಈಜಿಪ್ಟ್ , ಗ್ರೀಸ್, ರೋಮ್‌ಗಳಲ್ಲಿದ್ದ ಪ್ರಾಚೀನ ಸಂಸ್ಕೃತಿಯೂ ಅವರ ಮತಗಳೂ ಹೇಳಹೆಸರಿಲ್ಲದಂತೆ ನಾಶವಾದವು. ವೈದಿಕ ಸಂಸ್ಕೃತಿಯೂ, ಮೂಲ ಶಾಸ್ತ್ರೀಯ ಗ್ರಂಥಗಳೂ ಈ ದೇಶದಲ್ಲಿ ಇಂದಿಗೂ ಉಳಿದುಕೊಂಡು ಬಂದಿವೆಯೆಂಬುದನ್ನು ಗಮನಿಸಬೇಕು.

ಇರಲಿ, ನಾವೀಗ ಪರಿಶೀಲಿಸಬೇಕಾದದ್ದು ನಮ್ಮ ಬ್ರಾಹ್ಮಣ್ಯ. ಪಾಶ್ಚಾತ್ಯ ನಾಗರಿಕತೆಯ ವ್ಯಾಮೋಹದಿಂದಲೋ ಅಥವಾ ಕಾಲ ಮಹಿಮೆಯಿಂದಾದ ರಾಜಕೀಯಸ್ಥರ ಡೊಂಬರಾಟದಿಂದಲೋ, ಬ್ರಾಹ್ಮಣ್ಯವು ಸಂಪೂರ್ಣವಾಗಿ ಶಿಥಿಲವಾಗುತ್ತ ಬಂದಿತು. ನಮ್ಮ ಭಾರತೀಯರೇ ಎಂದರೆ ಹಿಂದೂಗಳೇ ಬ್ರಾಹ್ಮಣ್ಯ ವಿರೋಧಿಗಳಾಗಿ ವೈದಿಕ ಸಂಸ್ಕೃತಿಯನ್ನೇ ದೂಷಿಸುತ್ತಿದ್ದಾರೆ. ಈ ದೂಷಕರಲ್ಲಿ ವಿಪ್ರ ಜಾತಿಯಲ್ಲಿ ಹುಟ್ಟಿದವರೇ ವಿದೂಷಕರಾಗಿ ಸೇರಿಕೊಂಡಿರುವುದೊಂದು ವೈಪರೀತ್ಯವೇ. ಈ ಪರಿಸ್ಥಿತಿಗೆ ಕಾರಣ ಯಾವುದು ? ಯಾರು ಕಾರಣ ?

ಇವನ್ನು ಬಿಟ್ಟು ಸತ್ಯ ಶೋಧನೆಗಾಗಿ ವಿಚಾರ ಮಾಡಿದಾಗ ಈ ಬ್ರಾಹ್ಮಣನೇ

ವೈದಿಕ ಸಂಸ್ಕೃತಿಗೆ ಕೊಡಲಿಯಾಗಿ ಪರಿಣಮಿಸಿದ್ದಾನೆ ಎಂಬುದು ನಿಶ್ಚಿತವಾಗುತ್ತದೆ. ಈ ದೇಶದಲ್ಲಿ ಆಂಗ್ಲರ ಆಳ್ವಿಕೆ ಆರಂಭವಾದಾಗ ಅವರು ಮೊದಲು ಬಂಗಾಳ ರಾಜ್ಯದಲ್ಲಿ ಇಂಗ್ಲೀಷ್ ಶಾಲೆಗಳನ್ನು ತೆರೆದರು. ಇಂಗ್ಲೀಷ್ ಕಲಿತವರನ್ನು ಸರಕಾರೀ ಸೇವೆಗೆ ಸೇರಿಸಿಕೊಂಡರೆ ಆಡಳಿತವು ಸುಲಭವಾಗುತ್ತದೆಂಬುದು ಅವರ ಉದ್ದೇಶವಾಗಿತ್ತು. ಆ ಶಾಲೆಗಳಿಗೆ ಮೊದಲು ಸೇರಲಾರಂಭಿಸಿದವರು ಬ್ರಾಹ್ಮಣರು. ಇವರು ಬುದ್ಧಿಶಾಲಿಗಳಾದ್ದರಿಂದ ಇಂಗ್ಲೀಷನ್ನು ಸುಲಭವಾಗಿ ಕಲಿತು ಸರಕಾರಿ ನೌಕರಿಗೆ ಸೇರಲಾರಂಭಿಸಿದರು. ಗುಮಾಸ್ತರೋ , ಜವಾನರೋ ಆದವರು ಕ್ರಮೇಣ ಕಛೇರಿಯ ಅಧಿಕಾರಿಗಳಾದರು. ಧನಸಂಪಾದನೆಯಿಂದ ಸುಲಭವಾಗಿ ಜೀವನದ ದರ್ಜೆ ಏರತೊಡಗಿತು. ಹಣದ ಆಸೆ ಹೆಚ್ಚಿತು. ಎಲ್ಲೆಲ್ಲಿಯೂ ಇಂಗ್ಲೀಷ್ ಶಾಲೆಗಳಿಗೆ ಪ್ರೋತ್ಸಾಹವು ಅಧಿಕವಾಯಿತು. ಆಗ ಬಂಗಾಳ ಒಂದರಲ್ಲಿಯೇ ಸಾವಿರಾರು ವೈದಿಕ ಶಾಲೆಗಳು ಮುಚ್ಚಿಹೋದವು ಎಂಬುದನ್ನು ಇತಿಹಾಸವು ದಾಖಲಿಸಿದೆ.

ಈ ಸಾಂಕ್ರಾಮಿಕ ರೋಗವು ಕ್ರಮೇಣ ಇಡೀ ಭಾರತ ದೇಶವನ್ನು ವ್ಯಾಪಿಸಿತು. ಆಂಗ್ಲರ ವೈಜ್ಞಾನಿಕ ಆವಿಷ್ಕಾರಗಳು ನಮ್ಮವರ ವ್ಯಾಮೋಹವನ್ನೂ, ಆಸೆಯನ್ನೂ ಕೆರಳಿಸಿದವು. ಆಡಳಿತಗಾರರಿಗೆ ಬೇಕಾದದ್ದು ಅದೇ ಆದದ್ದರಿಂದ ಎಲ್ಲೆಲ್ಲಿಯೂ ಇಂಗ್ಲಿಷ್ ಶಾಲೆಗಳು ಹುಟ್ಟಿಕೊಂಡವು. ಆನಂತರ ವಿದ್ಯಾಭ್ಯಾಸವೆಂದರೆ ಇಂಗ್ಲಿಷನ್ನು ಕಲಿತು ಆಧುನಿಕ ವಿಜ್ಞಾನದಲ್ಲಿ ತರಬೇತಿಯನ್ನು ಪಡೆಯುವುದೇ ಎಂಬುದು ನಿಶ್ಚಿತವಾಯಿತು. ಅಲ್ಲಿಯವರೆಗೆ ಸರ್ವತ್ರ ಜನತೆಯ ಬಲದಿಂದಲೇ ನಡೆಯುತ್ತಿದ್ದ ವೈದಿಕ ಶಾಲೆಗಳು ಮುಚ್ಚಿಹೋದವು. ಇಷ್ಟನ್ನು ಗ್ರಹಿಸಿದರೆ ಈಗಿನ ವೈಪರೀತ್ಯವೂ ವೇದಶಾಸ್ತ್ರಗಳ ವಿಷಯದಲ್ಲಿ ಸಂಪೂರ್ಣ ಉಪೇಕ್ಷಾಭಾವವೂ ಹೇಗೆ ಬೆಳೆದವೆಂಬುದನ್ನು ಊಹಿಸಿ ತಿಳಿದುಕೊಳ್ಳಬಹುದು.

ಮುಸಲ್ಮಾನರ ಆಳ್ವಿಕೆಯಲ್ಲಿ ಹೀಗಾಗಲಿಲ್ಲ. ಅವರಲ್ಲಿ ಬಲಾತ್ಕಾರವೇ ಹೊರತು ತಂತ್ರಗಾರಿಕೆ ಇರಲಿಲ್ಲ. ಅವರು ಜಾತಿಯನ್ನು ಕೈಯಲ್ಲಿ ಹಿಡಿದು ರಾಜ್ಯಭಾರ ಮಾಡಲು ಬಯಸಿದರೇ ಹೊರತು ಲೇಖನಿಯನ್ನಲ್ಲ. ಅಲ್ಲದೇ ಅವರು ಯಾವ ವಿಜ್ಞಾನವನ್ನು ಜೊತೆಗೆ ತರಲಿಲ್ಲ. ಆ ಜನರಲ್ಲಿ ಗುಣಗ್ರಹಣವಿಲ್ಲದ್ದರಿಂದ ಈ ದೇಶದ ವಿದ್ಯೆಗೂ ನಾಗರಿಕತೆಗೂ ಮಿತ್ರರಾಗಲಿಲ್ಲ. ತಮ್ಮ ದಮನ ಕೃತ್ಯದಿಂದ ಸಮಸ್ತ ಹಿಂದೂಗಳ ವಿರೋಧವನ್ನು ಗಳಿಸಿಕೊಂಡರೇ ಹೊರತು ಅಂತರಂಗವನ್ನು ವ್ಯಾಪಿಸಲು ಸಮರ್ಥರಾಗಲಿಲ್ಲ.

ಇಂಗ್ಲೀಷರ ಆಳ್ವಿಕೆಯಲ್ಲಿ ಕೆರೆಗಳ ನಿರ್ಮಾಣ, ರಸ್ತೆ, ಸೇತುವೆ, ರೈಲುಮಾರ್ಗ, ವಾಣಿಜ್ಯ, ಕೈಗಾರಿಕೆಗಳು ಮೊದಲಾದ ದೇಶಹಿತ ಕಾರ್ಯಗಳು ನಡೆದವು.

ವಿದ್ಯಾಭಿವೃದ್ಧಿಗಾಗಿ ವಿಶ್ವವಿದ್ಯಾಲಯಗಳು ಸ್ಥಾಪಿತವಾದವು. ಪ್ರಕೃತದಲ್ಲಿ ಹೇಳಬೇಕಾದ್ದೇನೆಂದರೆ, ವಿವಿಧ ಇಲಾಖೆಗಳ ನಿರ್ಮಾಣದಿಂದ ಸರಕಾರೀ ನೌಕರಿಗಳ ಸಂಖ್ಯೆ ಹೆಚ್ಚಿತು. ಹಿಂದೆ ಹೇಳಿದಂತೆ ವಿಶೇಷವಾಗಿ ಬ್ರಾಹ್ಮಣರೇ ವಿದ್ಯೆಯಲ್ಲಿ ಮುಂದುವರಿದು ನೌಕರಿಗಳ ಆಸೆಗೆ ತುತ್ತಾದರು. ಹಣದ ಲೋಭವು ಪ್ರಬಲವಾಯಿತು. ಇದು ಅಂಟುಜಾಡ್ಯದಂತೆ ಇಡೀ ಬ್ರಾಹ್ಮಣಲೋಕವನ್ನೇ ವ್ಯಾಪಿಸಿತು. ಈ ಸಮಯದಲ್ಲಿ ವಿಜ್ಞಾನದ ಬಿರುಗಾಳಿ ಬೀಸತೊಡಗಿ ಧನಸಂಪಾದನೆಗೆ ವಿವಿಧ ವೃತ್ತಿಗಳನ್ನೂ ಉದ್ಯೋಗಗಳನ್ನೂ ಕಲ್ಪಿಸಿಕೊಟ್ಟಿತು. ಬ್ರಾಹ್ಮಣರು ತಮ್ಮ ಕುಲವೃತ್ತಿಯನ್ನು ಬಿಡತೊಡಗಿದರು. ವೇದಶಾಸ್ತ್ರಗಳ ಅಧ್ಯಯನವು ಮೂಲೆಗೆ ಸರಿಯತೊಡಗಿತು. ಆಚಾರ ಅನುಷ್ಠಾನಗಳು ಹಿಮ್ಮೆಟ್ಟಿದವು. ಧನಾರ್ಜನೆಯು ಸ್ಪರ್ಧೆಯ ರೂಪಕ್ಕೆ ತಿರುಗಿತು. ರೈಲು, ಬಸ್ಸುಗಳ ಸೌಕರ್ಯದಿಂದ ಧನನಿಮಿತ್ತವಾಗಿ ಅಲೆದಾಟ ಪ್ರಾರಂಭವಾಯಿತು. ಕ್ಷೇತ್ರಯಾತ್ರೆಗೆ ಬದಲಾಗಿ ಅರ್ಥಯಾತ್ರೆಗಳು ವಿಪುಲವಾದವು. ಈ ಬಗೆಯ ಯಾತ್ರಾರ್ಥಿಗಳ ಸೌಕರ್ಯಕ್ಕಾಗಿ ಬ್ರಾಹ್ಮಣರೇ ಹೋಟೇಲ್ಲುಗಳ ಉದ್ಯಮವನ್ನು ಕೈಗೊಂಡರು. ಅನ್ನ, ಆಹಾರಗಳ ಮಾರಾಟ ಅತ್ಯಂತ ನಿಷಿದ್ಧವಾದದ್ದೆಂದು ಧರ್ಮಶಾಸ್ತ್ರವು ಹೇಳಿದರೆ. ಹೇಳಿಕೊಳ್ಳಲು '' **ಅರ್ಥೋಽಸ್ತು ನಃ ಕೇವಲಮ್** '' '' **ಜಾತಿರ್ಯಾತು ರಸಾತಲಮ್**''. ವಿಜ್ಞಾನ ಶಾಸ್ತ್ರದ ಅರೆಬರೆಯ ಅಧ್ಯಯನದ ಫಲವಾಗಿ ನಾಸ್ತಿಕತೆ ತಲೆ ಎತ್ತಿತು. ವೇಷಭೂಷಗಳು ಬದಲಾಗತೊಡಗಿದವು. ಇತರ ರೋಗಗಳು ಮನುಷ್ಯನ ದೇಹವನ್ನು ವ್ಯಾಪಿಸಿ ದೇಹವನ್ನು ಬಲಹೀನವಾಗಿ ಮಾಡುತ್ತವೆ. ಈ ಧನಲೋಭವೆಂಬ ರೋಗವಾದರೋ ಮನುಷ್ಯನ ಚಿಂತನ ಶಕ್ತಿಯನ್ನೇ ಕೊರೆದು ಕುಗ್ಗಿಸಿಬಿಡುತ್ತವೆ.

ಮಹಾಭಾರತದಲ್ಲೊಂದು ಕಥೆ ಬರುತ್ತದೆ. ಒಮ್ಮೆ ತೀವ್ರವಾದ ಬರಗಾಲವು ಬಂದಿತು. ಅನ್ನನೀರುಗಳಿಗೂ ತೊಂದರೆಯಾಗಿ ಜನರು ಕಂಗೆಟ್ಟರು. ಆ ಸಮಯದಲ್ಲಿ ಅತ್ರಿ, ವಸಿಷ್ಠ, ವಿಶ್ವಾಮಿತ್ರ, ಜಮದಗ್ನಿ ಮೊದಲಾದ ಕೆಲವು ಋಷಿಗಳು ಎಲ್ಲಿಗೋ ಹೋಗುತ್ತಾ ಒಬ್ಬ ರಾಜನ ರಾಜಧಾನಿಯ ಮೂಲಕ ಹಾದು ಹೋಗುತ್ತಿದ್ದರು. ರಾಜನಿಗೆ ಆ ಋಷಿಗಳು ಬಂದಿರುವುದು ಗೊತ್ತಾಗಿ, ಅವರ ಬಳಿ ಹೋಗಿ ತನ್ನ ಅರಮನೆಗೆ ಬಂದು ಸತ್ಕಾರವನ್ನು ಸ್ವೀಕರಿಸಬೇಕೆಂದು ಆತನು ಕೇಳಿಕೊಂಡನು. ಋಷಿಗಳು ಒಪ್ಪಲಿಲ್ಲ. ಪ್ರಜೆಗಳು ಹೊಟ್ಟೆಗಿಲ್ಲದೇ ನರಳುತ್ತಿರುವಾಗ ಈ ಅರಮನೆಯ ಸತ್ಕಾರ ನಮಗೇಕೆಂದು ರಾಜನ ಪ್ರಾರ್ಥನೆಯನ್ನು ತಳ್ಳಿ ಹಾಕಿದರು. ಆತನು ಕೊಡಲು ಬಂದ ಯಾವ ಕಾಣಿಕೆಯೂ ಬೇಡವೆಂದು ಹೇಳಿ ಮುಂದೆ ಹೊರಟರು. ರಾಜನು ಖಿನ್ನನಾಗಿ ಈ ವಿಷಯವನ್ನು ತನ್ನ ಮಂತ್ರಿಗೆ ತಿಳಿಸಿದನು. ಮಂತ್ರಿಯು '' ಪ್ರಭು, ಚಿಂತಿಸಬೇಡಿ. ನಾನೊಂದು ಉಪಾಯವನ್ನು ಮಾಡಿ ಈ ಕಾಣಿಕೆಗಳನ್ನು ಋಷಿಗಳಿಗೆ ಮುಟ್ಟಿಸುತ್ತೇನೆ''

ಎಂದು ಹೇಳಿ ಕೆಲವು ಹಣ್ಣುಗಳನ್ನು ತರಿಸಿ ಅವುಗಳಲ್ಲಿ ಚಿನ್ನದ ನಾಣ್ಯ, ವಜ್ರ ಮುಂತಾದವನ್ನು ತೂರಿಸಿದನು. ಆನಂತರ ಆ ಹಣ್ಣುಗಳನ್ನು ಒಯ್ದು '' ಈ ಹಣ್ಣುಗಳನ್ನಾದರೂ ಸ್ವೀಕರಿಸಬೇಕು'' ಎಂದು ಋಷಿಗಳನ್ನು ಪ್ರಾರ್ಥಿಸಿದನು. ಆಗ ಋಷಿಗಳು ಒಂದೊಂದು ಹಣ್ಣನ್ನು ತೆಗೆದುಕೊಂಡರು. ಕೈಯಲ್ಲಿ ಹಿಡಿದುಕೊಂಡಾಗ ಏಕೋ ಭಾರವಾಗಿರುವುದೆಂದು ತೋರಿತು. ಕಾರಣವೇನಿರಬಹುದೆಂದು ಹೊಳೆಯಿತು. ಎಲ್ಲರೂ '' ಓಹೋ ! ಮಂತ್ರಿ, ಈ ಹಣ್ಣುಗಳು ಭಾರವಾಗಿರುವುದೇಕೆಂದು ಗೊತ್ತಾಯಿತು. ನಮಗೆ ಬೇಡ! ಬೇಡ !'' ಎಂದು ನುಡಿದು ಎಲ್ಲವನ್ನೂ ಹಿಂದಕ್ಕೆ ಕೊಟ್ಟರು. ''ಪ್ರಜೆಗಳು ಹೊಟ್ಟೆಗಿಲ್ಲದೆ ನರಳುತ್ತಿರುವಾಗ ನಿಮ್ಮ ರಾಜನು ತಿಂದು ತೇಗುತ್ತಾ ಸುಖವಾಗಿದ್ದಾನೊ?'' ಎಂದು ಹಂಗಿಸಿ ಮುಂದೆ ಹೊರಟು ಹೋದರಂತೆ. ಇದು ಬ್ರಾಹ್ಮಣನಲ್ಲಿರಬೇಕಾದ ನಿಃಸ್ಪೃಹತೆ. ಲೋಭರಾಹಿತ್ಯವೆಂದರೆ ಇದು.

ಚಾಣಕ್ಯನು ಕೌಟಿಲ್ಯನೆಂದೇ ಪ್ರಸಿದ್ಧನಾಗಿದ್ದಾನೆ. ಅವನು ದುಷ್ಟರಾದ ನಂದರನ್ನು ಕುಟಿಲೋಪಾಯಗಳಿಂದ ನಾಶಮಾಡಿ ಚಂದ್ರಗುಪ್ತನಿಗೆ ಸಾಮ್ರಾಜ್ಯಪಟ್ಟಾಭಿಷೇಕವನ್ನು ಮಾಡಿಸಿದನೆಂಬುದು ಇತಿಹಾಸ ಪ್ರಸಿದ್ಧವಾದ ಸಂಗತಿ. ಆತನು ಪ್ರಧಾನಮಂತ್ರಿಯಾಗಿದ್ದಾಗಲೂ ನಗರದ ಹೊರಗೆ ಒಂದು ಗುಡಿಸಲಿನಲ್ಲಿ ವಾಸ ಮಾಡುತ್ತಿದ್ದನು. ಮುದ್ರಾರಾಕ್ಷಸ ಎಂಬ ನಾಟಕದಲ್ಲಿ ವಿಶಾಖದತ್ತ ಎಂಬ ಕವಿಯು ಆ ಗುಡಿಸಲನ್ನು ಹೀಗೆ ವರ್ಣಿಸುತ್ತಾನೆ -

**ಉಪಲಶ ಕಲಮೇತದ್‌ಭೇದಕಂ ಗೋಮಯಾನಾಂ ।**
**ವಟುಭಿರುಪಹೃತಾನಾಂ ಬರ್ಹಿಷಾಂ ಸ್ತೂಪಮೇತತ್ ॥**
**ಶರಣಮಪಿ ಸಮಿದ್ಭಿಃ ಶುಷ್ಯಮಾಣಾಭಿರಾಭಿಃ ।**
**ವಿನಮಿತ ಪಟಲಾಂತಂ ದೃಶ್ಯತೇ ಜೀರ್ಣ ಕುಡ್ಯಮ್॥** (ಕವಿ ವಿಶಾಖದತ್ತ)

'' ಆಹಾ! ಮಹಾರಾಜಾಧಿರಾಜ ಚಂದ್ರಗುಪ್ತನ ಪ್ರಧಾನಮಂತ್ರಿಯ ವೈಭವ ಇದು. ಇದು ಗೋಮಯವಾದ ಬೆರಣಿಗಳ ರಾಶಿ. ಅದನ್ನೊಡೆಯುವ ಕಲ್ಲು ಇದು. ಶಿಷ್ಯರಾದ ವಟುಗಳು ತಂದು ತುಂಬಿದ ದರ್ಭೆಗಳ ಕಟ್ಟು ಇವು. ಒಣಗುವುದಕ್ಕಾಗಿ ಮನೆಯ ಮೇಲೆ ಹರಡಿದ ಸಮಿತ್ತುಗಳ ಹೊರೆಗಳಿಂದ ಗುಡಿಸಲಿನ ಸೂರು ಜರಿದು ಹೋಗಿದೆ. ಸುತ್ತಲೂ ಮುರುಕು ಗೋಡೆ! ''

ಇಂತಹ ನಿಃಸ್ಪೃಹತೆ ಇದ್ದುದರಿಂದಲೇ ಚಾಣಕ್ಯನು ಮಹಾರಾಜನನ್ನು ಸಹ ''ಶೂದ್ರ, ಏ ಶೂದ್ರ '' ಎಂದು ಸಂಬೋಧಿಸಲು ಶಕ್ತನಾಗಿದ್ದ. ಈ ಕಾಲದಲ್ಲಾದರೋ ಬ್ರಾಹ್ಮಣನೇ ಶೂದ್ರನಾಗಿದ್ದಾನೆ. ಶೂದ್ರನೇ ಈತನನ್ನು ಶೂದ್ರನೆಂದು ಕರೆದರೆ

ತಪ್ಪೇನು ? ಎಂಬಂತಾಗಿದೆ.

''**ಅಪ್ರತಿಗ್ರಹ ರುಚಿಃಸ್ಯಾದ್ವಿಜಃ**'' ಎಂದು ಧರ್ಮಸೂತ್ರ ಹೇಳುತ್ತದೆ. ಬ್ರಾಹ್ಮಣನು ಪ್ರತಿಗ್ರಹದಲ್ಲಿ -ದಾನವನ್ನು ಸ್ವೀಕರಿಸುವುದರಲ್ಲಿ ಆಸಕ್ತಿಯನ್ನು ಇರಿಸಿಕೊಳ್ಳಬಾರದು ಎಂದು ಇದರ ಅರ್ಥ. ಬ್ರಾಹ್ಮಣನಿಗಿರುವ ಸಂಪಾದನೆಯ ಮಾರ್ಗ ಮೂರು - ಯಾಜನ, (ಪೌರೋಹಿತ್ಯ), ಅಧ್ಯಾಪನ, ಪ್ರತಿಗ್ರಹ. ಧನ ಸಂಪಾದನೆಗೆ ಇಷ್ಟು ಅಲ್ಪಾವಕಾಶಗಳಿದ್ದರೂ ಅಪ್ರತಿಗ್ರಹ ರುಚಿಯಾಗಿರಬೇಕೆಂದು ಉಪದೇಶವಿದೆ. ಶ್ರಾದ್ಧಕ್ಕಾಗಿ ಯಾರಿಂದಲಾದರೂ ನಿಮಂತ್ರಣ ಬಂದಾಗ ಒಪ್ಪಿಕೊಳ್ಳಲೇಬೇಕೆಂದೂ, ಇಲ್ಲವೆನ್ನಕೂಡದೆಂದೂ ಧರ್ಮಶಾಸ್ತ್ರವು ವಿಧಿಸುತ್ತದೆ. ಜೈಮಿನಿ ಋಷಿಗಳು ನಿಮಂತ್ರಣ ಬಂದೀತೆಂದು ಹೆದರಿ ಹಿಮಾಲಯಕ್ಕೆ ಹೋಗಿ ನೆಲೆಸಿದ್ದರಂತೆ. ಒಂದು ಪೌರಾಣಿಕ ಶ್ಲೋಕ ಹೀಗಿದೆ-

**ಬ್ರಾಹ್ಮಣಸ್ಯ ತು ದೇಹೋಽಯಂ ಸುಖಭೋಗಾಯ ನೇಷ್ಯತೇ ।**
**ಇಹಕ್ಲೇಶಾಯ ಮಹತೇ ಪ್ರೇತ್ಯಾನಂತ ಸುಖಾಯ ಚ ॥**

'' ಬ್ರಾಹ್ಮಣನಿಗೆ ಈ ದೇಹವು ಸುಖಭೋಗಕ್ಕಾಗಿ ಬಂದದ್ದಲ್ಲ. ಈ ಜನ್ಮದಲ್ಲಿ ಮಹತ್ತರವಾದ ಕಷ್ಟವನ್ನು ಅನುಭವಿಸುದಕ್ಕಾಗಿಯೂ ಪರಲೋಕದಲ್ಲಿ ಶಾಶ್ವತ ಸುಖವನ್ನು ಅನುಭವಿಸುವುದಕ್ಕಾಗಿಯೂ ಬಂದಿದೆ.''

ಇದರ ತಾತ್ಪರ್ಯವೇನೆಂದರೆ, ಧರ್ಮಶಾಸ್ತ್ರದಲ್ಲಿ ಬ್ರಾಹ್ಮಣನಿಗೆ ಹಲವಾರು ವಿಧಿ ನಿಷೇಧಗಳನ್ನು ಹೇಳಿದೆ. ಇತರ ವರ್ಣದವರಿಗೆ ಅಷ್ಟು ವಿಧಿ ನಿಷೇಧಗಳಿಲ್ಲ. ಬ್ರಾಹ್ಮಣನು ಧನಸಂಪಾದನೆ ಮಾಡುವುದಕ್ಕಾಗಲಿ, ಸುಖವನ್ನು ಅನುಭವಿಸುದಕ್ಕಾಗಲಿ ಅವಕಾಶವೇ ಇಲ್ಲದಂತೆ ಅವನ ಕೈಕಾಲುಗಳನ್ನು ಧರ್ಮಶಾಸ್ತ್ರವು ಬಿಗಿದು ಕಟ್ಟಿದೆ - ಎಂದು ಹೇಳಿದರೆ ಅತಿಶಯೋಕ್ತಿಯಲ್ಲ. '' ತಮ್ಮ ಸೌಖ್ಯಕ್ಕಾಗಿ ಬ್ರಾಹ್ಮಣರು ಧರ್ಮಶಾಸ್ತ್ರವನ್ನು ಬರೆದುಕೊಂಡಿದ್ದಾರೆ - ಎನ್ನುವ ಆಪಾದನೆ ಹುರುಳಿಲ್ಲದ್ದು. ಶ್ರದ್ಧೆಯಿಂದ ಧಾರ್ಮಿಕ ವಿಧಿಯನ್ನು ಪಾಲಿಸುವುದಾದರೆ ಸುಖಭೋಗವು ಆತನಿಗೆ ಕನಸಾದೀತು. ಆದರೆ ಅದರ ಅನುಷ್ಠಾನದಿಂದ ಶ್ರೇಯಸ್ಸು ನಿಶ್ಚಯವಾಗಿ ಇದೆ. ಆತ್ಮಜ್ಞಾನವೇ ಮನುಷ್ಯನಿಗೆ ಪರಮ ಶ್ರೇಯಸ್ಸು. ಅಂತಹ ಆತ್ಮಜ್ಞಾನದ ಸಂಪಾದನೆಗಾಗಿ ಚಿತ್ತಶುದ್ಧಿಯಾಗಬೇಕು. ಅದಕ್ಕಾಗಿ ವಿಧಿನಿಷೇಧಗಳನ್ನು ಪಾಲಿಸಬೇಕು ಎಂದು ಅಭಿಪ್ರಾಯ.

**ಇಂತಹ ಉಪದೇಶವು ಈ ಕಾಲದವರಿಗೆ ಎಂದಿಗೂ ಹಿಡಿಸುವುದಿಲ್ಲ. ನಾವು ತಪ್ಪು ದಾರಿಯಲ್ಲಿ ಬಹುದೂರ ಸಾಗಿ ಬಂದಿದ್ದೇವೆ. ಕಾರ್ಯ ಸಾಧ್ಯವಲ್ಲದ ಮತ್ತು ಫಲಕಾರಿಯಲ್ಲದ ಬೋಧನೆಯು ಸರ್ವಥಾ ವ್ಯರ್ಥವೇ. ಆತ್ಮಾವಲೋಕನವನ್ನು**

ಮಾಡಿಕೊಂಡು ಕಾರ್ಯಸಾಧ್ಯವಾದದ್ದು ಎಷ್ಟು ಎಂಬುದನ್ನೀಗ ಪರಿಶೀಲಿಸಬಹುದು.

''ಬ್ರಾಹ್ಮಣನಲ್ಲಿರಬೇಕಾದದ್ದು ವೇದಾಧ್ಯಯನ, ಶಾಸ್ತ್ರಾಭ್ಯಾಸ, ಸತ್ಯ, ಅಹಿಂಸೆ, ಶಮ ದಮಾದಿ ಸದ್ಗುಣಗಳು. ಸ್ನಾನ, ಸಂಧ್ಯಾವಂದನೆ, ಅಗ್ನಿಹೋತ್ರ, ಜಪ ಮೊದಲಾದ ಅನುಷ್ಠಾನಗಳು. ತ್ರಿಕರಣಶುದ್ಧಿ. ಯಾಜನ, ಅಧ್ಯಾಪನ ಪ್ರತಿಗ್ರಹ ಇವು ಮೂರೇ ಧನಾರ್ಜನೆಯ ವೃತ್ತಿಗಳು. ಆಪತ್ಕಾಲದಲ್ಲಿ ಮಾತ್ರ ಕೃಷಿ ವಾಣಿಜ್ಯಗಳು, ವಿಹಿತ ಆಹಾರ ನಿಯಮ ಉಂಟು. ನೌಕರಿಯು ಸರ್ವಥಾ ವರ್ಜನೀಯ. ಅದು ಶ್ವವೃತ್ತಿ (ನಾಯಿಯ ನಡತೆ ) ಎಂದು ನಿಂದಿತವಾಗಿದೆ. ಇವಿಷ್ಟು ದಿಕ್‌ಸೂಚಿಗಳಾದ ಬ್ರಾಹ್ಮಣ ಲಕ್ಷಣಗಳು. ಎಲ್ಲವನ್ನೂ ಇಲ್ಲಿ ಪಟ್ಟಿ ಮಾಡುವುದು ಆಗತಕ್ಕದ್ದಲ್ಲ. ಈಗ ಇವನ್ನು ಪರಿಪಾಲಿಸತಕ್ಕವನು ಯಾರು ? ಇವನ್ನು ತ್ಯಜಿಸಲು ಲೋಭ, ಆಲಸ್ಯ, ಉಪೇಕ್ಷೆಗಳಲ್ಲದೆ ಇನ್ನಾವ ನಿಮಿತ್ತವಿದೆ? ಧನಲೋಭವು ಪ್ರಬಲವಾದರೆ ಧರ್ಮಲಾಭವು ಸಹಜವಾಗಿ ಮರೆಯಾಗುತ್ತದೆ. ಈಗ ಎಲ್ಲ ವಿಧದಲ್ಲಿಯೂ ಬ್ರಾಹ್ಮಣ ಜಾತಿಯವರು ಶೂದ್ರಾಚಾರ ತತ್ಪರರಾಗಿದ್ದಾರೆ. ಹಳ್ಳಿಯಲ್ಲಿರುವ ಶೂದ್ರನೂ ಬೆಳಿಗ್ಗೆ ಮುಖ ತೊಳೆದು ಪೂರ್ವದಿಕ್ಕಿಗೆ ತಿರುಗಿ ಸೂರ್ಯನಿಗೆ ನಮಸ್ಕರಿಸುವುದನ್ನು ಈಗಲೂ ಕಾಣಬಹುದು. ಅಂತಹ ಪ್ರವೃತ್ತಿಯೂ ಈಗ ಬ್ರಾಹ್ಮಣನಲ್ಲಿ ಉಳಿದಿಲ್ಲ. ಅತ್ಯಂತ ಕನಿಷ್ಠ ರೀತಿಯಲ್ಲಿ ಹೇಳುವುದಾದರೆ ಬ್ರಾಹ್ಮಣನಿಗೆ ಸಂಧ್ಯಾವಂದನೆಯಾದರೂ ಅವಶ್ಯ ಕರ್ತವ್ಯವಾದದ್ದು. ಅದನ್ನೂ ಹಳ್ಳಿಗಳಲ್ಲಿ ತ್ಯಜಿಸುತ್ತಿದ್ದಾರೆ. ದೇವತಾರ್ಚನೆ ಇರಲಿ, ಹಳ್ಳಿಗಳಲ್ಲಿ ಘಂಟಾನಾದವನ್ನು ಕೇಳುವುದು ಸಹ ಅಪರೂಪದ ಘಟನೆಯಾಗಿದೆ. ವೇಷಭೂಷಾದಿಗಳಲ್ಲಿ, ಆಹಾರದಲ್ಲಿ ಬ್ರಾಹ್ಮಣನು ಶೂದ್ರನೇ ಆಗಿಬಿಟ್ಟಿದ್ದಾನೆ. ಅನ್ಯಜಾತಿಯವರಲ್ಲಿ ವಿವಾಹಾದಿ ಸಂಬಂಧಗಳನ್ನು ಬೆಳೆಸಲು ಸಹ ಈತನು ಹೇಸುತ್ತಿಲ್ಲ. ಎದೆಯನ್ನು ಸೀಳಿದರೂ ಎರಡು ವೇದಾಕ್ಷರಗಳು ಇವನಲ್ಲಿ ದೊರೆಯುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅನ್ಯಜಾತಿಯವರು ಯಾವ ಕಾರಣಕ್ಕಾಗಿ ಯಾವ ವೈಶಿಷ್ಟ್ಯಕ್ಕಾಗಿ ಬ್ರಾಹ್ಮಣರಿಗೆ ಗೌರವವನ್ನು ತೋರಿಸಬೇಕು? ಸಂಧ್ಯಾವಂದನೆಯನ್ನು ಮಾಡಬಾರದೆಂದು ಸರಕಾರವೇನೂ ನಿಯಮವನ್ನು ಮಾಡಿಲ್ಲವಷ್ಟೆ. ಎಲ್ಲರೊಡನೆ ಕುಳಿತು ಟೇಬಲ್ಲಿನ ಮೇಲೆ ಊಟ ಮಾಡಬೇಕೆಂದೂ ನಿಯಮ ಮಾಡಿಲ್ಲ. ಇವೆಲ್ಲವನ್ನೂ ವಿವರಿಸುತ್ತಾ ಹೋದರೆ ಒಂದು ದೊಡ್ಡ ಗ್ರಂಥವನ್ನೇ ಬರೆಯಬೇಕಾದೀತು.

ಬೆಂಗಳೂರಿನಿಂದ ಹೊರಡುವ 'ಹವ್ಯಕ' ಎಂಬ ಪತ್ರಿಕೆಯಲ್ಲಿ ನಾಲ್ಕಾರು ವರ್ಷಗಳ ಹಿಂದೆ ಒಂದು ಲೇಖನ ಪ್ರಕಟವಾಗಿತ್ತು. ಬರೆದವರು ಒಬ್ಬ ಭಟ್ಟರೇ! ಮದುವೆ ಮುಂಜಿ ಮೊದಲಾದ ಸಮಾರಂಭಗಳಲ್ಲಿ ಸಂತರ್ಪಣೆಗೆ ಬದಲು 'ಬಫೆ'ಯನ್ನು ಏರ್ಪಡಿಸಬೇಕೆಂದೂ, ಅದರಿಂದ ಅತಿಥಿಗಳಿಗೆ ಸಮಯ

ಉಳಿಯುತ್ತದೆಂದೂ, ಅನಾವಶ್ಯಕವಾಗಿ ಆಹಾರವು ಪೋಲಾಗುವುದು ತಪ್ಪುತ್ತದೆಂದೂ ಅವರ ವಾದವಾಗಿತ್ತು. ಅಲ್ಲದೆ ಸಂತರ್ಪಣೆಯಲ್ಲಿ ಅರ್ಥವಾಗದ ಭೋಜನ ಶ್ಲೋಕಗಳನ್ನು ಹೇಳಿ ಕಾಲಹರಣ ಮಾಡುತ್ತಾರೆಂದೂ ಕರ್ಣ ಕಠೋರವಾಗಿ ' ಹರ ಹರ ಮಹಾದೇವ ' ಇತ್ಯಾದಿಯಾಗಿ ಕೂಗುತ್ತಾರೆಂದೂ ಬರೆದಿದ್ದರು. ವಿವಾಹ ಕಾಲದ ಮಂತ್ರಗಳು ಅರ್ಥವಾಗುವುದಿಲ್ಲವಾದ್ದರಿಂದ ವಿವಾಹ ವಿಧಿಯನ್ನೇ ಕೈಬಿಟ್ಟು ರಜಿಸ್ಟರ್ಡ್ ಮ್ಯಾರಿಯೇಜ್ ಮಾಡಬೇಕೆಂದೂ ಅವರು ಸಲಹೆ ಮಾಡಿರಲಿಲ್ಲ. ಅದು ಓದುಗರ ಪುಣ್ಯ. ಇಂತಹ ಲೇಖನಗಳನ್ನು ಪ್ರಕಟಿಸುವಾಗ ಬ್ರಾಹ್ಮಣ ಜಾತಿಯ ಸಂಪಾದಕರಿಗೆ ಯಾವ ಸಂಕೋಚವೂ ಆಗುವುದಿಲ್ಲ. ಈ ಲೇಖನ ಮಾಲೆಗೆ ಇನ್ನೆರಡು ದುರ್ಗಂಧ ಕುಸುಮಗಳನ್ನು ಸೇರಿಸಿ ಕೈ ತೊಳೆದುಕೊಳ್ಳೋಣ.

ಬನವಾಸಿಯಲ್ಲಿ ಆಳುತ್ತಿದ್ದ ಮಯೂರವರ್ಮನೆಂಬ ರಾಜನು ತನ್ನ ರಾಜ್ಯದಲ್ಲಿ ಸರಿಯಾದ ಬ್ರಾಹ್ಮಣ್ಯವಿಲ್ಲವೆಂಬ ಕಾರಣದಿಂದ ಅಹಿಚ್ಛತ್ರವೆಂಬ ಸ್ಥಳದಿಂದ ಕೆಲವು ಬ್ರಾಹ್ಮಣ ಕುಟುಂಬಗಳನ್ನು ಕರೆಸಿಕೊಂಡನೆಂದು ಸ್ಕಾಂದಪುರಾಣದ ಉತ್ತರ ಸಹ್ಯಾದ್ರಿ ಖಂಡದಲ್ಲಿ ಬರೆದಿದೆ, ಈ ಬ್ರಾಹ್ಮಣರು ಅತ್ಯಂತ ಧರ್ಮನಿಷ್ಠರೂ, ವೇದವೇದಾಂಗ ಪಾರಂಗತರೂ ಆಗಿದ್ದರು. ಅವರು ತನ್ನ ರಾಜ್ಯದಲ್ಲಿಯೇ ನೆಲೆಸಲೆಂದು ರಾಜನು ಸುತ್ತಮುತ್ತಲಿನ ಹಳ್ಳಿಗಳನ್ನು ಅವರಿಗೆ ಧಾರೆಯೆರೆದು ಕೊಟ್ಟು ಕೃಷಿ ವೃತ್ತಿಯಲ್ಲಿ ತೊಡಗಿಸಿದನು. ಆ ಬ್ರಾಹ್ಮಣರು ಕೃಷಿಯಿಂದ ಜೀವಿಸುತ್ತಾ ಹವ್ಯಕವ್ಯಾದಿ ವೈದಿಕ ಕರ್ಮಗಳಲ್ಲಿ ಆಸಕ್ತರಾಗಿರಲೆಂಬುದು ರಾಜನ ಉದ್ದೇಶವಾಗಿತ್ತು. ಪ್ರಾಯೇಣ ಹವ್ಯಕರು ಅಡಿಕೆ ತೋಟಗಳನ್ನೇ ಆಶ್ರಯಿಸಿರುವುದನ್ನು ನೋಡಿದರೆ ಈ ಹೇಳಿಕೆ ಸತ್ಯವೆಂದು ನಂಬಬಹುದಾಗಿದೆ. ಆದರೆ ಈಗ ಆಗಿರುವುದೇನು? ಹವ್ಯಕರಲ್ಲಿ ವೇದಾಧ್ಯಯನ, ಹವ್ಯಕವ್ಯಗಳ ಆಚರಣೆ, ಬ್ರಾಹ್ಮಣ್ಯದ ಪಾಲನೆ, ಹೇಗೆ ಎಷ್ಟರ ಮಟ್ಟಿಗೆ ನಡೆಯುತ್ತಿದೆ ? ಎಂದು ಆತ್ಮಾವಲೋಕನವನ್ನು ಮಾಡಿಕೊಳ್ಳಬೇಕು. ರಾಜನು ಕೊಟ್ಟ ದಾನವು ಎಷ್ಟರ ಮಟ್ಟಿಗೆ ಸದ್ವಿನಿಯೋಗವಾಯಿತೆಂದು ಈ ಬ್ರಾಹ್ಮಣಬ್ರುವರು ಚಿಂತಿಸಬೇಕು.

## ೪ - ಮಹಿಳೆಯರು

ಮನುಷ್ಯಜಾತಿಯಲ್ಲಿ ಪುರುಷರ ಸಂಖ್ಯೆ ಮತ್ತು ಮಹಿಳೆಯರ ಸಂಖ್ಯೆ ಪ್ರಾಯೇಣ ಸಮ - ಸಮವಾಗಿರುವುದು ಕಂಡುಬರುತ್ತದೆ. ಒಂದೊಂದು ದೇಶವನ್ನೇ ಪೃಥಕ್ಕರಿಸಿ ಎಣಿಸಿದರೂ ಸ್ವಲ್ಪ ಹೆಚ್ಚು ಕಡಿಮೆಯಾಗಿ ಸಮಸಂಖ್ಯೆಯೇ ಇರುವುದು. ಒಬ್ಬ ಪುರುಷನಿಗೆ ಒಬ್ಬ ಮಹಿಳೆಯೆಂಬುದು ದೈವ ನಿಯತವಾಗಿರಬಹುದು. ಆದರೆ ಮನುಷ್ಯನು ತನ್ನ ವರ್ತನೆಯಿಂದ ಈ ಸಮತೆಯನ್ನು ಕೆಡಿಸಿಬಿಡುವುದುಂಟು. ತನ್ನ ದುರ್ಬುದ್ಧಿಯಿಂದ ಮಹಾಯುದ್ಧಗಳನ್ನು ನಡೆಸಿದಾಗ, ಬಹುಸಂಖ್ಯೆಯಲ್ಲಿ ಪುರುಷ ಯೋಧರು ಸಾಯುವುದರಿಂದ ಸ್ತ್ರೀಯರ ಸಂಖ್ಯೆ ತಾತ್ಕಾಲಿಕವಾಗಿ ಅಧಿಕವಾಗಿ ಬಿಡುತ್ತದೆ. ರಾಮಾಯಣ ಮಹಾಭಾರತ ಯುದ್ಧಗಳಾದಾಗ ಹಾಗೆ ಆಗಿರಲೇಬೇಕು. ಮುಸಲ್ಮಾನರ ಆಕ್ರಮಣದೊಂದಿಗೆ ಭಾರತ ದೇಶದಲ್ಲಿ ನಡೆದ ಘೋರ ಯುದ್ಧಗಳು ಪ್ರಸಿದ್ಧವಾದವು. ಈಚೆಗೆ ನಡೆದ ದ್ವಿತೀಯ ವಿಶ್ವ ಸಮರದಲ್ಲಿ ಜರ್ಮನ್ ಯೋಧರ ನಿಧನದಿಂದ ಜರ್ಮನಿಯಲ್ಲಿ ಹೆಂಗಸರಿಗೆ ಮದುವೆಯಾಗುವುದು ಸಮಸ್ಯೆಯಾಗಿ ಹೋಯಿತೆಂದು ಚರಿತ್ರೆಯು ದಾಖಲಿಸಿದೆ. ಹೀಗೆ ಯಾವುದೋ ಕಾರಣದಿಂದ ಮಹಿಳೆಯರ ಸಂಖ್ಯೆ ಅಧಿಕವಾದಾಗ ಬಹುಪತ್ನೀತ್ವದ ಪದ್ಧತಿ ಜಾರಿಗೆ ಬಂದಿರಬೇಕು. ''**ರಾಜಾನೋ ಬಹುವಲ್ಲಭಾಃ**'' ಎಂಬ ಗಾದೆ ಹುಟ್ಟುವುದಕ್ಕೆ ಈ ರಾಜರು ಶತ್ರುಯೋಧರನ್ನು ಕೊಲ್ಲುವುದೇ ನಿಮಿತ್ತವಾಗಿರಬಹುದು.

ಮನುಷ್ಯ ಸಮಾಜವು ಯಾವಾಗಲೂ ಪುರುಷಪ್ರಧಾನವಾದದ್ದು. ಈ ಹೇಳಿಕೆ ಕೆಲವರಿಗೆ ಸ್ತುತಿಯಾಗಿಯೋ, ಕೆಲವರಿಗೆ ನಿಂದೆಯಾಗಿಯೋ ಗೋಚರಿಸಿದೆ. ಪುರುಷಪ್ರಧಾನವೆಂದೊಡನೆ ಸ್ತ್ರೀ ಅಪ್ರಧಾನವೆಂದಾಯಿತಷ್ಟೆ. ಇದು ಅನ್ಯಾಯ, ಅಧರ್ಮ. ಆದ್ದರಿಂದ ಸ್ತ್ರೀಯರಿಗೂ ಪುರುಷರಷ್ಟೇ ಪ್ರಾಧಾನ್ಯವೂ ಹಕ್ಕು ಬಾಧ್ಯತೆಗಳೂ ಇರಬೇಕು ಎಂದು ವಾದಿಸತಕ್ಕವರು ಹೇಳುವುದೇನೆಂದರೆ - ಗಂಡಸರು ತಮ್ಮ ದೇಹಬಲದಿಂದ ಹೆಂಗಸರನ್ನು ಹಿಂದಕ್ಕೆ ತಳ್ಳಿ ಮೆರೆಯುತ್ತಿದ್ದಾರೆ. ಹೆಂಗಸರ ಕೆಲಸ ಅಡಿಗೆ ಮನೆಯಲ್ಲಿ ಎಂದು ನಿಶ್ಚಯಿಸಿ ಅವರು ತಮ್ಮ ಸೇವಕರೆಂದೂ, ಭೋಗ್ಯವಸ್ತುಗಳೆಂದೂ, ಹೆರುವ ಯಂತ್ರಗಳೆಂದೂ ತಿಳಿದಿದ್ದಾರೆ. ಸ್ತ್ರೀಯರಿಗೆ ವಿದ್ಯಾಭ್ಯಾಸವು ಅನಾವಶ್ಯಕವೆಂದು ಭಾವಿಸುತ್ತಿದ್ದಾರೆ. ತಾವು ಪುನರ್ವಿವಾಹ ಮಾಡಿಕೊಂಡು ಸುಖವಾಗಿರಬಹುದು. ಸ್ತ್ರೀಯರು ಮಾತ್ರ ವಿಧವೆಯರಾದರೆ ಸಾಯುವವರೆಗೂ ಕಷ್ಟದಲ್ಲಿ ನವೆಯುತ್ತಲೇ ಇರಬೇಕು ಎಂದು ಹೇಳುತ್ತಾರೆ. ತಮಗೆ ಅನುಗುಣವಾಗಿ ಧರ್ಮಶಾಸ್ತ್ರಗಳನ್ನು ಬರೆದುಕೊಂಡು ಸ್ತ್ರೀಯರಿಗೆ ಅನ್ಯಾಯ ಮಾಡಿದ್ದಾರೆ. ಈಗ ಸ್ತ್ರೀಯರು ಜಾಗೃತರಾಗಿದ್ದಾರೆ. ಇನ್ನು ಮೇಲೆ ಪುರುಷರ ದಬ್ಬಾಳಿಕೆ ನಡೆಯದು - ಇತ್ಯಾದಿ.

ಈ ಬಗೆಯ ಆರೋಪಗಳಿಗೆ ಮುಖ್ಯವಾಗಿ ಗುರಿಯಾಗಿರುವುದು ಧರ್ಮಶಾಸ್ತ್ರ ಅದರಲ್ಲಿಯೂ ಮನುಸ್ಮೃತಿಯು ವಿಶಿಷ್ಟ ನಿಂದೆಗೆ ಪಾತ್ರವಾಗಿದೆ. ಇದೆಲ್ಲವನ್ನೂ ಪರಿಶೀಲಿಸುವುದಕ್ಕೆ ಮೊದಲು ಒಂದೆರಡು ವ್ಯಾವಹಾರಿಕವಾದ ವಸ್ತುಸ್ಥಿತಿಯನ್ನು ಗಮನಿಸುವುದು ಅತ್ಯಾವಶ್ಯಕ. ಸ್ತ್ರೀಯರು ಪುರುಷರಿಗಿಂತ ದೈಹಿಕವಾಗಿ ದುರ್ಬಲರೆಂಬುದು ವಸ್ತು ಸ್ಥಿತಿ. ಇದು ಪ್ರಕೃತಿಯ ಕೈವಾಡವೇ ಹೊರತು ಮನುಷ್ಯರದ್ದಲ್ಲ. ಹೀಗೆ ಸ್ತ್ರೀಜಾತಿಯೇ ದುರ್ಬಲವಾಗಿರುವುದು ಮನುಷ್ಯಜಾತಿಗೆ ಸೀಮಿತವಲ್ಲ. ಪಶುಪಕ್ಷಿ, ಮೃಗಗಳಲ್ಲಿಯೂ ಗಂಡು ಹೆಣ್ಣಿಗಿಂತ ಅಧಿಕ ಬಲಶಾಲಿ. ಹಸುಗಳಿಗಿಂತ ಹೋರಿ, ಹೇಂಟೆ (ಹೆಣ್ಣುಕೋಳಿ) ಗಿಂತ ಹುಂಜ, ಹೆಣ್ಣಾನೆಗಳಿಗಿಂತ ಸಲಗ ಬಲಶಾಲಿಯೆಂಬುದು ನಿರ್ವಿವಾದ. ಆದ್ದರಿಂದ ಆತ್ಮರಕ್ಷಣೆಗಾಗಿ ಹೆಣ್ಣು ಗಂಡನ್ನಾಶ್ರಯಿಸುವುದು ಸ್ವಾಭಾವಿಕ. ಹಾಗೆಯೇ ಕೋಪ ತಾಪಾದಿ ನಿಮಿತ್ತಗಳಿಂದ ಸ್ತ್ರೀಯು ಪುರುಷನ ಆಕ್ರಮಣಕ್ಕೆ ಒಳಗಾಗುವುದೂ ಸ್ವಾಭಾವಿಕ. ಈ ಲೌಕಿಕ ಪರಿಸ್ಥಿತಿಗೆ ಧರ್ಮಶಾಸ್ತ್ರವು ಹೊಣೆಯಲ್ಲ. ಸ್ತ್ರೀಯರು ಮಕ್ಕಳನ್ನು ಹೆರುವ ಯಂತ್ರಗಳೆ? ಎಂಬ ಆಕ್ಷೇಪಣೆ ಹುರುಳಿಲ್ಲದ್ದು. ವಿವೇಕವಿಲ್ಲದೆ ಹೆಣೆದಿರುವ ಅರ್ಥಶೂನ್ಯವಾದ ಶಬ್ದಜಾಲ ಇದು. ಮಕ್ಕಳನ್ನು ಹೆರುವುದೇ ಒಂದು ಸೌಭಾಗ್ಯವೆಂದು ಭಾವಿಸುತ್ತಿದ್ದ ಸುಮಂಗಲಿಯರಿಗೂ 'ನಾವು ಮಕ್ಕಳನ್ನು ಹೆರುವ ಯಂತ್ರಗಳಲ್ಲ' ವೆಂದು

ಮಾರ್ನುಡಿಯುವ ಮಹಿಳೆಯರಿಗೂ ಇರುವ ಚಿಂತನಕ್ರಮದ ವೈಪರೀತ್ಯವನ್ನಿಲ್ಲಿ ಕಾಣಬಹುದು. ಹಾಗಾದರೆ ಮಕ್ಕಳನ್ನು ಹೆರುವ ಹೊರೆಯನ್ನು ಗಂಡಸರು ಹೊರಲಿ ಎಂಬ ಕಾನೂನು ಮಾಡಬೇಕೆ?- ಎಂದು ಅವರಿಗೆ ಉತ್ತರವನ್ನು ನೀಡಬೇಕಾದೀತು !

ಅರ್ಥಶೂನ್ಯವಾದ ಇನ್ನೊಂದು ಕೂಗಾಟವನ್ನಿಲ್ಲಿ ಪ್ರಸ್ತಾವಿಸಿ ಈ ಬಾಲಿಶ ವಿಚಾರವನ್ನಿಲ್ಲಿಗೆ ಕೈಬಿಡೋಣ. ಕನ್ನಡದಲ್ಲಿ ಸೋಮೇಶ್ವರಶತಕವೆಂಬ ಒಂದು ಶ್ರೇಷ್ಠವಾದ ಸುಭಾಷಿತ ಗ್ರಂಥವಿದೆ. ಅದರಲ್ಲಿ ''**ಸುತನೇ ಸದ್ಗತಿದಾತನೈ ಹರ ಹರಾ ಶ್ರೀ ಚೆನ್ನಸೋಮೇಶ್ವರಾ**''ಎಂಬ ಒಂದು ಸಾಲು ಇದ್ದು, ಬರಹಗಾರರ ಕೈಗಳಿಗೆ ಚುರುಕು ಮುಟ್ಟಿಸಿದೆ. ''ಹಾಗಾದರೆ ಸುತೆಯು ಸದ್ಗತಿದಾತೆಯಲ್ಲವೋ ? ಈ ಕವಿ ಪುರುಷ ಪಕ್ಷಪಾತಿ'' ಎಂದು ಒಬ್ಬ ಮಹಿಳಾಮಣಿ ಕೋಪದಿಂದ ಆರ್ಭಟಿಸಿದಳು. ಆಗ ಮಹಿಳಾಪಕ್ಷಪಾತಿಯಾದ ದಾಮನೂ ''**ಸುತೆಯೇ ಸದ್ಗತಿದಾತಳೈ**'' ಎಂದು ತಿದ್ದಿ ಮುದ್ರಿಸಬೇಕೆಂದು ಸಲಹೆಕೊಟ್ಟನು. ಅದನ್ನು ಸಹಿಸದ ಸಮದರ್ಶಿಯಾದ ಧೂಮನು ''ಇಬ್ಬರೂ ಸದ್ಗತಿಯನ್ನು ಕೊಡಬೇಕು. ಆದ್ದರಿಂದ '**ಸುತರೇ ಸದ್ಗತಿದಾತರೈ**' ಎಂದು ತಿದ್ದುವುದು ಉತ್ತಮ. ಸುತನು ಮತ್ತು ಸುತೆಯು ಎಂಬುದು ಸೇರಿದರೆ ಏಕಶೇಷದಿಂದ ವ್ಯಾಕರಣದ ಪ್ರಕಾರ 'ಸುತರು' ಎಂದಾಗುತ್ತದೆ ಎಂದು ಸಲಹೆಕೊಟ್ಟನು. ಆಗ ಕುಟುಂಬ ಯೋಜನೆಯನ್ನು ಬೆಂಬಲಿಸುವ ಚಾಮನು ''ತಂದೆಗೆ ಎಷ್ಟು ಜನರು ಸದ್ಗತಿಯನ್ನು ಕೊಡಬೇಕು? ಯಾರಾದರೂ ಒಬ್ಬರು ಸದ್ಗತಿಯನ್ನು ಕೊಟ್ಟರೆ ಸಾಕು'' ಎಂದು ಅಬ್ಬರಿಸಿದನು. ಹಾಗಾದರೆ ಯಾವ ರೀತಿಯಲ್ಲಿ ಈ ಸುಭಾಷಿತವನ್ನು ತಿದ್ದಬೇಕು? ಎಂದು ಆಲೋಚಿಸಿ ತಲೆ ಕೆಡಿಸಿಕೊಂಡ ಗಾಮನು ''ವ್ಯಾಕರಣವನ್ನು ಬರೆದವರೇ ತಪ್ಪು ಮಾಡಿದ್ದಾರೆ. ಏಕವಚನ, ಬಹುವಚನ, ಪುಲ್ಲಿಂಗ, ಸ್ತ್ರೀಲಿಂಗ - ಎಂಬ ಕಲ್ಪನೆಗಳನ್ನು ಮಾಡಿ ಭಾಷೆಗೆ ಸಂಕೋಲೆಯನ್ನು ಹಾಕಿದ್ದಾರೆ. ಈ ಸಂಕೋಲೆಯನ್ನು ತೆಗೆದು ಎಸೆಯಲೇಬೇಕು'' - ಎಂದು ಗಮನಾರ್ಹವಾದ ಸೂಚನೆಯನ್ನಿತ್ತನು.

ಧರ್ಮಶಾಸ್ತ್ರವನ್ನೋದಿದವರೊಬ್ಬರು ಸೋಮೇಶ್ವರ ಕವಿಯ ಆಶಯವನ್ನು ಹೀಗೆ ವಿವರಿಸಿದರು -''ತಂದೆ ತಾಯಿಗಳು ಸತ್ತಾಗ ಸುತನು ಅವರ ಉತ್ತರ ಕ್ರಿಯೆಯನ್ನು ಮಾಡಬೇಕೆಂದು ಶಾಸ್ತ್ರದಲ್ಲಿದೆ. ಹನ್ನೊಂದು ದಿನಗಳವರೆಗೆ ಪ್ರೇತಕಾರ್ಯವನ್ನು ನೆರವೇರಿಸಿ ಹನ್ನೆರಡನೆಯ ದಿನ ಸಪಿಂಡೀಕರಣವೆಂಬ ಒಂದು ದೊಡ್ಡ ಕಲಾಪವನ್ನು ನಡೆಸತಕ್ಕದ್ದು. ಅದರಿಂದ ಮೃತರಿಗೆ ಪ್ರೇತತ್ವವು ನಿವೃತ್ತಿಯಾಗುತ್ತದೆ. ಅನಂತರ ಒಂದು ವರ್ಷಕಾಲ ದೀಕ್ಷೆಯಲ್ಲಿದ್ದು ಸಾಂವತ್ಸರಿಕವನ್ನು ಆಚರಿಸಬೇಕು. ಹೀಗೆಯೇ ಪ್ರತಿ ವರ್ಷವೂ ಮೃತರಿಗಾಗಿ ಶ್ರಾದ್ಧವನ್ನು ಮಾಡುತ್ತ ಅಮಾವಾಸ್ಯಾದಿ ದಿನಗಳಲ್ಲಿ ಪಿತೃತರ್ಪಣವನ್ನು ಕೊಡಬೇಕು. ಇದರಿಂದ ಮೃತರಿಗೆ ಸದ್ಗತಿಯಾಗುತ್ತದೆಯೆಂದು

ಧರ್ಮಶಾಸ್ತ್ರದಲ್ಲಿದೆ. ಇದನ್ನು ಮಾಡತಕ್ಕವನು ಪುತ್ರನೇ. ಇದಕ್ಕೆ ಬಹಳ ಹಣವನ್ನು ಖರ್ಚು ಮಾಡಿ ವಿಶೇಷವಾದ ಶ್ರಮವನ್ನೂ ಅವನು ವಹಿಸಬೇಕಾಗುತ್ತದೆ. ಈ ಭಾರ ಯಾವುದೂ ಸುತೆಗೆ ಇಲ್ಲ. ಆದ್ದರಿಂದ ಕವಿಯು **'ಸುತನೇ ಸದ್ಗತಿದಾತನೈ'** ಎಂದು ಬರೆದಿದ್ದಾನೆ. ಹೀಗೆ ವಿವರಣೆಯನ್ನು ನೀಡಿ ಸಮಾಧಾನ ಹೇಳಲು ಯತ್ನಿಸಿದರು. ಅವರ ಮಾತನ್ನು ಯಾರು ಕೇಳುತ್ತಾರೆ? ''ನಾವೂ ಹಣವನ್ನು ಖರ್ಚು ಮಾಡಿ ತಂದೆ ತಾಯಿಗಳ ಶ್ರಾದ್ಧವನ್ನು ಮಾಡಬಾರದೋ?'' ಎಂದು ಮಹಿಳಾ ಮಣಿಗಳು ತಿರುಗಿಬಿದ್ದರು. ಇಷ್ಟೆಲ್ಲ ಅನರ್ಥಕ್ಕೆ ತಾನು ಕಾರಣನಾಗುವೆನೆಂದು ಸೋಮೇಶ್ವರ ಕವಿಗೆ ಗೊತ್ತಿರಲಿಲ್ಲ! ಈ ಶತಮಾನದವರು ಇಷ್ಟು ಬುದ್ಧಿಶಾಲಿಗಳೆಂಬುದು ಆ ಬಡಪಾಯಿಗೆ ಹೊಳೆಯಲೇ ಇಲ್ಲ!

ಧರ್ಮವೆಂದರೇನು? ಧರ್ಮಶಾಸ್ತ್ರಕಾರರ ಯೋಗ್ಯತೆ ಯಾವ ಬಗೆಯದು? ಅವರಲ್ಲಿ ಮನುವಿನ ಸ್ಥಾನ ಯಾವುದು? ಇತ್ಯಾದಿ ವಿಚಾರಗಳನ್ನು ಮನುಸ್ಮೃತಿ ಚಾತುರ್ವರ್ಣ್ಯಗಳಿಗೆ ಸಂಬಂಧಿಸಿ ಹೇಗೆ ಮಾಡಿದೆ - ಎಂಬುದನ್ನು ಹಿಂದೆ ಪ್ರಸ್ತಾಪಿಸಿರುವುದರಿಂದ ಪುನಃ ಈಗ ಬರೆಯುವುದಿಲ್ಲ. ಮಹಿಳೆಯರಿಗೆ ಸಂಬಂಧಿಸಿದಂತೆ ಮನುವಿನ ಹೇಳಿಕೆ ಏನಿದೆ? ಇತರ ಧರ್ಮಶಾಸ್ತ್ರಕಾರರು ಯಾವ ನಿಲುವನ್ನು ತಳೆದಿದ್ದಾರೆ? ಸ್ತ್ರೀಯರನ್ನು ಮನುಮಹಾತ್ಮನು ಕಡೆಗಣಿಸಿದ್ದಾನೆಂದು ಪಾಶ್ಚಾತ್ಯರೂ ಅವರ ದತ್ತಪುತ್ರರೂ ದತ್ತಪುತ್ರಿಯರೂ ಘೋಷಿಸುತ್ತಿರುವುದರಲ್ಲಿ ತಥ್ಯಾಂಶವಿದೆಯೆ? ಎಂಬುದನ್ನೀಗ ವಿಚಾರಿಸಬೇಕಾಗಿದೆ.

ಸಮಾಜದಲ್ಲಿ ಸ್ತ್ರೀಪುರುಷರನ್ನು ಯಾವ ತಳಹದಿಯಲ್ಲಿ ಪ್ರಸ್ತಾವಿಸಿ, ಮನುವು ಧರ್ಮಶಾಸ್ತ್ರವನ್ನು ರಚಿಸಿದ್ದಾನೆಂಬುದನ್ನು ಈ ಶ್ಲೋಕವು ಸಾರುತ್ತದೆ.

**ದ್ವಿಧಾ ಕೃತ್ವಾತ್ಮನೋ ದೇಹಮರ್ಧೇನ ಪುರುಷೋऽಭವತ್ ।**
**ಅರ್ಧೇನ ನಾರೀ ತಸ್ಯಾಂ ಸ ವಿರಾಜಮಸೃಜತ್ ಪ್ರಭುಃ ॥** (ಮನು ೧-೩೨)

''ಆ ಪರಮಾತ್ಮನು ತನ್ನ ದೇಹವನ್ನು ಎರಡಾಗಿ ಸೀಳಿ, ಒಂದು ಅರ್ಧದಿಂದ ಪುರುಷನಾದನು, ಇನ್ನೊಂದು ಅರ್ಧದಿಂದ ಸ್ತ್ರೀಯಾದನು. ಆ ಪುರುಷನು ಆ ಸ್ತ್ರೀಯಲ್ಲಿ ವಿರಾಟ್ ಪುರುಷನನ್ನು ಸೃಷ್ಟಿಸಿದನು''

ಇದು ಆಲಂಕಾರಿಕ ಭಾಷೆ. ಪರಮಾತ್ಮನ ದೇಹದಲ್ಲಿ ಒಂದು ಅರ್ಧ ಗಂಡಸು, ಇನ್ನೊಂದು ಅರ್ಧ ಹೆಂಗಸು ಎಂದು ತಾತ್ಪರ್ಯ. ಸಮಾಜದಲ್ಲಿ ಸ್ತ್ರೀಪುರುಷರಿಬ್ಬರೂ ಸಮಾನ ಸ್ಥಾನದಲ್ಲಿದ್ದಾರೆಂಬುದು ಇಲ್ಲಿ ಸ್ಪಷ್ಟವಾಗಿದೆ. ಇನ್ನೊಂದು ವಿಶೇಷವನ್ನು ಗಮನಿಸಬೇಕು. ಕುಂಬಾರನು ಮಣ್ಣಿನಿಂದ ಮಡಿಕೆಗಳನ್ನು ಮಾಡುವಂತೆ ದೇವರು ಕೈಗೆ

ಸಿಕ್ಕಿದ ಯಾವುದೋ ವಸ್ತುವಿನಿಂದ ಸ್ತ್ರೀಪುರುಷರನ್ನು ನಿರ್ಮಿಸಲಿಲ್ಲ. ಮತ್ತೇನೆಂದರೆ ಈ ಸ್ತ್ರೀಪುರುಷರು ದೇವರ ದೇಹದ ಎರಡು ಭಾಗಗಳೇ ಆಗಿದ್ದಾರೆ ಎಂಬುದು. ಮನುಷ್ಯನನ್ನು ಮಹಾದೇವನ ಮಟ್ಟಕ್ಕೇರಿಸಿ ಪ್ರವೃತ್ತವಾದ ಈ ಉದಾತ್ತ ಚಿಂತನೆಯನ್ನು ವೈದಿಕ ಧರ್ಮದಲ್ಲಿ ಮಾತ್ರ ಕಾಣಬಹುದು. ಜಗತ್ತಿನಲ್ಲಿ ಇನ್ನು ಯಾವ ಮತಕ್ಕೆ ಈ ಉನ್ನತ ಮಟ್ಟದ ಚಿಂತನೆ ಹೊಳೆದಿದೆ? ಮನುಷ್ಯರನ್ನು '**ಅಮೃತಸ್ಯ ಪುತ್ರಾಃ**' ಎಂದು ವೇದವು ಸಂಬೋಧಿಸಿದೆ. ತಮ್ಮ ದೇಹದ ಒಂದಂಶವೇ ಆದವರು ಮಕ್ಕಳು. ಕುಂಬಾರನ ಮಡಕೆಗಳು ಕುಂಬಾರನ ಮಕ್ಕಳಲ್ಲ.

ಹೀಗೆ ಸ್ತ್ರೀಪುರುಷರೀರ್ವರೂ ಪರಮಾತ್ಮನ ದೇಹದ ಎರಡು ಖಂಡಗಳೆಂದು ವರ್ಣಿಸಿರುವ ಮನುಮಹರ್ಷಿಯು ಪುರುಷ ಪಕ್ಷಪಾತಿಯಾಗಿ ಸ್ತ್ರೀಯರನ್ನು ನಿಂದಿಸಿ ಕೆಳಗೆ ತಳ್ಳಿರಬಹುದೆ? ಹಾಗೆ ತಳ್ಳಲು ಕಾರಣವಾದರೂ ಏನು? ಎಂಬ ಪ್ರಶ್ನೆಗಳಿಗೆ ಯಾರೂ ಉತ್ತರವನ್ನು ಹೇಳಲಾರರು. ವಿಚಾರವಾದಿಗಳ ನಿಂದಾವಾಕ್ಯಗಳನ್ನು ಪರಿಶೀಲಿಸುವುದಕ್ಕೆ ಮೊದಲು ಮನುಮಹರ್ಷಿಯು ಮಹಿಳೆಯರಿಗೆ ಯಾವ ಸ್ಥಾನಮಾನಗಳನ್ನು ನೀಡಿ ಆದರಿಸಿದ್ದಾನೆಂಬುದನ್ನು ನೋಡೋಣ.

**ಮಹಿಳೆಯರಿಗೆ ನಾಮಕರಣ :**

೧. **ಸ್ತ್ರೀಣಾಂ ಸುಖೋದ್ಯಮಕ್ರೂರಂ ವಿಸ್ಪಷ್ಟಾರ್ಥಂ ಮನೋಹರಂ ।**
**ಮಾಂಗಲ್ಯಂ ದೀರ್ಘವರ್ಣಾಂತಮಾಶೀರ್ವಾದಾಭಿಧಾನವತ್॥**

(ಮನು ೨-೩೩)

ಉಚ್ಚಾರಣೆಗೆ ಹಿತಕರವೂ ಕ್ರೂರವಾದ ಅರ್ಥವನ್ನು ಕೊಡದೇ ಇರತಕ್ಕದ್ದೂ ಸುಲಭವಾಗಿ ಅರ್ಥವಾಗತಕ್ಕದ್ದೂ ಮಂಗಳವಾಚಿಯೂ ಕಡೆಯಲ್ಲಿ ದೀರ್ಘಸ್ವರವುಳ್ಳದ್ದೂ ಆಶೀರ್ವಾದವಾಚಕವೂ ಆದ ಹೆಸರನ್ನು ಸ್ತ್ರೀಯರಿಗೆ ಇಡಬೇಕು. ಉದಾ.: ಯಶೋದಾ, ಕಲ್ಯಾಣೀ, ಸುಶೀಲಾದೇವೀ, ವಿಮಲಾ, ಶಾರದಾ, ಉಮಾ, ಸಾವಿತ್ರೀ ಇತ್ಯಾದಿ.

ಮಕ್ಕಳ ಮೇಲೆ ಅತ್ಯಂತ ವ್ಯಾಮೋಹವಿರತಕ್ಕ ತಾಯಿ ತಂದೆಗಳು ಮಗುವಿಗೆ ಯಾವ ಹೆಸರಿಡಬೇಕೆಂದು ವಿಶೇಷವಾಗಿ ಚಿಂತಿಸುತ್ತಾರೆ. ಹೆಣ್ಣು ಮಗುವಿನ ಹೆಸರಿನ ಬಗೆಗೆ ಮನುವು ಹೇಗೆ ಸಲಹೆ ಕೊಟ್ಟಿದ್ದಾನೆ ಎಂಬುದನ್ನೂ ನೋಡಿರಿ. ಗಂಡಿನ ಹೆಸರು ಹೇಗಿರಬೇಕೆಂದು ಅವನು ಚಿಂತಿಸಿದ್ದಾನೇನು? ಹೆಣ್ಣಿನ ಬಗೆಗೆ ಇಷ್ಟು ಆಸಕ್ತಿಯನ್ನು ವಹಿಸಿದ ಮನುವನ್ನು ಸ್ತ್ರೀದ್ವೇಷಿಯೆಂದು ಯಾವ ನಾಲಗೆ ಹೇಳೀತು?

೨. ತನಗೆ ಬಂಧುವಲ್ಲದ ಪರಸ್ತ್ರೀಯನ್ನು ಕರೆಯುವಾಗ ''ಹೇ ಭವತಿ

(ಪೂಜ್ಯಳೇ), ಸುಭಗೆ ( ಸೌಭಾಗ್ಯವತಿ), ಭಗಿನಿ (ಸೋದರಿ)'' - ಎಂದು ಸಂಬೋಧಿಸಬೇಕು. (೨-೧೨೯)

೩. ತಾಯಿಯ ಸೋದರಿ, ಸೋದರ ಮಾವನ ಪತ್ನಿ, ಪತ್ನಿಯ ತಾಯಿಯಾದ ಅತ್ತೆ, ತಂದೆಯ ಸೋದರಿ - ಇವರನ್ನು ಗುರುಪತ್ನಿಗೆ ಸಲ್ಲುವ ಗೌರವವನ್ನಿಟ್ಟು ಆದರಿಸಬೇಕು. (ಅವರು ಬಂದಾಗ ಎದ್ದುನಿಂತು ಕಾಲುಮುಟ್ಟಿ ಅಭಿವಾದನೆ ಮಾಡಬೇಕು) (೨-೧೩೧)

೪. ಅಣ್ಣನ ಪತ್ನಿಗೆ, ತಾಯಿಗೆ ನಮಸ್ಕರಿಸುವಂತೆ ಪ್ರತಿದಿನವೂ ನಮಸ್ಕರಿಸುತ್ತಿರಬೇಕು. ಹೀಗೆಯೇ ಹಿರಿಯರಾದ ಬಂಧುಸ್ತ್ರೀಯರು ಬಂದಾಗ ನಮಸ್ಕರಿಸಬೇಕು. ಎಲ್ಲ ಸ್ತ್ರೀಯರಿಗಿಂತ ತನ್ನ ತಾಯಿ ಹೆಚ್ಚು ಪೂಜ್ಯಳೆಂದು ತಿಳಿಯಬೇಕು. (೨-೧೩೨-೧೩೩)

೫. ದಾರಿ ಹಿಡಿದು ಹೋಗುತ್ತಿರುವಾಗ ಎದುರಿಗೆ ಯಾವ ಮಹಿಳೆಯಾದರೂ ಬಂದರೆ, ಅವಳಿಗೆ ದಾರಿಯನ್ನು ಬಿಟ್ಟು ತಾನು ಪಕ್ಕಕ್ಕೆ ಸರಿಯಬೇಕು (೨-೧೩೮)

೬. **''ಸಹಸ್ರಂ ತು ಪಿತೄನ್ ಮಾತಾ ಗೌರವೇಣಾತಿರಿಚ್ಯತೇ ॥''**(೯೨-೧೪೫)

ತಂದೆಗಿಂತ ತಾಯಿಗೆ ಸಾವಿರಪಾಲು ಹೆಚ್ಚು ಗೌರವ ಸಲ್ಲುತ್ತದೆ. ಇನ್ನೊಂದು ಕಡೆ ಧರ್ಮಶಾಸ್ತ್ರವು ಹೇಳುತ್ತದೆ - ಮಗನು ಸಂನ್ಯಾಸವನ್ನು ತೆಗೆದುಕೊಂಡಿದ್ದರೆ, ತಂದೆಯು ಆತನಿಗೆ ನಮಸ್ಕರಿಸಬೇಕು. ತಾಯಿ ಮಾತ್ರ ಸಂನ್ಯಾಸಿಯಾದ ಮಗನಿಗೆ ನಮಸ್ಕರಿಸಬಾರದು ಎಂದು.

**೭. ''ತೇಷಾಂ ತ್ರಯಾಣಾಂ ಶುಶ್ರೂಷಾ ಪರಮಂ ತಪ ಉಚ್ಯತೇ ॥''** (೨-೨೨೯) ತಾಯಿ, ತಂದೆ, ಆಚಾರ್ಯ ಇವರ ಸೇವೆಯೇ ಸರ್ವೋತ್ಕೃಷ್ಟವಾದ ತಪಸ್ಸು ಎನ್ನಿಸಿಕೊಂಡಿದೆ.

**೮. ''ತ ಏವ ತ್ರಯೋ ವೇದಾಸ್ತ ಏವೋಕ್ತಾಸ್ತ್ರಯೋ ಽಗ್ನಯಃ ॥''** (೨-೨೩೦) ಪುತ್ರನಾದವನು ತಾಯಿ, ತಂದೆ, ಆಚಾರ್ಯ ಈ ಮೂವರನ್ನು ಮೂರು ವೇದಗಳೆಂದೂ- ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ ಎಂಬ ತ್ರೇತಾಗ್ನಿಗಳೆಂದೂ ತಿಳಿದು ಸೇವಿಸತಕ್ಕದ್ದು.

**೯. ''ಮಾತಾ ಪೃಥಿವ್ಯಾಮೂರ್ತಿಃ ॥''** (೨-೨೨೬) ತಾಯಿಯು ಸಾಕ್ಷಾತ್ ಭೂದೇವಿಯ ಮೂರ್ತಿಯೆಂದು ತಿಳಿಯಬೇಕು. ಆದ್ದರಿಂದ ತಾಯಿಯನ್ನೆಂದಿಗೂ ಅವಮಾನಿಸಕೂಡದು.

ಇಲ್ಲಿ ಜಾತಿಯ ಪ್ರಶ್ನೆ ಯಾವುದೂ ಇಲ್ಲ. ಸರ್ವ ಜಾತಿಯವರಿಗೂ ತಾಯಿ

ಶ್ರೇಷ್ಠಳೇ. ತಾನು ಎಷ್ಟು ದೊಡ್ಡ ವಿದ್ವಾಂಸನಾಗಿರಲಿ, ಅಧಿಕಾರಿಯಾಗಿರಲಿ, ತಾಯಿಗೆ ಮಾತ್ರ ತಾನು ಸೇವಕನೇ ಆಗಿರುತ್ತಾನೆಂದು ಮನುವು ಮತ್ತೆ ಮತ್ತೆ ತಾಯಿಯ ಶ್ರೇಷ್ಠತೆಯನ್ನು ಹೇಳುತ್ತಲೇ ಹೋಗಿದ್ದಾನೆ. ಮನುಸ್ಮೃತಿಯು ಧರ್ಮಶಾಸ್ತ್ರ. ಇದು ಅನುಕೂಲ ಶಾಸ್ತ್ರವಲ್ಲ, ಸತ್ಯವಾದದ್ದು ಧರ್ಮ. ಸತ್ಯದಲ್ಲಿ ಪಕ್ಷಪಾತದ ಸುಳಿವೂ ಇರಲು ಶಕ್ಯವಿಲ್ಲ. ಮನುವನ್ನು ಸ್ತ್ರೀದ್ವೇಷಿಯೆಂದು ಕೂಗಾಡತಕ್ಕವರು ಮನುಸ್ಮೃತಿಯನ್ನು ಕಣ್ಣಿಂದ ನೋಡಿದವರೇ ಅಲ್ಲ. ಮನುಸ್ಮೃತಿಯು ಹೇಳುತ್ತದೆ -

**''ಪಿತೃಭಿರ್ಭ್ರಾತೃಭಿಶ್ಚೈತಾಃ ಪತಿಭಿರ್ದೇವರೈಸ್ತಥಾ ।**
**ಪೂಜ್ಯಾ ಭೂಷಯಿತವ್ಯಾಶ್ಚ ಬಹುಕಲ್ಯಾಣಮೀಪ್ಸುಭಿಃ॥''**

ಮಹಿಳೆಯರ ತಂದೆ, ಸೋದರ, ಗಂಡ, ಮೈದುನ ಮೊದಲಾದವರು ತಮಗೆ ಒಳ್ಳೆಯದಾಗಲೆಂದು ಬಯಸುವುದಾದರೆ, ಆ ಮಹಿಳೆಯರನ್ನು ಗೌರವದಿಂದ ನೋಡಿಕೊಳ್ಳಬೇಕು. ವಸ್ತ್ರಾಲಂಕಾರಗಳನ್ನು ಕೊಟ್ಟು ಆದರಿಸಬೇಕು.

**''ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ।**

**ಯತ್ರೈತಾಸ್ತು ನ ಪೂಜ್ಯಂತೇ ಸರ್ವಾಸ್ತಾನಿಷ್ಫಲಾಃ ಕ್ರಿಯಾಃ ॥''**

ಯಾವ ಮನೆಯಲ್ಲಿ ತಂದೆ, ಪತಿ ಮೊದಲಾದವರು ಸ್ತ್ರೀಯರನ್ನು ಪೂಜ್ಯ ಭಾವದಿಂದ ನೋಡಿಕೊಳ್ಳುತ್ತಾರೋ ಅಲ್ಲಿ ಎಲ್ಲ ದೇವತೆಗಳೂ ಸಂತೋಷದಿಂದ ವಾಸಿಸುತ್ತಾರೆ. ( ಆ ಮನೆಯಲ್ಲಿ ದೇವತಾರ್ಚನೆ ಮೊದಲಾದದ್ದು ಸಾರ್ಥಕವಾಗುತ್ತದೆ) ಯಾವ ಮನೆಯಲ್ಲಿ ಸ್ತ್ರೀಯರಿಗೆ ಗೌರವ ಇಲ್ಲವೋ ಅಲ್ಲಿ ಮಾಡುವ ಸಮಸ್ತ ಪುಣ್ಯಕಾರ್ಯಗಳೂ ವ್ಯರ್ಥವೇ ಸರಿ.) ( ಮನು ೩-೫೫,೫೬)

ಇಷ್ಟು ಹೇಳಿಯೂ ತೃಪ್ತನಾಗದೆ, ಮನುವು ಇನ್ನೂ ಹೇಳುತ್ತಾನೆ - ''ಪತ್ನಿ, ಮಗಳು, ಸೊಸೆ, ಸೋದರಿ ಮುಂತಾದ ಆತ್ಮೀಯ ಬಂಧು ಸ್ತ್ರೀಯರು ಯಾವ ಕುಲದಲ್ಲಿ ಶೋಕಿಸದೆ ಸಂತೋಷದಿಂದ ಇರುತ್ತಾರೋ ಆ ಕುಲವು ಶೀಘ್ರದಲ್ಲಿ ಅಭಿವೃದ್ಧಿ ಹೊಂದುತ್ತದೆ. ಇವರು ಸೌಖ್ಯದಿಂದ ಇಲ್ಲದೆ ಶೋಕಿಸುವಂತಾದರೆ ಆ ಕುಲವು ಶೀಘ್ರದಲ್ಲಿ ಹಾಳಾಗಿ ಹೋಗುತ್ತದೆ. ಈ ಮಹಿಳೆಯರು ಅನಾದರಕ್ಕೆ ಪಾತ್ರರಾಗಿ ಶೋಕದಿಂದ ಯಾವ ಮನೆಗಳನ್ನು ನಿಂದಿಸುತ್ತಾರೋ ಆ ಮನೆಗಳು ದೆವ್ವ ಬಡಿಯಿತೋ ಎಂಬಂತೆ ಸರ್ವವಿಧದಲ್ಲಿಯೂ ಹಾಳಾಗಿ ಹೋಗುತ್ತವೆ''.(೩-೫೭,೫೮) ಇಷ್ಟು ಹೇಳಿದರೂ ಮನುವಿಗೆ ಸಾಲದೆನಿಸುತ್ತದೆ. ಮತ್ತೆ ನುಡಿಯುತ್ತಾನೆ - ''ಶ್ರೇಯಸ್ಸನ್ನು ಬಯಸುವ ಪುರುಷರು ಒಡವೆ, ವಸ್ತ್ರ, ಭೋಜನಾದಿಗಳಿಂದ, ವಿಶೇಷವಾಗಿ ಹಬ್ಬ

ವಿವಾಹಾದ್ಯುತ್ಸವಗಳಲ್ಲಿ ಈ ಮಹಿಳೆಯರನ್ನು ಸತ್ಕರಿಸಬೇಕು. ಪತಿಪತ್ನಿಯರು ಯಾವ ಮನೆಯಲ್ಲಿ ಅನ್ಯೋನ್ಯ ಸಂತೃಪ್ತರಾಗಿ ಸೌಖ್ಯದಿಂದಿರುತ್ತಾರೋ ಆ ಮನೆಯಲ್ಲಿ ಮಂಗಳವು ಸದಾ ನೆಲೆಸಿರುತ್ತದೆ'' ಎನ್ನುತ್ತಾನೆ.

ಇದು ಸಾಲದೆ ಇನ್ನೊಂದು ಕಡೆ **''ಸ್ತ್ರಿಯಃ ಶ್ರಿಯಶ್ಚಗೇಹೇಷು ನ ವಿಶೇಷೋऽಸ್ತಿಕಶ್ಚನ''** (ಮನು೯-೨೬) ಎಂದು ಸ್ತುತಿಸುತ್ತಾನೆ. ''ಸ್ತ್ರೀಯರೆಂದರೆ ಮನೆಯಲ್ಲಿ ಭಾಗ್ಯದೇವತೆಗಳೇ, ಯಾವ ಭೇದವೂ ಇಲ್ಲ'' ಎಂದು ಅಭಿಪ್ರಾಯ.

ಸ್ತ್ರೀಯರಿಗೆ ಇಷ್ಟು ಮಹತ್ತ್ವವನ್ನೂ, ಗೌರವವನ್ನೂ ಕೊಟ್ಟು ಹೊಗಳಿದವನು ಈ ಜಗತ್ತಿನಲ್ಲಿ ಇನ್ನು ಯಾವನಿದ್ದಾನೆ? ಭರತಖಂಡವನ್ನು ಬಿಟ್ಟು ಅನ್ಯದೇಶಗಳಲ್ಲಿ ಯಾವ ಮತ, ಯಾವ ನಾಗರಿಕತೆ ಈ ಪರಿಯಲ್ಲಿ ಮಹಿಳೆಯರನ್ನು ಶ್ಲಾಘಿಸಿದೆ? ಈ ಪರಿಸ್ಥಿತಿಯಲ್ಲಿ ಮನುವನ್ನು ಸ್ತ್ರೀದ್ವೇಷಿ ಎನ್ನತಕ್ಕವರು ಸತ್ಯದ್ವೇಷಿಗಳೆಂದು ಹೇಳಬೇಕಾಗುತ್ತದೆ.

ಇದುವರೆಗಿನ ಪ್ರಸ್ತಾವಗಳಿಂದ ಮಹಿಳೆಯರ ವಿಷಯದಲ್ಲಿ ಮನುವಿನ ದೃಷ್ಟಿ ಹೇಗಿತ್ತೆಂಬುದು ಗೊತ್ತಾಗುತ್ತದೆ. ಅದು ಅನುಗ್ರಹದೃಷ್ಟಿಯೇ ಹೊರತು ನಿಗ್ರಹದೃಷ್ಟಿಯಲ್ಲ ಎಂಬುದೂ ಸ್ಪಷ್ಟವಾಗಿದೆ. ಈ ತಳಹದಿಯ ಮೇಲೆ ಮನುಸ್ಮೃತಿಯಲ್ಲಿ ಬರುವ ವಿಧಿನಿಷೇಧಗಳಿಗೆ ಅರ್ಥವನ್ನು ಹೇಳಿ, ಮನುವಿನ ತಾತ್ಪರ್ಯವೇನು ಎಂಬುದನ್ನು ನಿಶ್ಚಯಿಸಬೇಕಲ್ಲದೆ ದುಡುಕಿ ನುಡಿಯುವುದು ಸರ್ವಥಾ ಅನುಚಿತವಾದೀತು. ತಂದೆಯು ಮಕ್ಕಳಿಗೆ, ಗುರುವು ಶಿಷ್ಯರಿಗೆ ಮಾಡುವ ಉಪದೇಶವು ಕಟುವಾಗಿದ್ದರೂ ಹಿತದೃಷ್ಟಿಯಿಂದ ಎಂಬುದು ಎಲ್ಲರ ಅನುಭವದಲ್ಲಿರತಕ್ಕದ್ದೇ ಆಗಿದೆ. **''ಸಾಮೃತೈಃ ಪಾಣಿಭಿರ್ಘ್ನಂತಿ ಗುರವೋ ನ ವಿಷೋಕ್ಷಿತೈಃ''** ಗುರುಗಳು ಕೈಗಳಿಗೆ ಅಮೃತವನ್ನು ಹಚ್ಚಿಕೊಂಡು ಶಿಷ್ಯರನ್ನು ದಂಡಿಸುತ್ತಾರೆ, ವಿಷವನ್ನು ಹಚ್ಚಿಕೊಂಡು ಅಲ್ಲ.'' ಎಂದು ವ್ಯಾಕರಣ ಮಹಾಭಾಷ್ಯಕಾರನಾದ ಪತಂಜಲಿಯು ಬರೆದಿದ್ದಾನೆ. ಶಾಸ್ತ್ರಮರ್ಯಾದೆಯನ್ನು ಬಲ್ಲವರು ಶಿಷ್ಟಸಂಮತವಾದ ಒಂದು ಶಾಸ್ತ್ರವು ಪೂರ್ವಾಪರ ವಿರುದ್ಧವಾಗಿದೆಯೆಂದು ಎಂದಿಗೂ ಹಳಿಯುವುದಿಲ್ಲ.

ಭೌತಶಾಸ್ತ್ರ ಪ್ರಾಧ್ಯಾಪಕರೂ, ವಿಜ್ಞಾನಿಗಳೆಂದು ಗಣ್ಯರಾದವರೂ ಆದ ಒಬ್ಬ ಮಹನೀಯರು 'ಲಘುಕೌಮುದಿ' ಎಂಬ ಸಂಸ್ಕೃತ ವ್ಯಾಕರಣ ಗ್ರಂಥವನ್ನು ಸ್ವಯಂ ಪ್ರಜ್ಞೆಯಿಂದ ಓದಿಕೊಂಡಿದ್ದರು. ಅವರು ಒಂದು ದಿನ ನನ್ನೊಡನೆ ಅದನ್ನು ಪ್ರಸ್ತಾವಿಸಿ ಪಾಣಿನಿಯು ಎಷ್ಟು ಅಸಂಗತವಿಸಂಗತವಾಗಿ ವ್ಯಾಕರಣ ಸೂತ್ರಗಳನ್ನು ಬರೆದಿದ್ದಾನೆಂಬುದನ್ನು ಪಟ್ಟಿ ಮಾಡಿ ಹೇಳಿ ಪಾಣಿನಿಯ 'ದಡ್ಡತನ'ವನ್ನು

ಬಹಿರಂಗಗೊಳಿಸಿದರು ! ಅವರು ಎತ್ತಿದ ಮೂರುನಾಲ್ಕು ಸೂತ್ರಗಳಿಗೆ ವಿದ್ವಾಂಸರು ಬರೆದ ಶಾಸ್ತ್ರಸಂಮತವಾದ ಅರ್ಥವನ್ನು ನಾನು ಹೇಳಿದೆನು. ಆ ವಿಜ್ಞಾನಿಗಳು ನನ್ನ ಸಮಾಧಾನವನ್ನೊಪ್ಪಲಿಲ್ಲ. '' ಹಾಗೆಯೇ ಏಕೆ ಅರ್ಥಹೇಳಬೇಕು? ಹೀಗೇಕೆ ಹೇಳಬಾರದು?'' ಎಂದು ಅವರು ಆಕ್ಷೇಪಿಸುತ್ತಲೇ ಇದ್ದರು. ಪಾಣಿನಿಯ 'ದಡ್ಡತನ' ವನ್ನ ಸ್ಥಾಪಿಸಬೇಕೆಂಬ 'ದೊಡ್ಡತನ' ವು ಅವರಲ್ಲಿ ಬೇರೂರಿದಂತೆ ಕಾಣಿಸಿತು. 'ಇದು ಕ್ಷೇತ್ರಿಯ ವ್ಯಾಧಿ. ಈ ಜನ್ಮದಲ್ಲಿ ಗುಣವಾಗುವ ರೋಗವಲ್ಲ' ಎಂದು ನಾನು ನಿಶ್ಚಯಿಸಿ '' ಸ್ವಾಮಿ, ನನಗಿಂತ ದೊಡ್ಡ ವಿದ್ವಾಂಸರನ್ನು ಕೇಳಿ ನೋಡಿರಿ'' ಎಂದು ಹೇಳಿ ಹೊರಟು ಬಂದೆ.

ಧರ್ಮಶಾಸ್ತ್ರವನ್ನು ವಿಮರ್ಶಿಸಲು ಹೊರಡುವ ಆಧುನಿಕ ವಿಚಾರವಾದಿಗಳು ಮೂಲಭೂತವಾದ ಒಂದು ತಪ್ಪನ್ನೆಸಗುತ್ತಾರೆ. ಅದು ತಪ್ಪೆಂದು ಅವರು ಒಪ್ಪುವುದೇ ಇಲ್ಲವಾದ್ದರಿಂದ ಅಂತಹವರಿಗೆ ಸರಿಯಾದ ಸಮಾಧಾನವನ್ನು ಹೇಳಿ ಸಂತೈಸುವುದು ಶಕ್ಯವಾದದ್ದೇ ಅಲ್ಲ. ಆಸ್ತಿಕನನ್ನು ನಾಸ್ತಿಕನೂ, ನಾಸ್ತಿಕನನ್ನು ಆಸ್ತಿಕನೂ ತಿದ್ದಲಾರನು. ಕಮ್ಯುನಿಷ್ಟರನ್ನು ಪ್ರಜಾಪ್ರಭುತ್ವವಾದಿಗಳೂ, ಪ್ರಜಾಪ್ರಭುತ್ವವಾದಿಗಳನ್ನು ಕಮ್ಯುನಿಷ್ಟರೂ ಎಂದಿಗೂ ತಮ್ಮ ತಮ್ಮ ಚಿಂತನೆಗೆ ಅನುಗುಣವಾಗಿ ಪರಿವರ್ತಿಸಲಾರರು. ಆದರೆ ಯಾವುದೇ ಹಠವಿಲ್ಲದೆ ಮುಕ್ತಮನಸ್ಸಿನಿಂದ ಚಿಂತಿಸತಕ್ಕವರಿಗೆ ಕೆಲವು ವಿಚಾರಗಳನ್ನು ಮುಂದಿಟ್ಟು ಇಷ್ಟವಾದದ್ದನ್ನು ಸ್ವೀಕರಿಸಿರಿ - ಎಂದು ಹೇಳಿ ಕೈಬಿಡುವುದು ಯುಕ್ತವಾದ ಮಾರ್ಗ.

ಆಧುನಿಕ ವಿಚಾರವಾದಿಗಳು ಧರ್ಮ ಶಾಸ್ತ್ರವೆಂದರೆ ಲೌಕಿಕವಾದ ಸಾಮಾನ್ಯ ನೀತಿ ಶಾಸ್ತ್ರ ಎಂದು ಭಾವಿಸಿದ್ದಾರೆ. ಧರ್ಮವೆಂದರೆ ಸಾಮಾನ್ಯ ನೀತಿಯೆಂದೂ, ಧಾರ್ಮಿಕ ವಿಧಿಯೆಂದರೆ ಹಿತೋಪದೇಶವೆಂದೂ, ಸುಭಾಷಿತವೆಂದೂ ತಿಳಿದಿದ್ದಾರೆ. ಆದರೆ ಇವುಗಳಲ್ಲಿ ವ್ಯತ್ಯಾಸ ಉಂಟು. ಇದನ್ನು ತಿಳಿಯದಿರುವುದು ಅಥವಾ ಒಪ್ಪದಿರುವುದು ಮೂಲಭೂತವಾದ ದೋಷ. ಧರ್ಮವು ವ್ಯಾಪಕವಾದದ್ದು, ತ್ರೈಕಾಲಿಕ ಸತ್ಯವಾದದ್ದು. ನೀತಿಯು ಧರ್ಮದೊಳಗೆ ಸೇರಿಹೋಗುವ ಸ್ವಭಾವವುಳ್ಳದ್ದು, ವ್ಯಾಪ್ಯವಾದದ್ದು. ಅದು ತ್ರೈಕಾಲಿಕಸತ್ಯವಲ್ಲ. ದೇಶ, ಕಾಲ, ಪಾತ್ರಗಳಿಗೆ ತಕ್ಕಂತೆ ಬದಲಾಯಿಸುತ್ತ ಹೋಗತಕ್ಕದ್ದು.

ವಿದ್ಯಾವಂತನಾದ ಒಬ್ಬ ಸಾಮಾನ್ಯನೂ ನೀತಿ ಶಾಸ್ತ್ರವನ್ನು ಬರೆಯಬಹುದು. ಸುಭಾಷಿತಗಳನ್ನು ಹೇಳಬಹುದು. ಅವನು ಎಂದಿಗೂ ಧರ್ಮದ ಸ್ವರೂಪವನ್ನು ಹೇಳಲಾರ. ನಮ್ಮೆಲ್ಲರಿಗಿಂತಲೂ ವಿಚಾರಶೀಲರೂ, ಮಹಾಮೇಧಾವಿಗಳೂ ಆದ ಶ್ರೀ ಶಂಕರಾಚಾರ್ಯರು ಬ್ರಹ್ಮವಸ್ತುವಿನ ಸ್ವರೂಪವನ್ನು ಪರಿಶೀಲಿಸುತ್ತ **''ಆಗಮ**

**ಸಂವೇದ್ಯಮೇವೇದಮತಿಗಂಭೀರಂ ಬ್ರಹ್ಮ ನ ತರ್ಕಾವಗಮ್ಯಂ, ಧರ್ಮವತ್''** ಎಂದು ಹೇಳಿದ್ದಾರೆ. ಅತಿ ಗಂಭೀರವಾದ ಪರಬ್ರಹ್ಮದ ಸ್ವರೂಪವನ್ನು ವೇದದಿಂದ ಮಾತ್ರ ತಿಳಿಯಲು ಸಾಧ್ಯ. ಅದು ಎಂದಿಗೂ ತರ್ಕಕ್ಕೆ ನಿಲುಕತಕ್ಕದ್ದಲ್ಲ, ಧರ್ಮದ ಹಾಗೆ - ಎಂದು ತಾತ್ಪರ್ಯ. ಧರ್ಮಕ್ಕೆ ಪರಬ್ರಹ್ಮದ ದೃಷ್ಟಾಂತವನ್ನು ಕೊಟ್ಟು, ಧರ್ಮವು ಮನುಷ್ಯ ಬುದ್ಧಿಗೆ ನಿಲುಕತಕ್ಕದ್ದಲ್ಲವೆಂದೂ ಅದರ ಸ್ವರೂಪವನ್ನು ವೇದವು ಮಾತ್ರ ತಿಳಿಸಬಲ್ಲದೆಂದೂ ತಿಳಿಸಿದ್ದಾರೆ. ಆದ್ದರಿಂದಲೇ ಮನುಸ್ಮೃತಿಯು ''**ವೇದೋಽಖಿಲೋ ಧರ್ಮಮೂಲಂ**'' ಎಂದು ಸಾರಿ ಹೇಳಿದೆ. ವಾಲ್ಮೀಕಿ ರಾಮಾಯಣದಲ್ಲಿ ಶ್ರೀ ರಾಮನು ವಾಲಿಗೆ ''**ಸೂಕ್ಷ್ಮಃ ಪರಮದುರ್ಜ್ಞೇಯಃ ಸತಾಂ ಧರ್ಮಃ ಪ್ಲವಂಗಮ**'' ಎನ್ನುತ್ತಾನೆ. ''ವಾಲಿ, ಸಜ್ಜನರು ಆಚರಿಸುವ ಧರ್ಮಸ್ವರೂಪವು ಸೂಕ್ಷ್ಮವಾದದ್ದು, ತಿಳಿಯುವುದು ಅತ್ಯಂತ ಕಠಿಣ'' ಎಂದರ್ಥ. ನೀತಿಯು ಇಹಲೋಕಕ್ಕೆ ಮಾತ್ರ ಸಂಬಂಧಿಸಿದ ಹಿತೋಪದೇಶ. ಧರ್ಮವಾದರೋ ಇಹಪರಗಳಿಗೂ ಮೋಕ್ಷಕ್ಕೂ ಸಾದನವಾದ ವಸ್ತುನಿರ್ದೇಶ. ಯಾರಿಗೆ ಇಹದಲ್ಲಿ ಮಾತ್ರ ನಂಬಿಕೆ ಇದೆಯೋ ಪರದಲ್ಲಿ (ಮರಣಾನಂತರದ ಅಸ್ತಿತ್ವದಲ್ಲಿ) ಮತ್ತು ಮೋಕ್ಷದಲ್ಲಿ ನಂಬಿಕೆಯಿಲ್ಲವೋ ಅವರು ಧರ್ಮದ ಚರ್ಚೆಗೆ ಕೈಹಾಕಬಾರದು. ಕೈಹಾಕುವುದು ಅಧಿಕಪ್ರಸಂಗವಾಗುತ್ತದೆ. ಅಂಥವರು ನೀತಿಶಾಸ್ತ್ರವನ್ನು ವಿಮರ್ಶಿಸಿಕೊಳ್ಳಲಿ. ಅನುಷ್ಠಾನದಲ್ಲಿ ಆಸಕ್ತಿ ಇಲ್ಲದಾಗ ಧರ್ಮದ ಚರ್ಚೆ ಏಕೆ? ಮನುಸ್ಮೃತಿಯಲ್ಲಿ ಯಾವುದು ಗ್ರಾಹ್ಯ, ಯಾವುದು ಅಗ್ರಾಹ್ಯ ಎಂಬ ವಿಚಾರವೂ ಸರಿಯಲ್ಲ. ಇದು ಬೇಕು, ಇದು ಬೇಡ ಎಂದು ತೀರ್ಮಾನಿಸಲು, ಧಾರ್ಮಿಕವಿಧಿಗಳು ಮಾರುಕಟ್ಟೆಯಲ್ಲಿಟ್ಟಿರುವ ಮಾರಾಟದ ಸರಕುಗಳಲ್ಲ. ಆದರೆ ಈಗಿನ ದೇಶಕಾಲ ಪರಿಸ್ಥಿತಿಗಳಲ್ಲಿ ನಮಗೆ ಎಷ್ಟನ್ನು ಆಚರಿಸಲು ಸಾಧ್ಯ, ಎಷ್ಟು ಅಸಾಧ್ಯ ಎಂದು ವಿಮರ್ಶೆ ಮಾಡಬಹುದು. ವೈದ್ಯನು ಬರೆದುಕೊಟ್ಟ ಔಷಧಿಗಳ ಪಟ್ಟಿಯಲ್ಲಿ ಯಾವುದು ಗ್ರಾಹ್ಯ, ಯಾವುದು ಅಗ್ರಾಹ್ಯ ಎಂದು ನಿಶ್ಚಯಿಸಲು ರೋಗಿಗೆ ಅಧಿಕಾರವಿಲ್ಲ. ಒಂದು ಸ್ಮೃತಿ ಶ್ಲೋಕಕ್ಕೆ ಅನೇಕಾರ್ಥಗಳು ಸಂಭವಿಸಿದಾಗ ಯಾವ ಅರ್ಥವು ಯುಕ್ತವೆಂದು ವಿಚಾರ ಮಾಡಬಹುದು.

ಮನೆಗೆ ಅತಿಥಿಗಳು ಬಂದಾಗ, ಅವರಿಗೆ ಮೊದಲು ಭೋಜನವನ್ನು ಮಾಡಿಸಿ, ಅನಂತರ ದಂಪತಿಗಳೂ, ಮನೆಯವರೂ ಊಟ ಮಾಡಬೇಕೆಂದು ವಿಧಿ. ಆದರೆ ''ಮದುವೆಯಾಗದ ಹೆಣ್ಣುಮಕ್ಕಳಿಗೂ, ಹೊಸದಾಗಿ ಮದುವೆಯಾದ ಹೆಣ್ಣುಮಕ್ಕಳಿಗೂ, ಸೊಸೆಯರಿಗೂ ಮತ್ತು ಗರ್ಭಿಣಿಯರಿಗೂ ಅತಿಥಿಗಳಿಗಿಂತ ಮೊದಲು ಊಟ ಮಾಡಿಸತಕ್ಕದ್ದು. ಅವಿಚಾರಯನ್ = ಹಿಂದೆ ಮುಂದೆ ನೋಡದೆ ಯಾವ ಸಂಕೋಚವೂ ಇಲ್ಲದೆ.'' (ಮನು ೩-೧೧೪) ಗಂಡು ಮಕ್ಕಳಿಗೆ ಮಾತ್ರ ಈ ವಿನಾಯಿತಿ ಇಲ್ಲ! ಸ್ತ್ರೀಯರ

ವಿಷಯದಲ್ಲಿ ಮನುವಿಗಿರುವ ಅನುಕಂಪೆ ಇದು. ಯಾವ ನಾಲಗೆಯಿಂದ ಆತನು ಸ್ತ್ರೀದ್ವೇಷಿಯೆಂದು ಹೇಳುತ್ತೀರಿ?

''ನ ಸ್ತ್ರೀ ಸ್ವಾತಂತ್ರ್ಯಮರ್ಹತಿ'' ಎಂಬ ಒಂದು ಮನು ವಚನವನ್ನು ಅವಲಂಬಿಸಿ ಈ ಜನರು ಮನುವನ್ನು ಆಕ್ಷೇಪಿಸುತ್ತಿದ್ದಾರೆ. ಇದು ಕುಶಕಾಶಾವಲಂಬನ. ಯಾವ ಸಂದರ್ಭದಲ್ಲಿ ಈ ವಾಕ್ಯ ಬಂದಿದೆ, ಇದರ ಅಭಿಪ್ರಾಯವೇನೆಂಬುದನ್ನು ಅವರು ವಿಚಾರಿಸಿದವರೇ ಅಲ್ಲ. ಆ ಶ್ಲೋಕ ಹೀಗಿದೆ -

**''ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ।**
**ರಕ್ಷತಿ ಸ್ಥಾವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ॥''** (ಮನು ೯-೩)

''ಸ್ತ್ರೀಯು ಕುಮಾರಿಯಾಗಿದ್ದಾಗ - ಎಂದರೆ ಮದುವೆಗೆ ಮೊದಲು ತಂದೆಯು ಅವಳನ್ನು ಕಾಪಾಡುತ್ತಾನೆ, ತಾರುಣ್ಯದಲ್ಲಿ ಅವಳನ್ನು ಪತಿಯು ರಕ್ಷಿಸುತ್ತಾನೆ. ಮುಪ್ಪಿನಲ್ಲಿ ಮಕ್ಕಳು ಕಾಪಾಡುತ್ತಾರೆ. ಆದ್ದರಿಂದ ಸ್ತ್ರೀಯು ಸ್ವತಂತ್ರಳಾಗಿ ವರ್ತಿಸಬೇಕಾದ್ದಿಲ್ಲ,

'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬುದು ನಿಷೇಧ ವಿಧಿಯಲ್ಲ. ಸಹಜವಾಗಿ ಪ್ರಾಪ್ತವಾದದ್ದು. ಅನ್ನವಸ್ತ್ರಾದಿಗಳನ್ನಿತ್ತು ಪೋಷಿಸುವುದು ಮತ್ತು ಅವಳ ಶೀಲವನ್ನು ಉಳಿಸುವುದು - ಇದೇ ಅವಳ ರಕ್ಷಣೆ. ಈ ರಕ್ಷಣೆ ಗಂಡಸಿನ ಕರ್ತವ್ಯ. ಸ್ತ್ರೀಯು ಹೊಟ್ಟೆಪಾಡಿಗಾಗಿ ಅಲೆಯಕೂಡದು. ಯಾವಾಗಲೂ ಅವಳಿಗೆ ಶೀಲಭಂಗದ ಭಯವಿರುತ್ತದೆ. ಆದ್ದರಿಂದ ಅವಳ ರಕ್ಷಣೆಯ ಕಾರ್ಯವು ಗಂಡಸಿಗೆ ಸೇರಿದ್ದು. '' ಅವಳು ಸ್ವತಂತ್ರವಾಗಿ ದುಡಿದು ತಿನ್ನಲಿ. ತನ್ನ ಯೋಗಕ್ಷೇಮಗಳನ್ನು ತಾನೇ ನೋಡಿಕೊಳ್ಳಲಿ'' ಎಂದು ಉಪೇಕ್ಷಿಸತಕ್ಕದ್ದಲ್ಲ ಎಂದರ್ಥ. ಚಿಕ್ಕ ವಯಸ್ಸಿನಲ್ಲಿ ಹುಡುಗಿಯನ್ನು ಸಹಜವಾಗಿಯೇ ತಂದೆಯು ರಕ್ಷಿಸುತ್ತಾನೆ. ಯೌವನದಲ್ಲಿ ಅವಳು ದುಷ್ಟಳಾದರೂ ಪತಿಯು ಅವಳನ್ನು ಹೊರಗೆ ನೂಕತಕ್ಕದ್ದಲ್ಲ. **''ದದ್ಯಾತ್ ಪಿಂಡಂ ಚ ಚೇಲಂ ಚ''** - ಅವಳಿಗೆ ಅನ್ನವಸ್ತ್ರಗಳನ್ನು ಕೊಡಲೇಬೇಕು ಎಂದು ಹಾರೀತಸ್ಮೃತಿಯು ಸ್ಪಷ್ಟಪಡಿಸಿದೆ. ಮನುವಿನ ಆಶಯವನ್ನು ವಿವರಿಸುವುದಕ್ಕಾಗಿ ಮತ್ತು ಹೇಳದೆ ಬಿಟ್ಟದ್ದನ್ನು ಒದಗಿಸುವುದಕ್ಕಾಗಿ ಇತರ ಧರ್ಮಶಾಸ್ತ್ರಗಳು ಹೊರಟಿವೆ. ಅವು ಮನುಸ್ಮೃತಿಗೆ ಪೂರಕಗಳು. ಆದ್ದರಿಂದಲೇ ಮನು ಹೇಳುತ್ತಾನೆ -

**''ದೇವದತ್ತಾಂ ಪತಿರ್ಭಾರ್ಯಾಂ ವಿಂದತೇ ನೇಚ್ಛಯಾತ್ಮನಃ।**
**ತಾಂ ಸಾಧ್ವೀಂ ಬಿಭೃಯಾನ್ನಿತ್ಯಂ ದೇವಾನಾಂ ಪ್ರಿಯ ಮಾಚರನ್ ॥''**

ಪುರುಷನಿಗೆ ತನ್ನ ಇಚ್ಛೆಯಂತೆ ಪತ್ನಿಯು ದೊರಕುವುದಿಲ್ಲ. ಅವಳನ್ನು ಒದಗಿಸಿಕೊಟ್ಟವರು ದೇವತೆಗಳು. ಅವಳು ದೇವದತ್ತಾ. ಆದ್ದರಿಂದ ದೇವತೆಗಳ

ಸಂತೋಷಕ್ಕಾಗಿ ನಿತ್ಯವೂ ಪತ್ನಿಯನ್ನು ಕಾಪಾಡಬೇಕು - ಎಂದು ಈ ಶ್ಲೋಕದ ತಾತ್ಪರ್ಯ. ಆದ್ದರಿಂದಲೇ ವಿವಾಹ ವಿಧಿಯಲ್ಲಿ ''**ಮಹ್ಯಂ ತ್ವಾಽದದುಃಗಾರ್ಹಪತ್ಯಾಯ ದೇವಾಃ** '' ಎಂಬ ಮಂತ್ರವು ಬರುತ್ತದೆ. **ನಿತ್ಯಂ ಬಿಭೃಯಾತ್** - ಪತ್ನಿಯು ದುಷ್ಟಳಾದರೂ ಅವಳನ್ನು ದೂರಮಾಡದೇ ಅನ್ನವಸ್ತ್ರಗಳನ್ನಿತ್ತು ಪಾಲಿಸಬೇಕು ಎಂದು ವ್ಯಾಖ್ಯಾನಕಾರರು ಬರೆದಿದ್ದಾರೆ. ಪತ್ನಿಯು ದೇವದತ್ತವಾದ ಒಂದು ನಿಧಿಯೆಂದು ತಿಳಿದು ಪಾಲಿಸದಿದ್ದರೆ, ದೇವತೆಗಳಿಗೆ ಅವಮಾನ ಮಾಡಿದಂತೆ ಎಂದಿದ್ದಾರೆ. ''**ಸೂಕ್ಷ್ಮೇಭ್ಯೋಽಪಿ ಪ್ರಸಂಗೇಭ್ಯಃ ಸ್ತ್ರಿಯೋರಕ್ಷ್ಯಾ ವಿಶೇಷತಃ**'' ಎನ್ನುತ್ತಾನೆ ಮನು. (೯-೫) ''ಸೂಕ್ಷ್ಮಗಳಾದ ಕೆಲವು ಸಂದರ್ಭಗಳು ಒದಗುತ್ತವೆಯಾದ್ದರಿಂದ ವಿಶೇಷ ಆಸಕ್ತಿ ವಹಿಸಿ ಮಹಿಳೆಯರನ್ನು ರಕ್ಷಿಸುತ್ತಿರಬೇಕು.'' ಸೂಕ್ಷ್ಮ ಪ್ರಸಂಗಗಳು ಯಾವುವು? ಅಪಹರಣ, ಶೀಲಭಂಗ - ಇತ್ಯಾದಿಗಳು. ಆದ್ದರಿಂದ ಮಹಿಳೆಯು ತನ್ನ ಅನ್ನಬಟ್ಟೆಗಳಿಗಾಗಿ ತಾನೇ ಹೊರಗೆ ಹೋಗಿ ದುಡಿಯುವುದಕ್ಕೂ ಸ್ವತಂತ್ರಳಾಗಿ ಏಕಾಂತದಲ್ಲಿ ವಾಸ ಮಾಡುವುದಕ್ಕೂ ಅವಕಾಶವನ್ನು ನೀಡಬಾರದೆಂಬುದು '**ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ**' ಎಂಬ ಮಾತಿನ ತಾತ್ಪರ್ಯ. ಒಂದು ಮಾತಿನ ಅರ್ಥವನ್ನು ದುಡುಕಿ ಹೇಳಬಾರದು. ಆ ಗ್ರಂಥದ ಇತರ ಭಾಗಗಳಲ್ಲಿ ಗ್ರಂಥಕಾರನು ಏನು ಹೇಳಿದ್ದಾನೆಂಬುದನ್ನು ನೋಡಿ, ಪೂರ್ವಾಪರ ವಿರೋಧವಾಗದಂತೆ ತಾತ್ಪರ್ಯವನ್ನು ಕಂಡುಹಿಡಿಯಬೇಕೆಂಬುದು ಸರ್ವ ಸಮ್ಮತವಾದ ಶಾಸ್ತ್ರಕಾರರ ಪದ್ಧತಿಯಾಗಿದೆ. ತಾತ್ಪರ್ಯ ನಿರ್ಣಯಕ್ಕೆ ಯಾವ ಯಾವುದನ್ನು ಗಮನಿಸಬೇಕೆಂಬುದನ್ನು ಸಹ ಅವರು ನಿರ್ಣಯಿಸಿದ್ದಾರೆ.

**''ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಮ್ ।**
**ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ॥''**

ಉಪಕ್ರಮ, ಉಪಸಂಹಾರ, ಅಭ್ಯಾಸ ಮತ್ತೆ ಮತ್ತೆ ನಿರೂಪಣೆ, ನವೀನತೆ, ಪ್ರಯೋಜನ, ಅರ್ಥವಾದ, ಯುಕ್ತಿ ಇವು ತಾತ್ಪರ್ಯ ನಿರ್ಣಯಕ್ಕೆ ಸಾಧನ ಹೇತುಗಳು, ಭಗವದ್ಗೀತೆಯಲ್ಲಿ -

೧. **ಕುರು ಕರ್ಮೈವ ತಸ್ಮಾತ್ ತ್ವಂ** - ಅರ್ಜುನ, ಆದ್ದರಿಂದ ನೀನು ಕರ್ಮವನ್ನು ಮಾಡುತ್ತಲೇ ಇರಬೇಕು.

೨. **ತಸ್ಯ ಕಾರ್ಯಂ ನ ವಿದ್ಯತೇ** - ಸ್ಥಿತಪ್ರಜ್ಞನು ಮಾಡಬೇಕಾದದ್ದು ಯಾವುದೂ ಇಲ್ಲ. - ಈ ವಾಕ್ಯಗಳ ಅರ್ಥವು ಪರಸ್ಪರ ವಿರುದ್ಧ.

ಅಂತೆಯೇ -

೧. **ಸ್ವಧರ್ಮೇನಿಧನಂ ಶ್ರೇಯಃ** - ಸ್ವಧರ್ಮವನ್ನು ಆಚರಿಸುತ್ತ

ಸಾಯುವುದಾದರೂ ಉತ್ತಮ. ಪರ ಧರ್ಮವನ್ನು ಆಶ್ರಯಿಸಬಾರದು.

೨. **ಸರ್ವಧರ್ಮಾನ್ ಪರಿತ್ಯಜ್ಯ** - ಅರ್ಜುನ, ಸರ್ವಧರ್ಮಗಳನ್ನೂ ಪರಿತ್ಯಜಿಸಿ ನನಗೆ ಶರಣಾಗು - ಈ ವಾಕ್ಯಗಳು ವಿರುದ್ಧವಾಗಿವೆ. ಹಾಗಾದರೆ ಶ್ರೀಕೃಷ್ಣನ ತಾತ್ಪರ್ಯವೇನು?

ಶ್ರೀಕೃಷ್ಣನು ಅಷ್ಟು ವಿರುದ್ಧವಾಗಿ ಅರ್ಜುನನಿಗೆ ಹಿತೋಪದೇಶ ಮಾಡಿದನೆ? ಅಥವಾ ಅದೆಲ್ಲವನ್ನು ಬರೆದಿಟ್ಟ ವ್ಯಾಸರಿಗೆ ತಲೆ ಸರಿಯಿರಲಿಲ್ಲವೆ? ಅಥವಾ ಇಷ್ಟು ವರ್ಷಗಳವರೆಗೆ ಗೀತೆಯನ್ನು ಹೊಗಳಿ ವ್ಯಾಖ್ಯಾನ ಮಾಡುತ್ತ ಬಂದವರು ಬುದ್ಧಿಹೀನರೊ? ಮನುಸ್ಮೃತಿಯನ್ನು ದೂಷಿಸುವವರೂ, ಪೂರ್ವಾಪರ ವಿರೋಧಗಳನ್ನು ಎತ್ತಿತೋರಿಸತಕ್ಕವರೂ ಶಾಸ್ತ್ರ ರಚನೆಯ ಪರಿಪಾಟಿಯನ್ನು ಸ್ವಲ್ಪವಾದರೂ ತಿಳಿದಿರಬೇಕು. ಅರ್ಥವಾದ, ಅಭ್ಯುಚ್ಚಯ, ಏಕದೇಶ್ಯುಕ್ತಿ, ಮತಾಂತರದ ಅನುವಾದ - ಮುಂತಾದವು ಶಾಸ್ತ್ರಗ್ರಂಥಗಳಲ್ಲಿರುತ್ತವೆ. ಶಾಸ್ತ್ರದ ಅಧ್ಯಯನಕ್ಕಾಗಲಿ, ಅಧ್ಯಾಪನಕ್ಕಾಗಲಿ ಒಂದಾನೊಂದು ಅರ್ಹತೆ ಬೇಕಾಗುತ್ತದೆ. ಸಂಸ್ಕೃತ ಭಾಷೆ ಸ್ವಲ್ಪ ಗೊತ್ತಿದೆಯೆಂದು ವಿಮರ್ಶೆಗೆ ಹೊರಡತಕ್ಕವನು, ಹಿಂದೆ ಹೇಳಿದಂತೆ ಪಾಣಿನಿಸೂತ್ರಗಳಲ್ಲಿ ದೋಷವನ್ನು ಹೇಳಲು ಹೊರಟ ವಿಜ್ಞಾನಿಯಂತೆ ಹಾಸ್ಯಾಸ್ಪದನಾಗುತ್ತಾನೆ .

ಸ್ವಾತಂತ್ರ್ಯವೆಂದರೆ ಸ್ವೇಚ್ಛಾಚಾರವಲ್ಲ. ಭಾರತ ದೇಶವು ಈಗ ಸ್ವತಂತ್ರವಾಗಿದೆ ಎಂದರೆ ಇಲ್ಲಿಯ ಪ್ರಜೆಗಳಿಗೆ ಇಷ್ಟಬಂದಂತೆ ನಡೆಯಲು ಅವಕಾಶವಿದೆಯೆಂದು ಅರ್ಥವೇನು? ಅಂತಹ ಸ್ವಾತಂತ್ರ್ಯವು ಯಾವ ದೇಶಕ್ಕೂ ಇಲ್ಲ. ಇರಲೂಬಾರದು. ಸರ್ಕಾರವು ಗೊತ್ತು ಮಾಡಿದ ಕಾನೂನಿನ ಚೌಕಟ್ಟಿನ ಒಳಗೆ ಸ್ವಾತಂತ್ರ್ಯವೇ ಹೊರತು ಹೊರಗಲ್ಲ. ಚೌಕಟ್ಟಿನ ಹೊರಗೆ ಕಾಲಿಟ್ಟರೆ ಸರ್ಕಾರವೇ ಅವರನ್ನು ಶಿಕ್ಷಿಸುತ್ತದೆ. ಧರ್ಮಶಾಸ್ತ್ರವು ಧರ್ಮದ ಚೌಕಟ್ಟನ್ನು ನಿರ್ಮಿಸಿದೆ. ಆದರೆ ಈ ಚೌಕಟ್ಟಿನೊಳಗಡೆ ನಡೆಯುವ ವ್ಯವಹಾರವನ್ನು ಧರ್ಮಶಾಸ್ತ್ರವು ನಿಯಮಿಸುವುದಿಲ್ಲ. ಕಾನೂನು ಬಹಿರಂಗದ ದೇಹಕ್ಕೆ ಸಂಬಂಧಿಸಿದ್ದು. ಮನುಷ್ಯನ ಅಂತರಂಗದ ಮೇಲೆ ಅದಕ್ಕೆ ಪ್ರಭುತ್ವವಿಲ್ಲ. ಧರ್ಮವು ಅಂತರಂಗದ ಆತ್ಮಕ್ಕೆ ಸಂಬಂಧಿಸಿದ್ದು.

ಭಾರತೀಯ ಸಂಸ್ಕೃತಿಯಲ್ಲಿ ಮಹಿಳೆಯರಿಗೆ ಶೀಲವೂ, ಪಾತಿವ್ರತ್ಯವೂ ಸರ್ವೋತ್ತಮವಾದ ಗುಣವೆಂದು ಸ್ವೀಕೃತವಾಗಿದೆ. ಈ ವಿಶ್ವಾಸವೂ ಮಹಿಳೆಯರಲ್ಲಿಯೇ ರಕ್ತಗತವಾಗಿ ಹರಿದು ಬಂದಿದೆ. ಒಬ್ಬ ಮಹಿಳೆ ಇನ್ನಾವ ಆರೋಪವನ್ನಾದರೂ ಸಹಿಸಿಕೊಂಡಾಳು, ಅವಳು ಶೀಲ ಭ್ರಷ್ಟೆಯೆಂಬ ಆಪಾದನೆಯನ್ನು

ಮಾತ್ರ ಸಹಿಸಿಕೊಳ್ಳಲಾರಳು. ಅವಳಿಗೆ ಶೀಲ ರಕ್ಷಣೆಯೇ ಪ್ರಧಾನವಾದದ್ದು. ಅವಳಿಗೆ ಭಯವಿರುವುದು ಶೀಲಭಂಗದಲ್ಲಿ. ಅದಕ್ಕೆ ಮುಖ್ಯ ಕಾರಣ - ಅವಳ ದೇಹರಚನೆ ಮತ್ತು ದೈಹಿಕ ದೌರ್ಬಲ್ಯ. ಇವೆರಡೂ ಗಂಡಸಿನ ದುಷ್ಟ ಪ್ರವೃತ್ತಿ, ಬಲಾಧಿಕ್ಯಗಳಿಗೆ ಶರಣಾಗಬೇಕಾಗುತ್ತದೆ. ಅರಣ್ಯದಲ್ಲಿದ್ದಾಗ ಸೀತೆಯನ್ನು ರಾಮಲಕ್ಷ್ಮಣರೂ, ದ್ರೌಪದಿಯನ್ನು ಪಾಂಡವರೂ ಎಡೆಬಿಡದೆ ಕಾವಲಾಗಿ ರಕ್ಷಿಸುತ್ತಿದ್ದರು. ದುರದೃಷ್ಟದಿಂದ ಒಂದು ಸಲ ಅವರಾರೂ ಆಶ್ರಮದಲ್ಲಿಲ್ಲದಾಗ ಸೀತೆಗೆ ರಾವಣನಿಂದಲೂ, ದ್ರೌಪದಿಗೆ ಸೈಂಧವನಿಂದಲೂ ಯಾವ ವಿಪತ್ತು ಪ್ರಾಪ್ತವಾಯಿತೆಂಬುದನ್ನು ರಾಮಾಯಣ ಮಹಾಭಾರತಗಳೇ ಸಾರುತ್ತವೆ.

ಈ ವಿಪತ್ತು ಸಾರ್ವಕಾಲಿಕವಾದದ್ದು. ಈ ಕಾಲದಲ್ಲಿಯೂ ಸಹ ಇಷ್ಟು ಜನ ಸಂದಣಿ, ಪೋಲೀಸ್ ಸ್ಟೇಷನ್ನುಗಳು, ದೂರವಾಣಿಯೇ ಮೊದಲಾದ ಆಧುನಿಕ ಸೌಕರ್ಯಗಳು ಇದ್ದರೂ ಶೀಲಭಂಗದ ಹೆದರಿಕೆ ಮಾತ್ರ ಸ್ತ್ರೀಯರಿಗೆ ತಪ್ಪಲಿಲ್ಲ. ಈಗ ಅದು ಇನ್ನೂ ಅಧಿಕವಾಗಿ ರಾಷ್ಟ್ರವನ್ನು ವ್ಯಾಪಿಸಿಕೊಂಡಿದೆ. ಸ್ತ್ರೀಯರಿಗೆ ಬುದ್ಧಿಶಕ್ತಿಯೂ, ದಕ್ಷತೆಯೂ ಇಲ್ಲವೆಂದು ಯಾವ ಧರ್ಮಶಾಸ್ತ್ರಕಾರನೂ ಹೇಳಿಲ್ಲ. ಆ ವಿಷಯದಲ್ಲಿ ಮಹಿಳೆಯು ಪುರುಷನಿಗಿಂತ ಎಂದಿಗೂ ಕಡಿಮೆಯವಳಲ್ಲ. ಅವಳಲ್ಲಿಯೂ ಪ್ರಶಂಸನೀಯವಾದ ಬುದ್ಧಿಶಕ್ತಿ ಇದೆ. ದಕ್ಷತೆ ಇದೆ. ಸಂಖ್ಯಾದೃಷ್ಟಿಯಿಂದ ನೋಡಿದಾಗ ಮಾತ್ರ ವಿದ್ಯಾವಂತರಲ್ಲಿ ಪುರುಷರಿಗಿಂತ ಸ್ತ್ರೀಯರ ಸಂಖ್ಯೆ ಕಡಿಮೆಯೆಂದು ತೋರಿದರೂ ಅದಕ್ಕೆ ಸಮರ್ಥನೀಯ ಕಾರಣಗಳಿವೆ. ಆ ವಿಚಾರವನ್ನು ಇನ್ನೊಂದೆಡೆ ಪ್ರಸ್ತಾವಿಸಬಹುದು.

ಮಹಿಳೆಯು ಸ್ವತಂತ್ರವಾಗಿ ದುಡಿಯುವುದೆಂದರೆ ಪ್ರಾಚೀನ ಕಾಲದಲ್ಲಿ ಇದ್ದ ಸೌಕರ್ಯ ಸಾಧನಗಳಾದರೂ ಯಾವುವು? ಈಗಿನಂತೆ ಕಛೇರಿಯಲ್ಲಿ ಕುಳಿತು ಗುಮಾಸ್ತೆಯ ಕೆಲಸ ಮಾಡುವುದಲ್ಲ. ಬೆರಳಚ್ಚಿನ ಯಂತ್ರದ ಮೇಲೆ ಬೆರಳಾಡಿಸುವುದಲ್ಲ. ಕೂಲಿ ಮಾಡಬೇಕು. ಕೃಷಿ ಮಾಡಬೇಕು ಅಥವಾ ಅಂಗಡಿ ಇಟ್ಟು ವ್ಯಾಪಾರ ಮಾಡಬೇಕು. ಒಂಟಿಯಾದ ಮಹಿಳೆಗೆ ಇದಾವುದೂ ಶಕ್ಯವಾದ್ದಲ್ಲ. ಅವಳ ಶೀಲಕ್ಕೆ , ಚಾರಿತ್ರ್ಯಕ್ಕೆ ಸರ್ವತ್ರ ಭಂಗದ ಭಯ ಉಂಟು. ಇದೆಲ್ಲವನ್ನೂ ಪರಿಶೀಲನೆ ಮಾಡಿಯೇ ಮಹಾತ್ಮನಾದ ಮನು ಅನುಕಂಪೆಯಿಂದ ''**ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ**'' ಎಂದು ಉದ್ಗರಿಸಿದ್ದಾನೆ. ಇದು ಸ್ತ್ರೀಯರ ಹಿತದೃಷ್ಟಿಯದು.

ಇನ್ನೊಂದೆಡೆಯಲ್ಲಿ -

**''ಇಮಂ ಹಿ ಸರ್ವವರ್ಣಾನಾಂ ಪಶ್ಯಂತೋ ಧರ್ಮಮುತ್ತಮಮ್ ।**
**ಯತಂತೇ ರಕ್ಷಿತುಂ ಭಾರ್ಯಾಂ ಭರ್ತಾರೋ ದುರ್ಬಲಾ ಅಪಿ॥''**

(ಮನು ೯-೬.)

ಎಂದಿದ್ದಾನೆ.

''ಸಮಸ್ತ ವರ್ಣದವರಿಗೂ ಭಾರ್ಯೆಯ ರಕ್ಷಣೆಯೂ, ಪಾಲನೆಯೂ ಶ್ರೇಷ್ಠವಾದ ಧರ್ಮವಾದ್ದರಿಂದ ಗಂಡಂದಿರು ಧನ, ವಿದ್ಯಾದಿಗಳಿಂದ ದುರ್ಬಲರಾದರೂ ಹೆಂಡತಿಯನ್ನು ಕಾಪಾಡಲು ಯತ್ನಿಸುತ್ತಾರೆ ''

ಹೀಗೆ ಭಾರ್ಯಾ ರಕ್ಷಣೆ ಲೋಕಸಿದ್ಧವಾದ ಸಹಜ ಧರ್ಮವಾಗಿದೆ. ಸಹಜವಾದ ಲೋಕಧರ್ಮವನ್ನು ಧರ್ಮಶಾಸ್ತ್ರವು ಕಲಿಸಬೇಕಾಗಿಲ್ಲ. ವಿಧಿಸಬೇಕಾಗಿಲ್ಲ. ಆದ್ದರಿಂದ **''ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ''** ಎಂಬ ವಾಕ್ಯವು ಲೋಕಸಿದ್ಧವಾದ್ದನ್ನು ಅನುಮೋದಿಸುತ್ತದೆಯೇ ಹೊರತು ಯಾವ ನಿಷೇಧವನ್ನೂ ಹೇರುವುದಿಲ್ಲ ಎಂದು ತಿಳಿಯಬೇಕು.

ಸ್ತ್ರೀಯರನ್ನು ರಕ್ಷಿಸಬೇಕೆಂದರೆ ಬಲಾತ್ಕಾರದಿಂದ ಅವರನ್ನು ಮನೆಯಲ್ಲಿ ಕೂಡಿ ಹಾಕಬೇಕೆಂದು ಅರ್ಥವಲ್ಲ. ಹಾಗೆ ಕೂಡಿಹಾಕಲು ಯಾರಿಗೂ ಸಾಧ್ಯವೂ ಇಲ್ಲ ಎಂದು ಮನು ಹೇಳುತ್ತಾನೆ. **'' ನ ಕಶ್ಚಿದ್ ಯೋಷಿತಃ ಶಕ್ತಃ ಪ್ರಸಹ್ಯ ಪರಿರಕ್ಷಿತುಮ್ ॥''** (ಮನು - ೯-೧೦.) ಆದ್ದರಿಂದ ಸಾಮೋಪಾಯವನ್ನವಲಂಬಿಸಿ ಅವರಲ್ಲಿ ಆದರ ವಿಶ್ವಾಸಗಳನ್ನು ತೋರಿಸಿದರೆ ಅವರು ಸನ್ಮಾರ್ಗದಲ್ಲಿಯೇ ನಿಲ್ಲುತ್ತಾರೆ. ಆ ಸಾಮೋಪಾಯಗಳನ್ನು ಮನುವೇ ಹೇಳುತ್ತಾನೆ -

**''ಅರ್ಥಸ್ಯ ಸಂಗ್ರಹೇ ಚೈನಾಂ ವ್ಯಯೇ ಚೈವ ನಿಯೋಜಯೇತ್ ।**
**ಶೌಚೇ ಧರ್ಮೇಽನ್ನಪಕ್ತ್ಯಾಂ ಚ ಪಾರಿಣಾಹ್ಯಸ್ಯ ವೇಕ್ಷಣೇ ॥''** (೯-೧೧)

ಹಣವನ್ನು ಜೋಪಾನವಾಗಿ ಇಟ್ಟುಕೊಳ್ಳುವುದು, ಮನೆಗೆ ಬೇಕಾದ ಪದಾರ್ಥಗಳಿಗಾಗಿ ಖರ್ಚು ಮಾಡುವುದು, ಈ ಕೆಲಸಗಳನ್ನು ಪತ್ನಿಗೆ ವಹಿಸಬೇಕು. (ಅವಳಿಗೆ ಧರ್ಮಶಾಸ್ತ್ರದ ಪರಿಚಯವಿಲ್ಲವಾದ್ದರಿಂದ) ಶೌಚ, ಧರ್ಮಗಳ ವಿಷಯವನ್ನು ತಿಳಿಸಿಕೊಡತಕ್ಕದ್ದು. (ದೇವತಾಕಾರ್ಯಕ್ಕಾಗಿ ) ಶುಚಿಯಾದ ಅಡಿಗೆ ಮಾಡುವುದು, ಹಾಸಿಗೆ ಪಾತ್ರೆ ಮುಂತಾದ ಗೃಹೋಪಕರಣಗಳನ್ನು ವ್ಯವಸ್ಥಿತವಾಗಿ ನೋಡಿಕೊಳ್ಳುವುದು, ಇವೆಲ್ಲವೂ ಸ್ತ್ರೀಯರ ಕರ್ತವ್ಯವಾಗಿರಬೇಕು.

**ಇವೆಲ್ಲವೂ ಮುಖ್ಯವಾಗಿ ದ್ವಿಜ ಸ್ತ್ರೀಯರಿಗೆ ಅನ್ವಯಿಸುತ್ತದೆ ಎಂಬುದು ನೆನಪಿನಲ್ಲಿರಲಿ.** ಅದರಲ್ಲಿಯೂ ಬ್ರಾಹ್ಮಣನಿಗೆ ಧನ ಸಂಪಾದನೆಗಾಗಿ ಇರತಕ್ಕದ್ದು

ಮೂರೇ ಮಾರ್ಗ. ಅಧ್ಯಾಪನ, ಯಾಜನೆ, ಪ್ರತಿಗ್ರಹ. ಇದಕ್ಕಾಗಿ ಆತನು ಹೊರಗೆ ಹೋಗಲೇಬೇಕು. ದಿನಕ್ಕೆ ಮೂರುಸಲವಾದರೂ ಮನೆಯಲ್ಲಿ ಧಾರ್ಮಿಕ ಕೃತ್ಯ ನಡೆಯಬೇಕಾಗಿದೆ. ಪ್ರಾತಃ ಕಾಲ, ಸಾಯಂಕಾಲಗಳಲ್ಲಿ ಸಂಧ್ಯಾ ವಂದನೆಯಲ್ಲದೆ ಅಗ್ನಿಹೋತ್ರ ಉಂಟು. ಮಧ್ಯಾಹ್ನದಲ್ಲಿ ದೇವಪೂಜೆ, ವೈಶ್ವದೇವ, ಅತಿಥಿ ಸತ್ಕಾರಾದಿಗಳು ನಡೆಯಬೇಕು. ಮನೆಗೆ ಬಂಧುಗಳೂ ಬರುತ್ತಾರೆ. ಅತಿಥಿಗಳೂ ಬರುತ್ತಾರೆ. ಮನೆಯಲ್ಲಿ ಕೈಲಾಗದ ವೃದ್ಧರಿರುತ್ತಾರೆ. ಚಿಕ್ಕ ಮಕ್ಕಳು ಇರುತ್ತಾರೆ. ಗೃಹಿಣಿಯು ಮನೆಗೆ ಬೀಗ ಹಾಕಿ ಕಛೇರಿಗೆ ಕೆಲಸಕ್ಕೆ ಹೋದರೆ ಗೃಹಕೃತ್ಯವು ನಡೆಯುವುದು ಹೇಗೆ? ಇದಾವುದನ್ನು ಪರಿಶೀಲಿಸದೆ, ಬಾಯಿಗೆ ಬಂದಂತೆ ಮನುವನ್ನು ನಿಂದಿಸತಕ್ಕವರಿಗೆ ವಿವೇಚನಾಶಕ್ತಿ ಇದೆಯೆಂದು ಹೇಳಬಹುದೆ? ''ಗೃಹದಲ್ಲಿ ವೈಶ್ವದೇವಾದಿ ಧಾರ್ಮಿಕ ಕೃತ್ಯಗಳಾವುದೂ ಬೇಡ, ಬಂಧುಗಳೂ ಅತಿಥಿಗಳೂ ಹೋಟಲುಗಳಲ್ಲಿರಲಿ, ಮುದುಕರನ್ನು ವೃದ್ಧಾಶ್ರಮಕ್ಕೆ ತಳ್ಳೋಣ, ಮಕ್ಕಳನ್ನು ನೋಡಿಕೊಳ್ಳುವುದಕ್ಕೆ 'ಬೇಬಿ ಸಿಟಿಂಗ್' ಮುಂತಾದ ವ್ಯವಸ್ಥೆ ಇದೆ. ನಾವು ಹೋಟಲಿನಲ್ಲಿ ತಿಂದು ರಾತ್ರಿ ಮನೆ ಸೇರಿದರಾಯಿತು.'' ಎನ್ನತಕ್ಕವರಿಗೆ ಧರ್ಮಶಾಸ್ತ್ರದ ಗೊಡವೆಯೇ ಬೇಡ, ನಿಂದಿಸುವುದೂ ಬೇಡ. ಹಯಾತ್ ಸಾಬಿಗೆ ಏಕಾದಶಿಯ ಚಿಂತೆ ಏಕೆ? ಮನುವಾದರೋ ''**ಆತ್ಮಾನಮಾತ್ಮನಾ ಯಾಸ್ತು ರಕ್ಷೇಯುಸ್ತಾಃ ಸುರಕ್ಷಿತಾಃ॥** '' (೯-೧೩) ''ಯಾವ ಸ್ತ್ರೀಯರು (ಧರ್ಮಾಧರ್ಮಗಳನ್ನು ತಿಳಿದು) ತಮ್ಮನ್ನು ತಾವೇ ರಕ್ಷಿಸಿಕೊಳ್ಳುತ್ತಾರೋ ಅವರು ಸುರಕ್ಷಿತರು'' ಎಂದು ಕಡೆಯ ಮಾತನ್ನು ಹೇಳಿಬಿಟ್ಟಿದ್ದಾನೆ. ಮನುವಿನ ಹೃದಯದಲ್ಲಿ ಮಹಿಳೆಯರ ವಿಷಯವಾಗಿ ಯಾವ ಭಾವನೆ ಇತ್ತೆಂಬುದನ್ನು ತಿಳಿಯುವುದಕ್ಕೆ ಈ ಒಂದು ಶ್ಲೋಕವೇ ಸಾಕು.

**''ಪ್ರಜನಾರ್ಥಂ ಮಹಾಭಾಗಾ ಪೂಜಾರ್ಹಾ ಗೃಹದೀಪ್ತಯಃ।**
**ಸ್ತ್ರಿಯಃ ಶ್ರಿಯಶ್ಚಗೇಹೇಷು ನ ವಿಶೇಷೋಽಸ್ತಿ ಕಶ್ಚನ॥''** (೯-೨೬)

''ಮಹಿಳೆಯರು ಮಕ್ಕಳನ್ನು ಹೆತ್ತು ಸಂತತಿಯನ್ನು ಬೆಳೆಸಿ ಉಳಿಸತಕ್ಕವರು. ಆದ್ದರಿಂದ ಅವರು ಸಮಾಜವನ್ನು ಉಪಕರಿಸುವ ಭಾಗ್ಯಶಾಲಿಗಳು. ಗೌರವಕ್ಕೆ ಅರ್ಹರಾದವರು. ಮನೆಗೆ ಬೆಳಕು ನೀಡತಕ್ಕವರು. ಮನೆಗಳಲ್ಲಿ ಸ್ತ್ರೀಯರೆಂದರೆ ಲಕ್ಷ್ಮೀದೇವಿಯರಿದ್ದಂತೆ. ಸ್ತ್ರೀಯರಿಗೂ ಸಾಕ್ಷಾತ್ ಲಕ್ಷ್ಮಿಗೂ ವ್ಯತ್ಯಾಸವೇನೂ ಇಲ್ಲ.'' ಈ ಪ್ರಕಾರವಾಗಿ ಉದ್ಗರಿಸಿದ ಮನು ಮಹಾತ್ಮನು ಅನ್ಯತ್ರ ಬಿಗಿಯಾದ ಮಾತುಗಳನ್ನಾಡಿದರೆ, ಅದು ಮಕ್ಕಳಿಗೆ ತಂದೆಯು ಹೇಳುವ ಬುದ್ಧಿವಾದವೆಂದು ತಿಳಿಯಬೇಕು. ತಾಯಿಯಾಗಲಿ, ತಂದೆಯಾಗಲಿ ಕೆಲವು ಸಂದರ್ಭಗಳಲ್ಲಿ ಕರ್ಕಶ ನುಡಿಯನ್ನಾಡಬೇಕಾಗುತ್ತದೆ. ಅದು ಮಕ್ಕಳ ಹಿತಕ್ಕಾಗಿ ಮಕ್ಕಳಿನ ಮೇಲಿನ ವಾತ್ಸಲ್ಯದಿಂದ

ಬಂದದ್ದು, ದ್ವೇಷದಿಂದಲ್ಲ ಎಂಬುದು ಲೋಕ ಪ್ರಸಿದ್ಧವಾದದ್ದು. ಹಾಗಲ್ಲದೆ ಬೈಯಬೇಕೆಂದೇ ಸೊಂಟಕಟ್ಟಿ ನಿಂತರೆ, ಜಗತ್ತಿನಲ್ಲಿರುವ ಸಕಲ ಸಜ್ಜನರನ್ನೂ ಬೈಯಲು ಸಾಧ್ಯವಿದೆ. ಬೈಗಳಿಂದ ತಪ್ಪಿಸಿಕೊಳ್ಳುವ ಒಬ್ಬ ಗಂಡಸೂ ಒಬ್ಬ ಹೆಂಗಸೂ ಉಳಿಯುವುದಿಲ್ಲ.

ಸ್ತ್ರೀಯರ ವಿಷಯವಾಗಿ ಮನುವಿನ ಹಿತಚಿಂತನೆ ಹೀಗಿದೆ -

**''ಕಾಮ ಮಾಮರಣಾತ್ತಿಷ್ಠೇತ್ ಗೃಹೇ ಕನ್ಯರ್ತುಮತ್ಯಪಿ ।**
**ನ ಚೈವೇನಾಂ ಪ್ರಯಚ್ಛೇತ್ತುಗುಣ ಹೀನಾಯ ಕರ್ಹಿಚಿತ್ ॥ ''** (೯-೮೯)

''ಕನ್ಯೆಯು ಋತುಮತಿಯಾದರೂ ಮದುವೆಯಾಗದೆ ಮರಣಪರ್ಯಂತವೂ ಮನೆಯಲ್ಲಿಯೇ ಇರಲಿ. ಗುಣಹೀನನಾದವನಿಗೆ ಮಾತ್ರ ಅವಳನ್ನು ಮದುವೆ ಮಾಡಿಕೊಡಬಾರದು.'' ಹೆಣ್ಣು ಮಕ್ಕಳ ಮೇಲೆ ಮನುವಿಗಿರುವ ಕಳಕಳಿ ಇದು. ಮದುವೆಯಾಗಲು ಕನ್ಯೆಗೂ ಸ್ವಾತಂತ್ರ್ಯ ಉಂಟು.

**''ತ್ರೀಣಿ ವರ್ಷಾಣ್ಯ ದೀಕ್ಷೇತ ಕುಮಾರ್ಯೃತುಮತೀ ಸತೀ ।**
**ಊರ್ಧ್ವಂತು ಕಾಲಾದೇತಸ್ಮಾತ್ ವಿಂದೇತ ಸದೃಶಂ ಪತಿಮ್ ॥''**

(ಮನು ೯-೯೦)

''ಕುಮಾರಿಯು ಋತುಮತಿಯಾದ ಮೇಲೆ, ತಂದೆ ತಾಯಿಗಳು ಅನುರೂಪನಾದ ವರನನ್ನು ಹುಡುಕಿ ಮದುವೆ ಮಾಡುವರೆ? - ಎಂದು ಮೂರು ವರ್ಷಗಳವರೆಗೆ ಕಾಯಬೇಕು. ಮೂರು ವರ್ಷವಾದರೂ ಮದುವೆಯಾಗದಿದ್ದರೆ, ಅವಳು ತನಗೆ ಬೇಕಾದ ಅನುರೂಪನಾದ ವರನನ್ನು ಹುಡುಕಿಕೊಂಡು ತಾನೇ ಮದುವೆಯಾಗಬಹುದು.'' ಇನ್ನಾವ ಸ್ವಾತಂತ್ರ್ಯ ಬೇಕು? ಸ್ವಾತಂತ್ರ್ಯವೆಂದರೆ ಸ್ವೇಚ್ಛಾಚಾರವೆ? ಅಂತಹ ಸ್ವೇಚ್ಛಾಚಾರವು ಗಂಡಸಿಗೂ ಇಲ್ಲ.

ಗೃಹಸ್ಥಾಶ್ರಮವು ಬಹಳ ದೊಡ್ಡದು. ಜವಾಬ್ದಾರಿಯುಳ್ಳದ್ದು. ಬ್ರಹ್ಮಚಾರಿ, ವಾನಪ್ರಸ್ಥ, ಸಂನ್ಯಾಸಿಗಳು ಗೃಹಸ್ಥನಿಂದ ಉಪಜೀವಿಸಿಕೊಂಡಿರುತ್ತಾರೆ. ಅವರಿಗೆ ಬೇಕಾದ ಅನ್ನ, ವಸ್ತ್ರ - ಮುಂತಾದ ಜೀವನ ಸಾಮುಗ್ರಿಗಳನ್ನು ಗೃಹಸ್ಥನೇ ಒದಗಿಸಬೇಕಾದ್ದರಿಂದ ಗೃಹಸ್ಥಾಶ್ರಮವು ಪ್ರಮುಖವಾದದ್ದೆಂದು ಎಲ್ಲ ಧರ್ಮಶಾಸ್ತ್ರಗಳೂ ಏಕಕಂಠದಿಂದ ಹೇಳುತ್ತವೆ. ಈ ಆಶ್ರಮದ ಸಮೀಚೀನವಾದ ನಿರ್ವಹಣೆ ಪತ್ನಿಯಿಂದಲೇ ಸಾಧ್ಯವೆಂಬುದನ್ನು ಎಲ್ಲರೂ ಅರಿತಿದ್ದರು. ಸರ್ವವರ್ಣದವರಿಗೂ ವಿವಾಹವು ಒಂದು ಸಂಸ್ಕಾರವೆಂದೇ ಭಾರತೀಯರ ನಂಬಿಕೆ. ಸಂಸ್ಕಾರವೆಂದರೆ ಗುಣಾಧಾನ ಮತ್ತು ದೋಷಾಪನಯನ. ಶಮದಮಾದಿ

ಸದ್ಗುಣಗಳನ್ನು ಪಡೆಯುವುದು ಮತ್ತು ಕಾಮಕ್ರೋಧಾದಿ ದುರ್ಗುಣಗಳನ್ನು ಹೊರದೂಡುವುದು ಸಂಸ್ಕಾರ. ವಿವಾಹದಲ್ಲಿ ಮಾನವ ಸಹಜವಾದ ಕಾಮವಾಸನೆಯ ತೃಪ್ತಿಯೂ ಸೇರಿದೆ. ಕಾಮವಾಸನೆಯನ್ನು ಥಟ್ಟನೆ ದೂರಮಾಡಲು ಶಕ್ಯವಾದ್ದಲ್ಲ. ಅದು ಕ್ರಮವಾಗಿ ಶಿಥಿಲವಾಗುತ್ತ ನಾಶವಾಗಬೇಕು. ಈ ಕಾರಣದಿಂದ ಕಾಮವಾಸನೆಯ ತೃಪ್ತಿಯೂ ಕೆಲವು ನಿಯಮಗಳಿಗೆ ಬದ್ಧವಾಗಿತ್ತು. ಸಕಲ ಆಶ್ರಮಗಳ, ಸರ್ವಜಾತಿಯವರ, ಮನುಷ್ಯ ಮಾತ್ರರ ಜೀವನದ ಪರಮೋದ್ದೇಶವು ಆತ್ಮಜ್ಞಾನಕ್ಕಾಗಿಯೇ. ಆತ್ಮಜ್ಞಾನದ ದಾರಿಯನ್ನು ತೋರಿಸುವುದಕ್ಕಾಗಿಯೇ ಎಂಬುದು ಭಾರತೀಯರ ಅಚಲ ವಿಶ್ವಾಸವಾದ್ದರಿಂದ ಆ ದಿಶೆಯಲ್ಲಿ ಮನುಷ್ಯನನ್ನು ನಿಯಮಿಸುವುದಕ್ಕಾಗಿ ಮನುಸ್ಮೃತಿಯೇ ಮೊದಲಾದ ಧರ್ಮಶಾಸ್ತ್ರಗಳ ಉದಯವಾಯಿತು. ಧರ್ಮಶಾಸ್ತ್ರಗಳು ರಾಜಕೀಯದ ಕಾನೂನುಗಳಲ್ಲವೆಂಬುದನ್ನು ಮರೆಯಬಾರದು.

ಧರ್ಮಶಾಸ್ತ್ರಕಾರರಿಗೂ ತಾಯಂದಿರಿದ್ದರು, ಪತ್ನಿಯರಿದ್ದರು, ಅಕ್ಕ-ತಂಗಿಯರೂ ಹೆಣ್ಣು ಮಕ್ಕಳೂ ಇದ್ದಿರಬೇಕು ! ಆಧುನಿಕ ಸ್ತ್ರೀ ವಾದಿಗಳ ಹೃದಯದಿಂದ ಮಹಿಳೆಯರ ವಿಷಯವಾಗಿ ಪ್ರೀತಿ, ವಾತ್ಸಲ್ಯ, ಅನುಕಂಪಗಳು ಉಕ್ಕಿಹರಿಯುವಂತೆ ಧರ್ಮಶಾಸ್ತ್ರಕಾರರ ಹೃದಯದಲ್ಲಿಯೂ ಇದ್ದಿರಬೇಕಲ್ಲವೆ? '' ನಾವು ಮಾತ್ರ ಮೃದು ಹೃದಯರು, ಅವರೆಲ್ಲರೂ ಕಠೋರ ಹೃದಯರು'' ಎಂಬುದಕ್ಕೆ ನಿಮಿತ್ತವೇನಿದೆ? ಆಧಾರವೇನು?

ವಿವಾಹ ವಿಚ್ಛೇದನವೆಂಬ ಶಬ್ದವೇ ಮನುಸ್ಮೃತಿಯಲ್ಲಿಲ್ಲ. ಒಂದು ಸಲ ಮದುವೆಯಾದ ಮೇಲೆ ಮರಣ ಪರ್ಯಂತವೂ ಅವಳು ಪತ್ನಿಯೇ, ಮರಣವಾದ ಮೇಲೂ ಪತ್ನಿಯೇ. ಸತ್ತು ಹೋದ ಮೇಲೂ ತಾಯಿ ತಾಯಿಯೇ. ಶ್ರಾದ್ಧವಿಧಿಯನ್ನು ಅವಲೋಕಿಸಿದರೆ ಇದೆಲ್ಲವೂ ಸ್ಪಷ್ಟವಾಗುತ್ತದೆ. ವಿವಾಹ ವಿಚ್ಛೇದನವನ್ನು ವಿವಾಹವೆಂಬುದು '' ಒಂದು ಕಂಟ್ರ್ಯಾಕ್ಟ್'' ಎಂದು ಒಪ್ಪಿಕೊಂಡವರಿಗೆ ಈ ಭಾವನೆಯುಂಟೇನು?

''**ದಂಪತ್ಯೋರ್ನವಿಭಾಗೋ ವಿದ್ಯತೇ, ಪಾಣಿಗ್ರಹಣಾದ್ಧಿ ಸಹತ್ವಂ ಕರ್ಮಸು, ತಥಾ ಪುಣ್ಯಫಲೇಷು ಚ** '' ಎಂದು ಧರ್ಮಸೂತ್ರಕಾರರು ಮನುವಿನ ಆಶಯವನ್ನು ವಿವರಿಸಿದ್ದಾರೆ. ವಿವಾಹ ಸಮಯದಲ್ಲಿ ''**ಧರ್ಮೇ ಚ ಅರ್ಥೇ ಚ ಕಾಮೇ ಚ ನಾತಿಚರಾಮಿ**'' ಎಂದು ವರನು ವಧುವಿಗೆ ಅಗ್ನಿ ಸಾಕ್ಷಿಕವಾಗಿ ಮಾತುಕೊಡುತ್ತಾನೆ. ಮನುವನ್ನು ಹೀಗಳೆಯುವ ಈಗಿನ ನ್ಯಾಯ ಶಾಸ್ತ್ರವಿದರು ಹೀಗೆ ಪ್ರತಿಜ್ಞೆ ಮಾಡುತ್ತಾರೇನು? ಹೀಗೆ ಮಾತು ಕೊಟ್ಟು ನಡೆಸುತ್ತಾರೇನು? ಮಡದಿಯು ಭ್ರಷ್ಟಳಾದರೆ, ಪತಿತಳಾದರೆ ಅವಳನ್ನು ದಾಂಪತ್ಯ ಧರ್ಮದಿಂದ ಹೊರಗಿಡಬಹುದು.

ಆದರೂ ಅವಳಿಗೆ ಅನ್ನ ಬಟ್ಟೆಗಳನ್ನು ಕೊಟ್ಟು ಪೋಷಣೆ ಮಾಡಲೇಬೇಕು ಎನ್ನುತ್ತಾನೆ ಮನು. ಆದರೆ ಒಂದು ವೇಳೆ ಪುರುಷನೇ ತನ್ನ ಪ್ರತಿಜ್ಞೆಯನ್ನು ಮುರಿದು ಅನ್ಯ ಸ್ತ್ರೀ ಸಂಗ ಮಾಡಿದರೆ, ಅವನಿಗೆ ಕಠೋರ ದಂಡನೆಯನ್ನು ರಾಜನು ವಿಧಿಸತಕ್ಕದ್ದು. **''ದಾರವ್ಯತಿಕ್ರಮೀ ಖರಾಜಿನಂ ಬಹಿರ್ಲೋಮ ಪರಿಧಾಯ ದಾರವ್ಯತಿಕ್ರಮಿಣೇ ಭಿಕ್ಷಾಂ ಇತಿ ಸಪ್ತಾಗಾರಾಣಿ ಚರೇತ್ । ಸಾ ವೃತ್ತಿಃ ಷಣ್ಮಾಸಾನ್''** ಎಂದು ಆಪಸ್ತಂಬ ಧರ್ಮಸೂತ್ರವು ಹೇಳುತ್ತದೆ. ಧರ್ಮ, ಅರ್ಥ, ಕಾಮ - ಈ ಮೂರರಲ್ಲಿ ಗಂಡನು ವಿವಾಹ ಪ್ರತಿಜ್ಞೆಯನ್ನು ಅತಿಕ್ರಮಿಸಿ ನಡೆದರೆ, ಈ ರೀತಿಯಲ್ಲಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಅವನಿಗೆ ದಾರವ್ಯತಿಕ್ರಮಿ - ಪತ್ನಿಯನ್ನು ಮೀರಿ ಪ್ರತಿಜ್ಞಾಭಂಗ ಮಾಡಿದವನು ಎಂದು ಹೆಸರು. ಈ ದಾರವ್ಯತಿಕ್ರಮಿಯು ಕತ್ತೆಯ ಚರ್ಮವನ್ನು, ಅದರ ಕೂದಲು ಹೊರಗೆ ಕಾಣುವಂತೆ ಹೊದೆದುಕೊಂಡು ''ದಾರವ್ಯತಿಕ್ರಮಿಯಾದ ನನಗೆ ಭಿಕ್ಷೆ ಹಾಕಿರಿ !'' ಎಂದು ಹೇಳುತ್ತಾ ಏಳು ಮನೆಗಳಿಗೆ ಹೋಗಿ ಭಿಕ್ಷೆ ಬೇಡಿ ತಂದು ಜೀವಿಸತಕ್ಕದ್ದು. ಈ ರೀತಿಯಲ್ಲಿ ಆರು ತಿಂಗಳು ನಡೆಯಬೇಕು'' ಪುರುಷನಿಗೆ ಎಂತಹ ಅವಮಾನಕರವಾದ ಕ್ರೂರದಂಡನೆ ಇದು! ಈ ಜಗತ್ತಿನಲ್ಲಿ ಇನ್ನಾವ ದೇಶದಲ್ಲಾಗಲಿ, ಅನ್ಯಮತದಲ್ಲಾಗಲಿ ಈ ಬಗೆಯ ಶಿಕ್ಷೆಯನ್ನು ಪುರುಷರಿಗೆ ವಿಧಿಸಿದ್ದಾರೆಯೆ? ಇಂತಹ ಶಿಕ್ಷೆಯನ್ನು ವಿಧಿಸುವ ಕಾನೂನನ್ನು ಈ ಸ್ತ್ರೀ ವಾದಿಗಳು ಒಪ್ಪುತ್ತಾರೇನು? ಧರ್ಮಕಾರ್ಯದಲ್ಲಿ ಪತ್ನಿಯನ್ನು ಸೇರಿಸಿಕೊಳ್ಳದಿದ್ದರೆ ಅಥವಾ ಪತ್ನಿಗೆ ತಿಳಿಸದೆ ಅವಳ ಸಂಮತಿಯಿಲ್ಲದೆ ದಾನಧರ್ಮಗಳನ್ನು ಮಾಡಿದರೆ ಧರ್ಮಾತಿಕ್ರಮವಾಗುತ್ತದೆ. ತನ್ನಲ್ಲಿರುವ ಆಸ್ತಿ, ಧನ ಸಂಪಾದನೆ ಮುಂತಾದ ಆರ್ಥಿಕ ವಿಷಯವನ್ನು ಹೆಂಡತಿಗೆ ತಿಳಿಸದೆ ಗೋಪ್ಯವಾಗಿಟ್ಟರೆ ಅರ್ಥವ್ಯತಿಕ್ರಮವಾಗುತ್ತದೆ. ಕಾಮವೆಂದರೆ ಸ್ತ್ರೀಪುರುಷರ ಲೈಂಗಿಕ ಸಂಬಂಧವು ಮಾತ್ರವೆಂದು ತಿಳಿಯಕೂಡದು. ವಿಷಯಭೋಗವೆಲ್ಲವೂ ಕಾಮವೇ. ಪತ್ನಿಯನ್ನು ವಂಚಿಸಿ ಯಾವ ಯಾವ ಸುಖಭೋಗವನ್ನನುಭವಿಸಿದರೂ ಕಾಮದ ಅತಿಚಾರವಾಗುತ್ತದೆ. ಈ ಧರ್ಮಾರ್ಥಕಾಮಗಳೇ ತ್ರಿವರ್ಗಗಳು. ಏಕದೇಹ ನ್ಯಾಯದಿಂದ ಪತಿಪತ್ನಿಯರಿರಬೇಕೆಂದೂ ಸುಖ ದುಃಖಗಳನ್ನು ಈರ್ವರೂ ಸಮವಾಗಿ ಹಂಚಿಕೊಳ್ಳಬೇಕೆಂದೂ ಧರ್ಮಶಾಸ್ತ್ರದ ವಿಧಿ. ಈ ಬಗೆಯಲ್ಲಿ ಪತಿ ಪತ್ನಿಯರ ಸಮಾನತೆಯನ್ನು ಮನುವೇ ಮೊದಲಾದ ನಮ್ಮ ಧರ್ಮಶಾಸ್ತ್ರಕಾರರು ವಿಧಿಸಿದ್ದಾರೆ. ಮದುವೆಯಾಗುವ ಕನ್ಯೆ ಎಷ್ಟು ಬಡವಳಾಗಿರಲಿ, ಅನಾಥೆಯಾಗಿರಲಿ, ದಿಕ್ಕಿಲ್ಲದ ಭಿಕ್ಷುಕಿಯಾಗಿರಲಿ, ಮದುವೆಯಾದೊಡನೆ ಗಂಡನ ಸಕಲೈಶ್ವರ್ಯಗಳ ಮೇಲೆ, ಸಮಸ್ತ ಆಸ್ತಿಗಳ ಮೇಲೆ ಗಂಡನಿಗೆ ಸಮವಾದ ಅಧಿಕಾರ ಬರುತ್ತದೆಯೆಂದು ನಮ್ಮ ಧರ್ಮಶಾಸ್ತ್ರಗಳು ವಿಧಿಸುತ್ತವೆ. ಧರ್ಮ ಶಾಸ್ತ್ರಕಾರರು ಸ್ತ್ರೀದ್ವೇಷಿಗಳೆಂದು ಯಾವ ನಾಲಗೆಯಿಂದ ಹೇಳುತ್ತೀರಿ?

ಪೂರ್ವಕಾಲದಲ್ಲಿ ಗಾರ್ಗೀ, ಮೈತ್ರೇಯೀ, ಅಪಾಲಾ, ವಿಶ್ವವಾರಾ, ರೋಮಶಾ, ಮಮತಾ, ಉಶಿಜಾ, ಘೋಷಾ, ಸುಲಭಾ ಮುಂತಾದ ಬ್ರಹ್ಮವಾದಿನಿಯರಿದ್ದರು. ಅವರು ವೇದಾಧ್ಯಯನ ಮಾಡಿದವರೂ ಮಂತ್ರದರ್ಶಿನಿಯರೂ ಆಗಿದ್ದರು. ಕೆಲವು ನೈಸರ್ಗಿಕ ಕಾರಣಗಳಿಂದ ಸ್ತ್ರೀಯರಿಗೆ ವೇದಾಧ್ಯಯನವು ಬಿಟ್ಟು ಹೋಯಿತು. ವೇದಾಧ್ಯಯನ ಮಾಡಲು ಉಪನಯನವಾಗಿರಲೇಬೇಕು. ಗುರುಕುಲ ವಾಸ, ಭಿಕ್ಷಾಚರ್ಯೆ ಮುಂತಾದ ನಿಯಮಗಳನ್ನು ಪಾಲಿಸುವುದು ಅಶಕ್ಯವಾಯಿತು. ಸ್ತ್ರೀಯರು ರಜಸ್ವಲೆಯರಾದಾಗ, ಗರ್ಭಿಣಿಯರಾದಾಗ, ಬಾಣಂತಿಯರಾದಾಗ ಸಂಧ್ಯಾವಂದನಾದಿ ನಿಯಮಗಳನ್ನು ಪಾಲಿಸುವುದು ಹೇಗೆ? ಜೊತೆಗೆ ಗೃಹಿಣೀ ಧರ್ಮವನ್ನೂ ಪಾಲಿಸಬೇಕಾಗಿತ್ತು. ಇದೊಂದು ಭಾರೀ ಹೊರೆಯಾಗಿ ಬಿಡುತ್ತದೆಯೆಂದು ಧರ್ಮಶಾಸ್ತ್ರಕಾರರೇ ಅವರಿಗೆ ಕಾರುಣ್ಯದಿಂದ ವಿನಾಯಿತಿಯನ್ನಿತ್ತಿದ್ದಾರೆ. ಇದು ಕನಿಕರದಿಂದ, ದ್ವೇಷದಿಂದಲ್ಲ. **''ವೈವಾಹಿಕೋ ವಿಧಿಃ ಸ್ತ್ರೀಣಾಂ ಸಂಸ್ಕಾರೋ ವೈದಿಕಃ ಸ್ಮೃತಃ''** ಎಂದಿದ್ದಾನೆ ಮನು. (೨-೬೭) ಸ್ತ್ರೀಯರಿಗೆ ವಿವಾಹವೇ ಉಪನಯನವೆಂದು ತಾತ್ಪರ್ಯ. ಇತರ ಶಾಸ್ತ್ರಕಾವ್ಯಾದಿಗಳ ಅಧ್ಯಯನಕ್ಕೆ ನಿಷೇಧವೇನೂ ಇರಲಿಲ್ಲ. ತಂದೆ, ಸಹೋದರ, ಸೋದರ ಮಾವ, ಪತಿ ಇವರಿಂದ ವಿದ್ಯಾಭ್ಯಾಸವನ್ನು ಮಾಡಲು ಅವಕಾಶವಿತ್ತು. ಆದ್ದರಿಂದಲೇ ಶೀಲಾ, ವಿದ್ಯಾ, ಮೋರಿಕಾ, ವಿಜ್ಜಕಾ, ವಿಜಯಾ, ಗಂಗಾದೇವೀ, ತಿರುಮಲಾಂಬಾ, ರಾಮಭದ್ರಾ - ಮುಂತಾದ ಸ್ತ್ರೀಯರು ಕಾವ್ಯಗಳನ್ನು ರಚಿಸಿ ಕವಯತ್ರಿಯರೆಂದು ಕೀರ್ತಿಯನ್ನು ಗಳಿಸಿದ್ದಾರೆ. ಮಂಡನಮಿಶ್ರರ ಪತ್ನಿಯಾದ ಉಭಯಭಾರತಿಯು ಮಹಾವಿದುಷಿಯೆಂದು ಕೀರ್ತಿ ಭಾಜನಳಾಗಿದ್ದಳು. ಅವಳು ಶ್ರೀ ಶಂಕರಾಚಾರ್ಯರೊಡನೆ ವಾದಮಾಡುವಷ್ಟು ವೈದುಷ್ಯವನ್ನು ಪಡೆದಿದ್ದಳು. ಮುಖ್ಯವಾಗಿ ವಿದ್ಯಾ ಶಾಲೆಗಳು ದುರ್ಲಭವಾದದ್ದೇ ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಅಡ್ಡಿಯನ್ನುಂಟು ಮಾಡಿತು. ಇದಕ್ಕೆ ಧರ್ಮಶಾಸ್ತ್ರಕಾರರು ಹೊಣೆಯಲ್ಲ.

ದೇಹದೌರ್ಬಲ್ಯ, ಗರ್ಭಧಾರಣೆ - ಮುಂತಾದ ನಾನಾ ಕಾರಣಗಳಿಂದ ಗೃಹಕೃತ್ಯದ ಆರ್ಥಿಕ ನಿರ್ವಹಣೆಯನ್ನೂ, ರಕ್ಷಣೆಯನ್ನೂ ಮಾಡಲು ಮಹಿಳೆಯರಿಗೆ ಸಾಧ್ಯವಾಗದ ನಿಮಿತ್ತದಿಂದ , ಆ ಹೊಣೆಗಾರಿಕೆಯು ಪುರುಷರ ಮೇಲೆ ಬಿದ್ದಿತು. ಈ ಭೂಮಂಡಲದಲ್ಲಿ ನಾಗರಿಕತೆಯನ್ನರಿಯದ ಕಾಡು ಜನರಲ್ಲಿ ಸಹ ಪುರುಷ ಪ್ರಾಧಾನ್ಯವಿರುವುದನ್ನು ಕಾಣಬಹುದು. ಇದು ದಬ್ಬಾಳಿಕೆಯಿಂದ ಆದದ್ದಲ್ಲ. ನಿಸರ್ಗ ಪ್ರಾಪ್ತವಾದದ್ದು. ಮನು ಮಹರ್ಷಿಯು ಸ್ತ್ರೀಯರನ್ನು ಪಕ್ಷಪಾತ ದೃಷ್ಟಿಯಿಂದ ಕಂಡಿದ್ದಾನೆಂಬುದು ಅವಿಚಾರಿತ ರಮಣೀಯವಾದ ದುಡುಕಿನ ನುಡಿ.

ಹಾಗೆ ಹೇಳುವುದಾದರೆ, ಮನ್ವಾದಿ ಧರ್ಮಶಾಸ್ತ್ರಕಾರರೆಲ್ಲರೂ ಪುರುಷದ್ವೇಷಿಗಳೆಂದು ಸಾಧಿಸಬಹುದು! ಸೂರ್ಯೋದಯವಾಗುವುದಕ್ಕೂ ಮೊದಲಿನಿಂದಲೇ ಮಧ್ಯರಾತ್ರಿಯವರೆಗೆ ಹೇರಿರುವ ಧಾರ್ಮಿಕ ನಿಯಮಗಳು ಅಲೆ ಅಲೆಯಾಗಿ ಬಂದು ತೆರಪಿಲ್ಲದೆ ಗಂಡಸರ ಮೇಲೆ ಎರಗುತ್ತವೆ. ಪುರುಷನು ಹೊಟ್ಟೆಪಾಡಿಗಾಗಿ ದುಡಿಯುವುದಕ್ಕೂ ನೂರಾರು ನಿರ್ಬಂಧಗಳು! ಆದರೂ ದುಡಿದು ಹೆಂಡತಿ ಮಕ್ಕಳನ್ನು ಸಾಕಲೇಬೇಕೆಂಬ ನಿರ್ಬಂಧಗಳು ಬೇರೆ! ಪುರುಷನು ಬ್ರಾಹ್ಮಣನಾದರಂತೂ ಅವನ ಪಾಡನ್ನು ಹೇಳತೀರದು. ಬಾಲ್ಯದಲ್ಲಿ ತಂದೆ ತಾಯಿಗಳನ್ನು ತೊರೆದು ದೂರದ ಗುರುಕುಲಕ್ಕೆ ಹೋಗಿ ಗುರುವಿನ ಸೇವೆ ಮಾಡುತ್ತ ಭಿಕ್ಷೆ ಬೇಡಿ ಬದುಕಿರಬೇಕು. ಯೌವನದಲ್ಲಿ ಮದುವೆಯಾದ ಮೇಲೆ ಪ್ರತಿದಿನವೂ ಬಿಡುವಿಲ್ಲದಂತೆ ನಿತ್ಯಕರ್ಮಾದಿಗಳನ್ನು ಮಾಡುತ್ತಾ, ಹೇಗೋ ಸಂಪಾದಿಸಿ ತಂದು ಹೆಂಡತಿ ಮಕ್ಕಳಿಗೆ ಅನ್ನ ನೀರನ್ನು ಕಾಣಿಸಬೇಕು. ನಾನಾ ವ್ರತಗಳನ್ನು ನಡೆಸಬೇಕು. ಯೌವನ ಕಳೆದೊಡನೆ ಹೆಂಡತಿಯ ಪೋಷಣೆಯನ್ನು ಮಗನಿಗೆ ಒಪ್ಪಿಸಿ ಕಾಡಿಗೆ ಹೋಗಿ ವಾನಪ್ರಸ್ಥನಾಗಿರಬೇಕು. ಅನಂತರ ಮುದುಕನಾದ ಮೇಲೆ ಸಂನ್ಯಾಸಿಯಾಗಿ ಹೊಟ್ಟೆಗಿಲ್ಲದೆ ಸಾಯಬೇಕು! ಬ್ರಾಹ್ಮಣೇತರನಾದ ಮನುವು ಬ್ರಾಹ್ಮಣರಿಗೆ ಅರ್ಪಿಸಿದ ಕಾಣಿಕೆ ಇದು.

ಮಾನವ ಧರ್ಮಶಾಸ್ತ್ರವು ಮನುಕುಲವನ್ನು ಕುರಿತು ಅದರ ಉನ್ನತಿಗಾಗಿ, ಅದರ ಶ್ರೇಯಸ್ಸಿಗಾಗಿ ಹೇಳಿದ ಗ್ರಂಥವಾದ್ದರಿಂದ ಅದರ ವ್ಯಾಪ್ತಿ ಬಹುದೊಡ್ಡದು. ಮನುಸ್ಮೃತಿಯೆಂದರೆ ''ಒಂದು ಜಾತಿಗೆ ಸಂಬಂಧಿಸಿದ ಕಟ್ಟುಪಾಡುಗಳ ಕಂತೆ' ಎಂಬ ಭಾವನೆ ಜನತೆಯಲ್ಲಿ ಮೂಡಿರುವುದು ಅಜ್ಞಾನದಿಂದ, ಉಪೇಕ್ಷೆಯಿಂದ ಮತ್ತು ಅಪಪ್ರಚಾರದಿಂದ.

ಮನುವೆಂದರೆ ಯಾರು? ಇದು ಒಬ್ಬ ವ್ಯಕ್ತಿಯ ಹೆಸರಲ್ಲ. ರಾಷ್ಟ್ರಪತಿ ಎಂಬ ಶಬ್ದದಂತೆ ಮನು ಎಂಬುದು ಒಂದು ಪದವಿಯ ಹೆಸರು. ಆ ಪದವಿಯಲ್ಲಿರ ತಕ್ಕವರೆಲ್ಲರನ್ನೂ ಮನುಗಳೆಂದೇ ಕರೆಯುತ್ತಾರೆ. ಸ್ವಾಯಂಭುವ, ಸ್ವಾರೋಚಿಷ - ಮುಂತಾದ ಹದಿನಾಲ್ಕು ಮಂದಿ ಮನುಗಳಾಗಿರುತ್ತಾರೆಂದು ವಿಷ್ಣುಪುರಾಣವು ತಿಳಿಸಿದೆ. ಅವರ ಅಧಿಪತ್ಯದ ಕಾಲಕ್ಕೆ ಮನ್ವಂತರವೆಂದು ಹೆಸರು. ಈಗ ನಡೆಯುತ್ತಿರುವುದು ವೈವಸ್ವತ ಮನ್ವಂತರ. ವೈವಸ್ವತನು ಏಳನೆಯ ಮನು. ಜಗತ್ತಿನಲ್ಲಿರುವ ಮಾನವರೆಲ್ಲರೂ ಮನು ವಂಶದವರು. ಮಾನವ, ಮನುಜ, ಮನುಷ್ಯ - ಎಂಬೀ ಪದಗಳು ಮನು ಶಬ್ದದಿಂದ ಹುಟ್ಟಿದವು. ಇಂಗ್ಲೀಷಿನ MAN ಎಂಬ ಶಬ್ದವೂ ಮಾನವ ಎಂಬುದರ ರೂಪಾಂತರವೇ ಎಂಬುದನ್ನು ಗಮನಿಸಬೇಕು.

**'ಯದ್ವೈ ಮನುರವದತ್ ತದ್ ಭೇಷಜಂ'** ಎಂದು ವೇದ ವಚನವಿದೆ. 'ಮನುವು ಏನನ್ನು ಹೇಳಿದ್ದಾನೋ ಅದು ಮಾನವರಿಗೆ ಔಷಧ' ಎಂದು ಆ ವಚನದ ಅರ್ಥ. ಮಾನವ ಜಾತಿಗೆ ಸಂಸಾರದಲ್ಲಿ ಒದಗುವ ಎಲ್ಲ ಕಷ್ಟಗಳಿಗೂ ಮನು ವಚನವು ಪರಿಹಾರವನ್ನೊದಗಿಸುತ್ತದೆ ಎಂದು ಅಭಿಪ್ರಾಯ. ವೇದದಲ್ಲಿಯೇ ಈ ಉಕ್ತಿಯು ಇರುವುದರಿಂದ ಮನುಸ್ಮೃತಿಯು ಅನಾದಿಯೆಂದು ಶ್ರದ್ಧಾಳುಗಳು ಒಪ್ಪಬೇಕಾಗುತ್ತದೆ ಈಗ ಉಪಲಬ್ಧವಾಗಿರುವ ಗ್ರಂಥದ ಶ್ಲೋಕಗಳೂ ಅನಾದಿಯೆಂದು ಒಪ್ಪದಿದ್ದರೂ ಅದರಲ್ಲಿ ಪ್ರತಿಪಾದ್ಯವಾದ ವಿಷಯವು ಅನಾದಿಯೆಂದು ಒಪ್ಪಲೇಬೇಕಾಗುತ್ತದೆ. ಹದಿನಾಲ್ಕು ಮನುಗಳಲ್ಲಿ ಯಾವ ಮನುವಿನಿಂದ ಇದು ಪ್ರೋಕ್ತವಾಗಿದೆಯೆಂಬುದು ತಿಳಿದು ಬರುವುದಿಲ್ಲ. ಬ್ರಹ್ಮನು ಈ ಶಾಸ್ತ್ರವನ್ನು ಮನುವಿಗೆ ಉಪದೇಶಿಸಿದನೆಂದೂ ಮನುವಿನಿಂದ ಇದು ಲೋಕದಲ್ಲಿ ಪ್ರಚುರವಾಯಿತೆಂದೂ ಮನುಸ್ಮೃತಿಯಿಂದ ತಿಳಿದುಬರುತ್ತದೆ. (೧-೫೮) ಈ ಸ್ಮೃತಿಯು ಮನುಪ್ರೋಕ್ತವೇ ಹೊರತು ಮನುವಿನಿಂದ ಕೃತವಲ್ಲವೆಂಬುದು ಗಮನಾರ್ಹ. ಒಂದು ರಾಷ್ಟ್ರಕ್ಕೆ ಸಂವಿಧಾನ (Constitution) ಇದ್ದಂತೆ, ಮನುಸ್ಮೃತಿಯು ಮನು ರಾಜ್ಯದ ಭೂಮಂಡಲದ ಸಂವಿಧಾನ ಎಂದು ತಿಳಿಯಬೇಕು. ಈ ಸಂವಿಧಾನವು ಮೊದಲು ಜಾರಿಗೆ ಬಂದದ್ದು ಭರತ ಖಂಡದಲ್ಲಿ.

**'' ಏತದ್ದೇಶಪ್ರಸೂತಸ್ಯಸಕಾಶಾದಗ್ರಜನ್ಮನಃ ।**
**ಸ್ವಂಸ್ವಂ ಚರಿತ್ರಂ ಶಿಕ್ಷೇರನ್ ಪೃಥಿವ್ಯಾಂ ಸರ್ವಮಾನವಾಃ ॥''** (ಮನು ೨-೨೦)

' ಈ ದೇಶದಲ್ಲಿ ಹುಟ್ಟಿದ ಬ್ರಾಹ್ಮಣನಿಂದ ಜಗತ್ತಿನಲ್ಲಿರುವ ಸರ್ವಮಾನವರೂ ತಮ್ಮ ತಮ್ಮ ಸದಾಚಾರವನ್ನು ಕಲಿತುಕೊಳ್ಳಬೇಕು'' ಇದು ಮನುವಿನ ಆದೇಶ.

'ಥಿಯಾಸಫಿ' ಎಂಬ ಹೆಸರಿನ ಬ್ರಹ್ಮವಿದ್ಯಾಪ್ರಸ್ಥಾನವನ್ನು ಸ್ಥಾಪಿಸಿ ಕೀರ್ತಿಶಾಲಿನಿಯಾದ ಹೆಚ್. ಬಿ. ಬ್ಲಾವಟ್ಸ್ಕಿಯೆಂಬ ಪಾಶ್ಚಾತ್ಯ ಮಹಿಳೆಯು ಮನುಸ್ಮೃತಿಯನ್ನು ಬಾಯಿತುಂಬಾ ಹೊಗಳಿ, ''All the earnest Theosophists should be Advised to study Manu'' - ''ಶ್ರದ್ಧೆಯಿಂದ ಥಿಯಾಸಫಿಯನ್ನು ಆದರಿಸತಕ್ಕವರಿಗೆ ಮನುಸ್ಮೃತಿಯನ್ನು ಕಲಿಯಿರೆಂದು ಬೋಧಿಸಬೇಕು'' ಎಂದಿದ್ದಾಳೆ. ಕಾಶಿಯ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪಡೆದವರೂ ಪ್ರಾಚ್ಯವಿದ್ಯೆಯಲ್ಲಿ ವಿಖ್ಯಾತ ವಿದ್ವಾಂಸರೂ ಆದ ಡಾ॥ ಭಗವಾನ್ ದಾಸ್ ಎಂಬವರು ''The Lawas of Manu in the light of Atmavidya'' ಎಂಬ ಶ್ರೇಷ್ಠವಾದ ಗ್ರಂಥವನ್ನು ರಚಿಸಿದ್ದಾರೆ. ಮನುಸ್ಮೃತಿಯ ಅರ್ಹತೆಯೇನೆಂಬುದನ್ನು ತಿಳಿಯಲಿಚ್ಛಿಸುವವರೂ ಅಂತೆಯೇ ಮನುಸ್ಮೃತಿಯನ್ನು ಹೀಗಳಿಯುವ ಅಲ್ಪಜ್ಞರೂ

ಆ ಗ್ರಂಥವನ್ನು ಅವಶ್ಯವಾಗಿ ಓದಬೇಕು. ಮುಂದಿನ ಕೆಲವು ವಿಚಾರಗಳು ಆ ಗ್ರಂಥದಲ್ಲಿರುವ ಹಲವು ಆಧಾರಗಳಿಂದ ಪೋಷಿತವಾಗಿವೆ. ಇದಕ್ಕಾಗಿ ಮಾನನೀಯರಾದ ಡಾ|| ಭಗವಾನ್‌ದಾಸರಿಗೆ ನಾನು ಋಣಿಯಾಗಿದ್ದೇನೆ. ಡಾ|| ಭಗವಾನ್‌ದಾಸರು 'ಥಿಯಾಸಫಿ' ಭಕ್ತರು.

ಈ ಸೃಷ್ಟಿಯಲ್ಲಿ ಮಾನವ ಜನ್ಮವು ಬಹು ದೊಡ್ಡದು - ಎಂಬುದನ್ನು ಸಕಲರೂ ಒಪ್ಪುತ್ತಾರೆ. ಕ್ರಿಮಿ , ಕೀಟ, ಮೃಗ , ಪಕ್ಷಿಗಳಿಗಿಂತ ಮನುಷ್ಯನ ಹೆಚ್ಚುಗಾರಿಕೆ ಮೊದಲನೆಯದಾಗಿ ಆತನ ಅಂಗರಚನೆಗೆ ಸಂಬಂಧಿಸಿದ್ದು. ಕೈ, ಕಾಲು - ಮುಂತಾದ ಸಕಲ ಕರ್ಮೇಂದ್ರಿಯಗಳೂ ಕಣ್ಣು, ಕಿವಿ - ಮುಂತಾದ ಪಂಚಜ್ಞಾನೇಂದ್ರಿಯಗಳೂ ಸಂಪುಷ್ಟವಾಗಿರುವುದು ಮನುಷ್ಯನಿಗೆ ಪ್ರಾಪ್ತವಾಗಿರುವ ದೊಡ್ಡ ಲಾಭ. ಜ್ಞಾನಶಕ್ತಿಯಲ್ಲಿ ಈತನು ಇತರ ಎಲ್ಲ ಜೀವಿಗಳನ್ನು ಮೀರಿಸಿದವನು. ಸ್ವತಂತ್ರವಾದ ಆಲೋಚನಾಶಕ್ತಿ, ಭೂತ ಭವಿಷ್ಯತ್ತುಗಳ ಚಿಂತನೆ, ಗುಣದೋಷಗಳ ವಿವೇಚನೆ, ಉದ್ದಿಷ್ಟವಾದ ಗುರಿಯನ್ನು ತಲುಪಲು ಆಶ್ರಯಿಸಬೇಕಾದ ಮಾರ್ಗೋಪಾಯಗಳ ಅನ್ವೇಷಣೆ ಮುಂತಾದ ಜ್ಞಾನ ಶಕ್ತಿಯ ವೈವಿಧ್ಯಗಳು ಮನುಷ್ಯನಿಗೆ ಮೀಸಲಾಗಿವೆ. ವೈಖರೀವಾಕ್ಕಿನಿಂದ ಸ್ವಾಭಿಪ್ರಾಯಗಳನ್ನು ಇನ್ನೊಬ್ಬರಿಗೆ ತಿಳಿಸುವ ಮತ್ತು ಬರೆದಿಡುವ ಸಾಮರ್ಥ್ಯವಂತೂ ಇನ್ನಾವ ಪ್ರಾಣಿಗೂ ಇಲ್ಲ. ಆದ್ದರಿಂದಲೇ **'ನರತ್ವಂ ದುರ್ಲಭಂಲೋಕೇ'** ಇತ್ಯಾದಿ ಹಿತೋಪದೇಶಗಳನ್ನು ಮಹಾತ್ಮರು ನೀಡಿದ್ದಾರೆ. ''ಆದಿದೇವನು ತನ್ನ ಶಕ್ತಿಯಾದ ಮಾಯೆಯಿಂದ ನಾನಾ ಬಗೆಯ ಪ್ರಾಣಿ ಶರೀರಗಳನ್ನು ಮೊದಲು ಸೃಷ್ಟಿಸಿದನು. ವೃಕ್ಷ, ಹರಿದಾಡುವ ಹಾವು ಮುಂತಾದ ಸರೀಸೃಪಗಳು, ಪಶು, ಪಕ್ಷಿ, ಕೀಟ, ಮೀನು - ಮೊದಲಾದವನ್ನು ಸೃಜಿಸಿದನು. ಅವುಗಳಿಂದ ಮನಸ್ಸಿಗೆ ತೃಪ್ತಿಯಾಗದೇ ಕಡೆಯಲ್ಲಿ ಆತ್ಮ ಸಾಕ್ಷಾತ್ಕಾರ ಮಾಡಲು ಸಮರ್ಥನಾದ ಮನುಷ್ಯನನ್ನು ಸೃಷ್ಟಿಸಿ ಭಗವಂತನು ಸಂತೋಷಿಸಿದನು'' ಎಂದು ಭಾಗವತದಲ್ಲಿ ವರ್ಣನೆ ಇದೆ. (೧೧-೯-೨೮) ಆತ್ಮಸಾಕ್ಷಾತ್ಕಾರವು ಇನ್ನಾವ ಜನ್ಮದಲ್ಲಿಯೂ ಸಾಧ್ಯವಾಗದೆಂದೂ ಮನುಷ್ಯ ಜನ್ಮದ ಪರಮೋದ್ದೇಶವೇ ಆತ್ಮ ಸಾಕ್ಷಾತ್ಕಾರವೆಂದೂ ಇದರಿಂದ ಸ್ಪಷ್ಟವಾಗಿ ತಿಳಿದು ಬರುತ್ತದೆ. ಆತ್ಮ ಸಾಕ್ಷಾತ್ಕಾರವೇ ಮೋಕ್ಷ, ಕೈವಲ್ಯ, ನಿರ್ವಾಣ, ಹಿಂದೂ ಧರ್ಮ ಅಥವಾ ವೈದಿಕ ಧರ್ಮವು ಬೆರಳಿಟ್ಟು ಕೈದೋರಿಸುವುದು ಮಾನವ ಧ್ಯೇಯವೇನೆಂಬುದು ಇದರಿಂದ ನಿಚ್ಚಳವಾಗುತ್ತದೆ. ವೈದಿಕ ಧರ್ಮದ ಛಾಯೆಗಳಾದ ಬೌದ್ಧ, ಜೈನ ಮತಗಳು ತೋರಿಸುವ ಗುರಿಯೂ ಇದೇ. ಹೀಗಿರುವಾಗ **'ವೇದೋಽಖಿಲೋ ಧರ್ಮ ಮೂಲಂ'** ಎಂದು ಸಾರುವ ಮನು ಮಹಾತ್ಮನು ಆತ್ಮದರ್ಶನವನ್ನಲ್ಲದೇ ಇನ್ನಾವುದನ್ನು ಗುರಿಯಾಗಿಟ್ಟುಕೊಂಡು ಈ ಧರ್ಮ ಶಾಸ್ತ್ರವನ್ನು ರಚಿಸಲು ಪ್ರವೃತ್ತನಾದಾನು? ಇದನ್ನು

ನಾವು ನೆನಪಿನಲ್ಲಿಟ್ಟುಕೊಂಡಿದ್ದರೆ, ಮನುಸ್ಮೃತಿಯಲ್ಲಿ ಕಂಡುಬರುವ ಕೆಲವು ತೊಡಕುಗಳಿಗೆ ಪರಿಹಾರವು ಸುಲಭವಾಗಿ ದೊರೆಯುತ್ತದೆ.

ವೈಶೇಷಿಕಾದಿ ದರ್ಶನಗಳು ಆತ್ಮ ವಿಚಾರಕ್ಕಾಗಿಯೇ ಹೊರಟಿದ್ದರೂ ಅವು ವಿಶೇಷವಾಗಿ ವಿಚಾರಮಾಡಿದ್ದು ಅನಾತ್ಮವನ್ನೇ! ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದಗಳ ವಿಚಾರದಲ್ಲಿಯೇ ಈ ತರ್ಕಶಾಸ್ತ್ರದ ಆಯಸ್ಸು ಮುಗಿದುಹೋಗುತ್ತದೆ. ಮೀಮಾಂಸೆಯು 'ಕರ್ಮ- ಕರ್ಮ' ಎನ್ನುತ್ತಲೇ ಆಯಾಸಗೊಂಡು ನಿದ್ರಿಸುತ್ತದೆ. ಸಾಂಖ್ಯ, ಯೋಗಗಳು ಪ್ರಕೃತಿ ವಿಕೃತಿಭಾವಗಳ ಚಿಂತನೆಯಲ್ಲಿ ಮಗ್ನವಾದವು. ಹೀಗಾಗಿ ವೇದಾಂತ ದರ್ಶನ ಒಂದೇ ಆತ್ಮವಿದ್ಯೆಯಾಗಿ ಉಳಿದುಕೊಂಡಿತು. ಆದರೆ ಈ ಎಲ್ಲ ವಿಚಾರಗಳೂ ಆತ್ಮಾರ್ಥವಾಗಿ ಎಂಬುದನ್ನು ಸಕಲ ದರ್ಶನಗಳೂ ಒಪ್ಪಿಕೊಂಡಿವೆ. ಆದ್ದರಿಂದಲೇ **'ಅಧ್ಯಾತ್ಮ ವಿದ್ಯಾ ವಿದ್ಯಾನಾಂ'** ಎಂದು ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಹೇಳಿರುವುದು.

ಆತ್ಮ ವಿದ್ಯೆಯೆಂದರೆ ತನ್ನನ್ನು ತಾನು ಅರಿತುಕೊಳ್ಳುವುದು ಎಂದರ್ಥ. ಪ್ರತಿಯೊಬ್ಬ ಮಾನವನು ತಾನು ಯಾರು? ಎಂಬುದನ್ನರಿತುಕೊಳ್ಳದೆ ನಾನು , ನನ್ನದು - ಎಂದು ವ್ಯಾಮೋಹಗೊಂಡಿದ್ದಾನೆ. ಈ ವ್ಯಾಮೋಹವೇ ಲೋಕದಲ್ಲಿ ರಾಗದ್ವೇಷಗಳಿಗೆ ಕಾರಣವಾಗಿ ಕೋಪ, ಅಸೂಯೆ, ಕಲಹ, ಕಳ್ಳತನ, ಸುಳ್ಳು, ಕೊಲೆ, ಸುಲಿಗೆಗಳಿಗೆ ಬೀಜವಾಗಿದೆ. ಇದು ಜನರನ್ನು ಕಷ್ಟದ ಕೂಪಕ್ಕೆ ತಳ್ಳಿ ಅವರ ಕಣ್ಣೀರನ್ನು ಸುರಿಸುತ್ತಲೇ ಇದೆ. ಅಜ್ಞಾನವೇ ಸರ್ವಾನರ್ಥಗಳ ಮೂಲವೆಂದು ವೇದಘೋಷ. ಶಾಲೆಗಳಲ್ಲಿ ಕಾವ್ಯ, ತರ್ಕ, ವ್ಯಾಕರಣ, ಗಣಿತ, ವಿಜ್ಞಾನಾದಿಗಳನ್ನು ಕಲಿಯುವುದರಿಂದ ಹೋಗತಕ್ಕ ಅಜ್ಞಾನ ಇದಲ್ಲ. ಈ ಅಜ್ಞಾನವನ್ನು 'ಅವಿದ್ಯೆ' ಎಂದು ವೇದೋಪನಿಷತ್ತುಗಳು ಕರೆದಿವೆ -

**''ಅವಿದ್ಯಾಯಾಮಂತರೇ ವರ್ತಮಾನಾಃ**
**ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ ।**
**ಜಂಘನ್ಯಮಾನಾಃ ಪರಿಯಂತಿ ಮೂಢಾಃ**
**ಅಂಧೇನೈವ ನೀಯಮಾನಾ ಯಥಾಂಧಾಃ ॥''** (ಮುಂಡಕ ೧-೨-೮ )

''ಅವಿದ್ಯೆಯ ನಡುವೆ ಸೇರಿಹೋಗಿರುವ ಅವಿವೇಕಿಗಳಾದ ಜನರು ತಾವೇ ಧೀಮಂತರೆಂದೂ ಎಲ್ಲವನ್ನೂ ತಿಳಿದ ವಿದ್ವಾಂಸರೆಂದೂ ಭ್ರಮೆಗೆ ಒಳಗಾಗಿದ್ದಾರೆ. ಇವರು ಮುಪ್ಪು, ರೋಗ, ಕಲಹಾದಿಗಳಿಂದ ಕಷ್ಟಕ್ಕೆ ಸಿಕ್ಕಿ ಪೆಟ್ಟು ತಿನ್ನುತ್ತಲೇ ಇದ್ದಾರೆ. ಕುರುಡನು ಕರೆದೊಯ್ಯುವ ಕುರುಡರಂತೆ ಈ ಮೂಢಾತ್ಮರು ಪರದಾಡುತ್ತಲೇ ಇದ್ದಾರೆ.''

ಈ ಪರಿಸ್ಥಿತಿಯಲ್ಲಿ ತೊಳಲುವ ಮನುಷ್ಯರಿಗೆ ಸರಿಯಾಗಿ ನೋಡಬಲ್ಲ ಕಣ್ಣುಗಳನ್ನಿತ್ತು ದಾರಿತೋರಿಸುವ ದೀಪವಾಗಿದೆ ಧರ್ಮಶಾಸ್ತ್ರ. ಇದು ರೋಗಿಗಳಿಗೆ ಕೊಡಬೇಕಾದ ಕಹಿ ಔಷಧ, ಸಿಹಿ ತಿಂಡಿಯಲ್ಲ. ಇದು ಶಾಶ್ವತವಾದ ಹಿತ ಸಂಹಿತೆ. ತಾತ್ಕಾಲಿಕವಾದ ಸುಖ ಸಂಹಿತೆಯಲ್ಲ.

ಮನುಷ್ಯನು ಸುಖವನ್ನು ಮಾತ್ರ ಬಯಸುವುದರಿಂದ, ವಾಸ್ತವವಾಗಿ ಕಾಮ, ಮೋಕ್ಷ ಇವೆರಡೇ ಪುರುಷಾರ್ಥಗಳು. ಕಾಮವು ಐಹಿಕವಾದ ವಿಷಯ ಸುಖ. ಮೋಕ್ಷವು ಪಾರಮಾರ್ಥಿಕವಾದ ಶಾಶ್ವತ ಸುಖ. ವಿಷಯ ಸುಖವಾದ ಕಾಮಕ್ಕೆ ಧರ್ಮವು ಸಾಕ್ಷಾತ್ ಸಾಧನ. ಆದ್ದರಿಂದ ಧರ್ಮ ಅರ್ಥಗಳೆರಡೂ ಸಾಧನ ಸ್ವರೂಪದವು. ಕಾಮ ಮೋಕ್ಷಗಳು ಸಾಧ್ಯ ಸ್ವರೂಪದವು. ಸಾಧನಗಳೂ ಯತ್ನ ಸಾಧ್ಯವಾದ್ದರಿಂದ ಪುರುಷಾರ್ಥಗಳು.

# ೫ - ಅರ್ಥಕಾಮಗಳು

ವಿಷಯ ಸುಖಾಭಿಲಾಷೆಯು ಮನುಷ್ಯನಿಗೆ ಸಹಜವಾದ್ದರಿಂದ ಅದನ್ನು ಪಡೆಯಲು ಯತ್ನಿಸಬೇಕೆಂದು ಶಾಸ್ತ್ರವು ಹೇಳಬೇಕಾಗಿಲ್ಲ. ಅಂತೆಯೇ ಸುಖ ಸಾಮಗ್ರಿಗಳನ್ನು ಗಳಿಸುವುದಕ್ಕೆ ಹಣವು ಆವಶ್ಯಕವಾದ್ದರಿಂದ ಧನಾರ್ಜನೆಗಾಗಿ ಸಹ ಶಾಸ್ತ್ರವು ಪ್ರೇರಿಸಬೇಕಾಗಿಲ್ಲ. ಹೀಗಿರುವಾಗ ಮನುವಾಗಲಿ ಇತರ ಶಾಸ್ತ್ರಕಾರರಾಗಲಿ ಅರ್ಥ ಕಾಮಗಳನ್ನು ಪುರುಷಾರ್ಥಗಳಲ್ಲಿ ಸೇರಿಸಿದ್ದೇಕೆ - ಎಂಬ ಪ್ರಶ್ನೆ ತಲೆಯೆತ್ತಬಹುದು.

ಪುರುಷಾರ್ಥಗಳ ಗಣನೆಯಲ್ಲಿ ಅರ್ಥ ಕಾಮಗಳನ್ನು ವರ್ಜಿಸಿದರೆ ಧರ್ಮ, ಮೋಕ್ಷಗಳೆರಡೇ ಉಳಿಯುತ್ತವೆ. ಅವುಗಳಲ್ಲಿ ಮೋಕ್ಷವು ಗಮ್ಯ, ಧರ್ಮವು ಗಮಕ ಎಂದರೆ ಸಾಧನವಾಗುತ್ತದೆ. ಮೋಕ್ಷ ಮತ್ತು ಮೋಕ್ಷ ಸಾಧನಗಳಾದ ಭಕ್ತಿ, ಉಪಾಸನೆ ಮುಂತಾದವನ್ನು ಮೋಕ್ಷಶಾಸ್ತ್ರವೇ ತಿಳಿಸಿಕೊಡುವುದರಿಂದ ಧರ್ಮಶಾಸ್ತ್ರಕ್ಕೆ ಸಾಧ್ಯವೇ ಇಲ್ಲವಾಗುತ್ತದೆ. ಆಗ ವ್ಯಕ್ತಿ, ಕುಟುಂಬ, ಸಮಾಜ, ರಾಷ್ಟ್ರಧರ್ಮಗಳನ್ನೂ ನಾನಾ ಬಗೆಯ ಉದ್ಯೋಗಗಳಿಗೆ ಸಂಬಂಧಿಸಿದ ವೃತ್ತಿ ಧರ್ಮಗಳನ್ನೂ ತಿಳಿಸಿಕೊಡುವ ವ್ಯವಸ್ಥೆ ಯಾವುದು? ಕಾಮವೆಂದರೆ ಮೃಗ ಪಕ್ಷಿಗಳ ವರ್ತನೆಯಲ್ಲ. ಪಾಶವೀಯ ಇಂದ್ರಿಯ ತೃಪ್ತಿಯಲ್ಲ. ಮನುಷ್ಯನೂ ಪಶುವಿನಂತೆ ವರ್ತಿಸತೊಡಗಿದರೆ ಮನುಷ್ಯನ ಹೆಚ್ಚುಗಾರಿಕೆಯಾದರೂ ಎಲ್ಲಿರುತ್ತದೆ? ಮನುಷ್ಯನ ಕಾಮ ಎಂದರೆ ಇಂದ್ರಿಯ ತೃಪ್ತಿ

ಬಹುಮುಖವಾದದ್ದು; ಬಹುವಿಶಾಲವಾದದ್ದು.

ಮನುಷ್ಯನ ಪರಿಷ್ಕೃತವಾದ ಬುದ್ಧಿಯು ಗೂಡಿನಲ್ಲಿಯೋ, ಗುಹೆಯಲ್ಲಿಯೋ, ಗುಡಿಸಲಿನಲ್ಲಿಯೋ ವಾಸ ಮಾಡಲು ಬಯಸುವುದಿಲ್ಲ. ಅದು ವಿಶಾಲವಾದ ಆಧುನಿಕ ಭವನವನ್ನು ಅಪೇಕ್ಷಿಸುತ್ತದೆ. ಪೀಠೋಪಕರಣಗಳನ್ನು ಬಯಸುತ್ತದೆ. ಷಡ್ರಸೋಪೇತವಾದ ವಿವಿಧ ಭೋಜನ ಸಾಮಗ್ರಿಗಳನ್ನು, ಪಾನೀಯವನ್ನು ಇಚ್ಛಿಸುತ್ತದೆ. ಉಡಲು ಹತ್ತಿ, ರೇಷ್ಮೆ, ಉಣ್ಣೆಯ ಬಟ್ಟೆಗಳು ಬೇಕು, ತೊಡಲು ಚಿನ್ನದ ಒಡವೆಗಳು ಬೇಕು, ತಿರುಗಲು ವಾಹನಗಳು ಬೇಕು. ಸಂಸ್ಕೃತವಾದ ಮನಸ್ಸು ಕಾವ್ಯಗಳನ್ನೋದಿ ಸಂತೋಷಿಸುತ್ತದೆ. ನೋಡಲು ದೃಶ್ಯಕಾವ್ಯವನ್ನೂ, ನಾಟ್ಯ ನೃತ್ಯಗಳನ್ನೂ, ಕೇಳಲು ಸಂಗೀತವನ್ನೂ, ಮೂಸಲು ಸುಗಂಧದ್ರವ್ಯವನ್ನೂ ಅಪೇಕ್ಷಿಸುತ್ತದೆ. ಮನೋರಂಜನೆಗಾಗಿ ಶಿಲ್ಪಾದಿ ಕುಶಲ ಕಲೆಗಳೂ, ಬುದ್ಧಿಯ ತೃಪ್ತಿಗಾಗಿ ತರ್ಕವ್ಯಾಕರಣಾದಿ ಶಾಸ್ತ್ರಗಳೂ ವರ್ಧಿಸಲೆಂದೂ ಮನುಷ್ಯನ ಬಯಕೆಯಾಗಿರುತ್ತದೆ. ಈ ಬಗೆಯಲ್ಲಿ ನಾಗರಿಕತೆಯು ಬೆಳೆದಂತೆ ಕಾಮನೆಗಳೂ ಬೆಳೆಯುತ್ತಲೇ ಹೋಗುವುದು ಪ್ರಕೃತಿ ಧರ್ಮವಾಗಿರುವುದು ಅನಾದಿ ಕಾಲದಿಂದಲೂ ಬಂದದ್ದೇ. ಈ ಸುಖ ಸಾಮಗ್ರಿಗಳು ವರ್ಧಿಸಲೆಂದೂ ಇವುಗಳ ಅನುಭವಕ್ಕೆ ಯಾವ ಅಡ್ಡಿ ಆತಂಕಗಳೂ ಬಾರದಂತೆ ಸಮಾಜವೂ, ರಾಷ್ಟ್ರವೂ ವರ್ತಿಸಿ ಪ್ರಬಲವಾಗಲೆಂಬುದೂ ಮಾನವನ ಆಕಾಂಕ್ಷೆಯಾಗಿದೆ. ಹೀಗೆ 'ಕಾಮ' ಎಂಬ ಎರಡಕ್ಷರಗಳಲ್ಲಿ ಸಾವಿರ ಮುಖದ ಸರ್ಪವೇ ಅಡಗಿ ಕುಳಿತಿದೆ. ಈ ಸರ್ಪದ ನಿಯಂತ್ರಣವೇ ಧರ್ಮದ ಉದ್ದೇಶವಾಗಿದೆ. ನಿಯಂತ್ರಿತವಾದ ಇಂದ್ರಿಯ ತೃಪ್ತಿಯು ಕಾಮ. ನಿಯಂತ್ರಣಕ್ಕೊಳಗಾದ ಕಾಮವು ಪುರುಷಾರ್ಥ. ನಿಯಂತ್ರಣವು ಪ್ರಕೃತಿ ಸಿದ್ಧವಲ್ಲ. ಮನು ಹೇಳುತ್ತಾನೆ -

**'' ಯದ್ಯದ್ಧಿಕುರುತೇ ಕಿಂಚಿತ್ ತತ್ತತ್ಕಾಮಸ್ಯ ಚೇಷ್ಟಿತಂ।**
**ಕಾಮ್ಯೋಹಿ ವೇದಾಧಿಗಮಃ ಕರ್ಮಯೋಗಶ್ಚವೈದಿಕಃ॥''** (೨-೨-೪)

''ಮನುಷ್ಯನು ಯಾವ ಯಾವ ಕ್ರಿಯೆಯನ್ನು ಮಾಡುತ್ತಾನೋ ಅದೆಲ್ಲವೂ ಕಾಮದ ಚೇಷ್ಟೆಯೇ ಸರಿ. ವೇದಾಧ್ಯಯನವೂ ವೈದಿಕ ಕರ್ಮಾಚರಣೆಯೂ ಸಹ ಫಲಾಪೇಕ್ಷೆಯಿಂದಲೆ''.

**ಅರ್ಥ :-**

ಮನುಷ್ಯನ ಇಂದ್ರಿಯ ತೃಪ್ತಿಯು ಕೇವಲ ಪಶು ವೃತ್ತಿಯಾಗದೆ ಬಹುಮುಖವೂ, ಪರಿಷ್ಕೃತವೂ ಆಗಿರುವುದರಿಂದ, ತೃಪ್ತಿಗೆ ಬೇಕಾದ ಸಾಮಗ್ರಿಗಳೂ ಬಹುಮುಖಗಳೂ ಪರಿಷ್ಕೃತಗಳೂ ಆಗಿರಬೇಕಾದದ್ದು ಅನಿವಾರ್ಯ. ಈ ಸಾಮಗ್ರಿಗಳ

ಉತ್ಪಾದನೆಗಾಗಿ ನಾನಾ ಬಗೆಯ ಕೃಷಿ ವಾಣಿಜ್ಯ ವ್ಯವಹಾರಗಳೂ, ಕಾರ್ಖಾನೆಗಳೂ ಅನಿವಾರ್ಯ. ಅಲ್ಲಿ ದುಡಿಯತಕ್ಕವರು ಬಹುಸಂಖ್ಯೆಯಲ್ಲಿ ಬೇಕು. ಅವರ ದುಡಿತವೂ ಅರ್ಥಾರ್ಜನೆಗಾಗಿ, ಅರ್ಥವು ಕಾಮ ತೃಪ್ತಿಗಾಗಿ ಎಂಬುದು ಲಕ್ಷಿಸಬೇಕಾದದ್ದು. ಇದೆಲ್ಲವೂ ವ್ಯವಸ್ಥಿತವಾಗಿ ದುಡಿಯತಕ್ಕ ಒಂದು ಸಮಾಜಕ್ಕೆ ಅಧೀನವಾಗಿದೆ. ಅಂತಹ ಸಮಾಜವಿಲ್ಲದೆ ಯಾವ ಸುಖ ಸಾಮಗ್ರಿಯೂ ದೊರೆಯದು. ಈ ಸಮಾಜದ ಹಿತರಕ್ಷಣೆಗೆ ಸರ್ಕಾರ ಬೇಕಾಗುತ್ತದೆ. ಇಂತಹ ಸಮಾಜದಲ್ಲಿದ್ದು ದುಡಿದು ಅರ್ಥವನ್ನು ಸಂಪಾದಿಸಿಕೊಳ್ಳಬೇಕಾಗಿರುತ್ತದೆ ಈ ದುಡಿತ ಧರ್ಮದಿಂದಲೂ ಆಗುತ್ತದೆ. ಅಧರ್ಮದಿಂದಲೂ ಆಗುತ್ತದೆ. ಧರ್ಮನಿಯಂತ್ರಿತವಾದ ದುಡಿತದಿಂದ ಸಂಪಾದಿಸಬೇಕಾದ ಅರ್ಥವೇ ಪುರುಷಾರ್ಥ.

ಹೀಗೆ ಪುರುಷಾರ್ಥಗಳಾದ ಅರ್ಥ ಕಾಮಗಳ ಅರ್ಥವ್ಯಾಪ್ತಿಯು ಬಹು ವಿಶಾಲವಾಗಿರುವುದರಿಂದ ಇವುಗಳ ಸಾಧನೆ, ಫಲಗಳು ಸಮಾಜದ ಘಟಕಗಳಾದ ಸಕಲ ವ್ಯಕ್ತಿಗಳನ್ನು ಮುಟ್ಟಬೇಕಾಗಿದೆ. ಏಕಪ್ರಕಾರವಾಗಿ ಅಲ್ಲದಿದ್ದರೂ ಆಯಾ ಜನರ ಯೋಗ್ಯತಾನುಸಾರವಾಗಿ ಇವು ತಲುಪಲೇ ಬೇಕು. ಸಮಾಜವು ಒಂದು ಯಂತ್ರದಂತೆ ಕಾರ್ಯವನ್ನು ನಿರ್ವಹಿಸುತ್ತದೆ. ಅದರ ಒಂದು ಕೀಲು, ಒಂದು ಚಕ್ರ ಹಾನಿಗೊಳಗಾದರೆ ಯಂತ್ರವೇ ಚಲಿಸದೇ ನಿಂತು ಹೋದೀತು. ಅರ್ಥ ಕಾಮಗಳಂತೆ ಮನುಷ್ಯನಿಗೆ ಸ್ವಾರ್ಥ ಸಂಕುಚಿತ ಬುದ್ಧಿಗಳೂ ಸಹಜವಾದವು. ಇವನ್ನು ನಿಯಂತ್ರಿಸುವ ಬಗೆ ಯಾವುದು?

ಭಗವದ್ಗೀತೆಯಲ್ಲಿ - **''ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ''** ಎಂದಿರುವ ಶ್ರೀಕೃಷ್ಣನ ನುಡಿಯನ್ನಿಲ್ಲಿ ಸ್ಮರಿಸಿಕೊಳ್ಳಬೇಕು.

ಸ್ವಾರ್ಥ ಸಂಕುಚಿತ ಬುದ್ಧಿಗಳೂ ದ್ರೋಹ ವಂಚನೆಗಳೂ ನಿಯಂತ್ರಣಗೊಳ್ಳಬೇಕು. ಆಲಸ್ಯವನ್ನು ದೂರಮಾಡಿ ಪ್ರತಿಯೊಬ್ಬರೂ ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸಲೇಬೇಕು. ಕರ್ತವ್ಯವು ಎಲ್ಲರಿಗೂ ಏಕರೂಪವಾಗಿರುವುದಿಲ್ಲ. ಯಂತ್ರದ ಒಂದೊಂದು ಅವಯವವೂ ನಿರ್ವಹಿಸುವ ಕೆಲಸ ಬೇರೆ ಬೇರೆ. ಯಂತ್ರ ನಿರ್ಮಾಪಕನು ಯಂತ್ರದ ಯಾವ ಯಾವ ಕಾರ್ಯವನ್ನು ಯಾವ ಯಾವ ಅಂಗವು ನಡೆಸಬೇಕೆಂಬುದನ್ನು ಗೊತ್ತು ಪಡಿಸಿರುತ್ತಾನೆ. ಹಾಗೆಯೇ ಮನುಷ್ಯನು ತನ್ನ ಕರ್ತವ್ಯ ನಿಯಮಕ್ಕೆ ಒಳಗಾಗಿ ಕ್ರಿಯೆಯನ್ನು ನಡೆಸಬೇಕಾಗುತ್ತದೆ. ಈ ಕರ್ತವ್ಯ ನಿಯಮಕ್ಕೆ ಸೂತ್ರಧಾರಿ ಯಾವುದು? ಸಾಮೂಹಿಕವಾಗಿ ಉತ್ಪಾದಿಸಿದ ಅರ್ಥ ಪ್ರಪಂಚವನ್ನೂ ಅದನ್ನು ಹಂಚುವುದನ್ನೂ ವ್ಯವಸ್ಥೆಗೊಳಿಸುವ ವಿಧಾನ ಯಾವುದು? ಮಾನವನ ಸ್ವೇಚ್ಛಾ ವ್ಯವಹಾರಗಳಿಗೆ ಒಂದು ಅಂಕುಶವಿಲ್ಲದೇ ಹೋದರೆ ಎಷ್ಟು ಅನರ್ಥವಾದೀತೆಂಬುದನ್ನು ಊಹಿಸಿಕೊಳ್ಳಬಹುದು.

ಮನುಷ್ಯನ ಮೃಗ ವೃತ್ತಿಯನ್ನು ನಿಯಂತ್ರಿಸತಕ್ಕದ್ದು ದಂಡ ಒಂದೇ. ದಂಡವೆಂದರೆ ದಂಡನೆ - ಶಿಕ್ಷೆ. ''**ದಂಡೋಹಿ ಸುಮಹತ್ತೇಜಃ**'' ದಂಡವು ಅತ್ಯಂತ ಮಹತ್ತ್ವವುಳ್ಳ ತೇಜಸ್ಸು. ''ರಾಜ ಧರ್ಮದಿಂದ ವಿಚಲಿತವಾದರೆ ರಾಜನನ್ನು ಪುತ್ರ ಬಾಂಧವ ಸಹಿತವಾಗಿ ಅದು ನಾಶಮಾಡಿಬಿಡುತ್ತದೆ.'' ಎನ್ನುತ್ತಾನೆ ಮನು. ನೀತಿ ಪಾಲನೆಯು ದಂಡದ ಭಯದಿಂದಲೇ ನಡೆಯುತ್ತದೆ. ಈ ಭಯವನ್ನು ಸ್ಥೂಲವಾಗಿ ನಾಲ್ಕು ವಿಧವೆಂದು ವಿಂಗಡಿಸಬಹುದು. ಮೊದಲನೆಯದು ದೇವರ ಭಯ, ಎರಡನೆಯದು ಸರ್ಕಾರದ ಭಯ. ಮೂರನೆಯದು ಸಮಾಜ ಭಯ. ನಾಲ್ಕನೆಯದು ಗುರು-ಹಿರಿಯರ ಭಯ. ''**ಭೀಷಾಸ್ಮಾದ್ ವಾತಃ ಪವತೇ ಭೀಷೋದೇತಿ ಸೂರ್ಯಃ॥**'' ''ಆ ಈಶ್ವರನ ಭಯದಿಂದ ಗಾಳಿ ಬೀಸುತ್ತದೆ. ಅವನ ಹೆದರಿಕೆಯಿಂದ ಸೂರ್ಯನು (ಪ್ರತಿದಿನ) ಹುಟ್ಟುತ್ತಾನೆ'' ಎನ್ನುತ್ತದೆ ಉಪನಿಷತ್ತು. ಆದ್ದರಿಂದ ಮನುಷ್ಯನ ಸದ್ವರ್ತನೆಗೆ ಮೂಲವಾದದ್ದು ಮೇಲೆ ಹೇಳಿದ ನಾಲ್ಕರಲ್ಲಿ ಒಂದು ಭಯವೆಂದು ನಿಶ್ಚಯಿಸಬಹುದು. ನಾಲ್ಕು ಭಯಗಳೂ ಧರ್ಮಮೂಲವಾದವು. ಆದ್ದರಿಂದಲೇ ದಂಡಕ್ಕೆ ಧರ್ಮವು ಮಹತ್ತರವಾದ ತೇಜಸ್ಸನ್ನು ತಂದು ಕೊಟ್ಟಿದೆ. ಆದ್ದರಿಂದಲೇ ಅರ್ಥಕಾಮಗಳು ಧರ್ಮಕ್ಕೆ ಅಧೀನವಾಗಿದ್ದರೆ ಲೋಕಕ್ಕೆ ಹಿತಕಾರಿಯಾಗಿರುತ್ತವೆಯೆಂದು ಮನು ಮಹಾತ್ಮನು ಧರ್ಮದ ಚೌಕಟ್ಟನ್ನು ವಿಧಿಸಿದ್ದಾನೆ. ವಿಷಯ ಸುಖಕ್ಕಾಗಿ ಜನರು ಹಂಬಲಿಸುತ್ತಾರೆಂಬುದು ಪ್ರಾಚೀನ ಶಾಸ್ತ್ರಕಾರರೆಲ್ಲರಿಗೂ ತಿಳಿದೇ ಇತ್ತು.

''**ಶ್ರೇಯಃ ಪುಷ್ಪಫಲಂ ಕಾಷ್ಠಾತ್ ಕಾಮೋ ಧರ್ಮಾರ್ಥಯೋರ್ವರಃ**'' ಎಂದು ಮಹಾಭಾರತದ ಶಾಂತಿಪರ್ವದಲ್ಲಿದೆ. ''ಎಲೆಗಳಿಂದ ತುಂಬಿದ ಕೊಂಬೆಗಿಂತ ಹಣ್ಣುಗಳು ಹೇಗೆ ಶ್ರೇಷ್ಠವೋ ಹಾಗೇ ಧರ್ಮಾರ್ಥಗಳಿಗಾಗಿ ಮರವನ್ನು ಬೆಳೆಸಿ ರಕ್ಷಿಸುವಂತೆ ಸುಖಭೋಗಕ್ಕಾಗಿ ಧರ್ಮಾರ್ಥಗಳನ್ನು ವ್ಯವಸ್ಥಿತವಾಗಿ ನೋಡಿಕೊಳ್ಳತಕ್ಕದ್ದು. ಮರವನ್ನೂ ಬೆಳೆಸದಿದ್ದರೆ ಹೂ ಹಣ್ಣುಗಳೂ ಇಲ್ಲ. ಆಗ ಹೂಹಣ್ಣುಗಳನ್ನು ಇನ್ನೊಬ್ಬರ ತೋಟದಿಂದ ಕದಿಯಬೇಕಾದೀತು. ಧರ್ಮ ಪೂರ್ವಕವಲ್ಲದ ಧನಸಂಪಾದನೆ ದರೋಡೆ ಮಾಡಿದಂತೆ. ಧನಸಂಪಾದನೆಯಿಲ್ಲದ ಕಾಮಭೋಗವು ಕಳ್ಳತನ ಮಾಡಿದಂತೆ. ಮನು ಹೇಳುತ್ತಾನೆ -

''**ಪರಿತ್ಯಜೇದರ್ಥಕಾಮೌಯೌ ಸ್ಯಾತಾಂ ಧರ್ಮವರ್ಜಿತೌ।**
**ಧರ್ಮಂ ಚಾಪ್ಯಸುಖೋದರ್ಕಂ ಲೋಕವಿಕ್ರುಷ್ಟಮೇವ ಚ ॥**''

(ಮನು ೪-೧೭೬)

ಅರ್ಥಕಾಮಗಳು ಧರ್ಮಬಾಹಿರವಾದರೆ, ಅವನ್ನು ತ್ಯಜಿಸತಕ್ಕದ್ದು.

''ಧರ್ಮದ ಪರಿಣಾಮವು ಸುಖವನ್ನೀಯದೆ ದುಃಖಕಾರಿಯೇ

ಆಗುವುದಾದರೆ, ಮತ್ತು ಜನರ ಆಕ್ರೋಶಕ್ಕೆ ಕಾರಣವಾಗುವುದಾದರೆ ಅಂತಹ ಧರ್ಮವನ್ನೂ ತ್ಯಜಿಸಿಬಿಡಬೇಕು''.

ಉದಾಹರಣೆಗೆ, ಸರ್ವಸ್ವವನ್ನು ದಾನಮಾಡುವುದು ಪುಣ್ಯಕರವೇ ಹೌದು. ಆದರೆ ಹೆಂಡತಿ ಮಕ್ಕಳಿರುವ ಗೃಹಸ್ಥನು ತನ್ನ ಸರ್ವಸ್ವವನ್ನೂ ದಾನ ಮಾಡಿದರೆ ಪರಿಣಾಮವೇನಾದೀತು? ಗೃಹಸ್ಥನು ಅಂತಹ ಧರ್ಮವನ್ನಾಚರಿಸಕೂಡದು. ಶ್ರಾದ್ಧದಲ್ಲಿ ಮಾಂಸಭೋಜನವು ಯುಗಾಂತರದಲ್ಲಿತ್ತು. ಕಲಿಯುಗದಲ್ಲಿ ಅದು ನಿಷಿದ್ಧ. ಅದು ಸರ್ವರಿಂದಲೂ ನಿಂದಿತವಾದದ್ದು. ಅಂತಹ ಧರ್ಮವನ್ನು ಆಚರಿಸತಕ್ಕದ್ದಲ್ಲ. ಈ ಕಾಲದ ಪಶುಯಾಗವನ್ನಿಲ್ಲಿ ಸ್ಮರಿಸಿಕೊಳ್ಳಬಹುದು.

ಹೀಗೆ ಲೋಕನಿಂದಿತವಾದ್ದನ್ನು 'ಲೋಕವಿಕ್ರುಷ್ಟ' ಎಂದು ಧರ್ಮಶಾಸ್ತ್ರಕಾರರು ನಿಂದಿಸಿದ್ದಾರೆ. **'ಯದ್ಯಪಿ ಸಿದ್ಧಂ ಲೋಕ ವಿರುದ್ಧಂ'** ಎಂಬ ಗಾದೆಯನ್ನು ಹಿರಿಯರು ಹೇಳುವುದುಂಟು. ಜನರ ನಡುವೆ ಬಾಳುತ್ತಿರುವವರು ಜನರಿಗೆ ಜಗುಪ್ಸೆಯನ್ನುಂಟು ಮಾಡುವ ಕಾರ್ಯವನ್ನು ಮಾಡತಕ್ಕದ್ದಲ್ಲ. ಜೈನಮುನಿಗಳು ನಗ್ನರಾಗಿ ಸಂಚರಿಸುವುದು ಸಹ ಈ ಕಾಲದಲ್ಲಿ ಯುಕ್ತವಲ್ಲವೆಂದೇ ಹೇಳಬೇಕು. **ಲೋಕದ ನಡುವೆ ಇದ್ದು ಲೋಕಕ್ಕೆ ಬೇಡವಾದದ್ದನ್ನು ಆಚರಿಸುವುದು ಅನುಚಿತವೆಂಬುದು ಮನುವಿನ ತಾತ್ಪರ್ಯ.** ಧರ್ಮಶಾಸ್ತ್ರಕಾರರು ಎಷ್ಟು ಸೂಕ್ಷ್ಮದರ್ಶಿಗಳೆಂಬುದನ್ನು ಊಹಿಸಿಕೊಳ್ಳಬಹುದು.

ಆತ್ಮಜ್ಞಾನವನ್ನು ಪಡೆದು ಮೋಕ್ಷವನ್ನು ಗಳಿಸುವುದೇ ಪರಮ ಪುರುಷಾರ್ಥವೆಂದೂ ಮಾನವ ಜನ್ಮದ ಪರಮಧ್ಯೇಯವೆಂದೂ, ಮನುವು ಹೇಳಿದ್ದರಿಂದ, ಆತನು ಒಣ ವೈರಾಗ್ಯವನ್ನು ಬೋಧಿಸುತ್ತಿದ್ದಾನೆಂದೂ, ಮನುಷ್ಯನ ಜೀವನೋಲ್ಲಾಸವನ್ನೇ ಕೆಡಿಸುತ್ತಿದ್ದಾನೆಂದೂ ಯಾರೂ ತಿಳಿಯಕೂಡದು. ಮನುಸ್ಮೃತಿಯೂ ಸೇರಿದಂತೆ ಸಕಲ ಧರ್ಮಶಾಸ್ತ್ರಗಳಲ್ಲಿಯೂ ಕರ್ಮದ ಮೇಲೆ ಒತ್ತಡವಿದೆಯೇ ಹೊರತು ವೈರಾಗ್ಯದ ಮೇಲಲ್ಲ. ಅಧ್ಯಾತ್ಮ ಶಾಸ್ತ್ರವೆನಿಸಿದ ಭಗವದ್ಗೀತೆಯಲ್ಲಿಯೂ ಸಹ ''**ಕರ್ಮಣ್ಯೇವಾಧಿಕಾರಸ್ತೇ**'' ''**ಸ್ವಧರ್ಮೇ ನಿಧನಂ ಶ್ರೇಯಃ**'' ಎಂದು ಶ್ರೀಕೃಷ್ಣನು ಅರ್ಜುನನಿಗೆ ಬೋಧಿಸಿದ್ದು ಕರ್ಮಯೋಗವನ್ನು. ಭೀಷ್ಮ, ದ್ರೋಣಾದಿಗಳನ್ನು ಕೊಲ್ಲುವುದು ತಪ್ಪೆಂದು ಗ್ರಹಿಸಿ, ಭಿಕ್ಷೆಯನ್ನು ಬೇಡಿ ಜೀವಿಸುತ್ತೇನೆಂದು ಹೊರಟಿದ್ದ ಅರ್ಜುನನನ್ನು ಧರ್ಮಯುದ್ಧದಲ್ಲಿ ತೊಡಗಿಸಿದವನು ಶ್ರೀಕೃಷ್ಣ. ದೇವೀಭಾಗವತದಲ್ಲಿ ಒಂದು ಚಮತ್ಕಾರಿಯೂ ಉದ್ಬೋಧಕವೂ ಆದ ಕಥೆ ಇದೆ-

ವ್ಯಾಸರ ಪುತ್ರನಾದ ಶುಕನು ಸಂನ್ಯಾಸವನ್ನು ಸ್ವೀಕರಿಸಲು ಹೊರಟಾಗ ವ್ಯಾಸರು

'ಶುಕ, ಈಗ ನಿನಗೆ ಸಂನ್ಯಾಸ ಬೇಡ, ಮದುವೆ ಮಾಡಿಕೋ' ಎಂದು ಬೋಧಿಸುತ್ತಾರೆ. ಶುಕನು ಒಪ್ಪುವುದಿಲ್ಲ. ಆಗ ವ್ಯಾಸರು 'ಮಗನೇ, ನೀನು ವಿದೇಹ ರಾಜನಾದ ಜನಕನನ್ನು ಕಂಡು ಬಾ' ಎಂದು ಹೇಳುತ್ತಾರೆ. ಅಂತೆಯೇ ಶುಕನು ಹೋಗಿ ಜನಕ ರಾಜನನ್ನು ಕಂಡು ಈ ವಿಷಯವನ್ನು ಪ್ರಸ್ತಾವಿಸಿದಾಗ ಜನಕ ರಾಜನು ಯುವಕನಾದ ಶುಕನಿಗೆ ಗೃಹಸ್ಥ ಧರ್ಮವನ್ನೇ ಎತ್ತಿ ಹಿಡಿದು, ಆತನು ಮದುವೆಯಾಗುವುದೇ ಯುಕ್ತವೆಂದು ಬೋಧಿಸುತ್ತಾನೆ. ''ಶುಕ, ನಿನಗೆ ತಿಳಿಯದು, ಇಂದ್ರಿಯಗಳು ಬಲಿಷ್ಠವಾದವು. ವಿಷಯ ವಾಸನೆಗಳನ್ನು ಗೆಲ್ಲುವುದು ಸುಲಭವಲ್ಲ. ಅವನ್ನು ಗೆದ್ದಮೇಲೆ ಮಾತ್ರ ಪರಮ ವಿರಕ್ತನಿಗೆ ಸಂನ್ಯಾಸದಲ್ಲಿ ಅಧಿಕಾರವಿರುತ್ತದೆ. ಮನುಷ್ಯನು ಗೃಹಸ್ಥನಾಗಿ ಇಂದ್ರಿಯಗಳನ್ನು ಜಯಿಸಬೇಕು. ಇಂದ್ರಿಯ ಜಯವು ಕ್ರಮವಾಗಿ ಸಿದ್ಧಿಸತಕ್ಕದ್ದು. ದುಡುಕಬಾರದು. ನಾನು ಗೃಹಸ್ಥ ಧರ್ಮದಲ್ಲಿದ್ದು ಕ್ರಮವಾಗಿ ಇಂದ್ರಿಯ ಜಯವನ್ನು ಸಾಧಿಸಿದ್ದೇನೆ. ಆದರೂ ರಾಜಧರ್ಮವನ್ನು ಪಾಲಿಸುವುದಕ್ಕಾಗಿ ರಾಜನಾಗಿಯೇ ಉಳಿದಿದ್ದೇನೆ. ಇದು ನನ್ನ ಅನುಭವದ ಸಿದ್ಧಾಂತ. ಮೊದಲು ಗೃಹಸ್ಥನಾಗಿ ಅನಂತರ ಕ್ರಮವಾಗಿ ಇಂದ್ರಿಯಗಳನ್ನು ಜಯಿಸು. ಆಗ ನೀನು ಯಶಸ್ವಿಯಾದರೆ ಸಂನ್ಯಾಸಿ ಯಾಗಬಹುದು.'' ಎಂದು ನಾನಾ ವಿಧದಲ್ಲಿ ಬೋಧಿಸುತ್ತಾನೆ. ಆಗ ಶುಕನು ಮದುವೆ ಮಾಡಿಕೊಂಡನೆಂದೂ, ಮಕ್ಕಳು ಹುಟ್ಟಿದ ಮೇಲೆ ವೈರಾಗ್ಯದಂದ ಪರಿವ್ರಾಜಕನಾಗುತ್ತಾನೆ ಎಂದೂ ವರ್ಣಿಸಲಾಗಿದೆ. ತುಂಬ ರೋಚಕವಾದ ಶುಕ ಜನಕ ಸಂವಾದವು ಓದಬೇಕಾದದ್ದು (ದೇ. ಭಾಗವತ. ಸ್ಕಂಧ ೧ ಅಧ್ಯಾಯ ೧೭,೧೮,೧೯) ಈ ಪ್ರಕರಣದಲ್ಲಿ ಜನಕ ರಾಜನು ಹೇಳಿದ ಒಂದು ಶ್ಲೋಕವು ಗಮನಾರ್ಹವಾದದ್ದು -

**''ಮರ್ಯಾದಾ ಸರ್ವರಕ್ಷಾರ್ಥಂ ಕೃತಾ ವೇದೇಷು ಸರ್ವಶಃ ।**
**ಅನ್ಯಥಾ ಧರ್ಮನಾಶಃ ಸ್ಯಾತ್ ಸೌಗತಾನಾಮಿವಾನಘ ॥''**

(ದೇ. ಭಾ. ೧-೧೮-೪೬)

''ಸರ್ವಜನರನ್ನೂ ರಕ್ಷಿಸುವುದಕ್ಕಾಗಿ - ಅವರ ಹಿತಕ್ಕಾಗಿ ವೇದದಲ್ಲಿ (ವರ್ಣಾಶ್ರಮ ಧರ್ಮವೆಂಬ) ಒಂದು ವ್ಯವಸ್ಥೆಯನ್ನು ಮಾಡಲಾಗಿದೆ. ಅದನ್ನು ಮೀರಿದರೆ ಬೌದ್ಧರಿಗೆ ಆದಂತೆ ಧರ್ಮ ನಾಶವಾಗಿ ಬಿಡುತ್ತದೆ.'' ಇದಿಷ್ಟು ಡಾ॥ ಭಗವಾನ್‌ದಾಸರ ಗ್ರಂಥದಿಂದ ಸಂಗೃಹಿತವಾದದ್ದು.

ಬುದ್ಧನು ಸಾಕ್ಷಾತ್ತಾಗಿ ಏನನ್ನು ಉಪದೇಶಿಸಿದನೆಂಬುದು ನಮಗೆ ತಿಳಿಯದು. ಆತನು ಸ್ವತಃ ಯಾವ ಗ್ರಂಥವನ್ನೂ ಬರೆದಿಡಲಿಲ್ಲ. ಆತನ ಬೋಧನೆಗೆ ಉಪನಿಷತ್ತುಗಳೇ ಆಧಾರವೆಂದು ಎಲ್ಲ ವಿದ್ವಾಂಸರೂ ಅಂಗೀಕರಿಸಿದ್ದಾರೆ. ಅನಂತರ ಅವನ ಅನುಯಾಯಿಗಳು ಬುದ್ಧನ ಉಪದೇಶವನ್ನು ಹಲವು ಬಗೆಯಲ್ಲಿ

ವಿರೂಪಗೊಳಿಸಿದರೆಂಬುದು ಐತಿಹಾಸಿಕ. ಮಹಾಯಾನ, ಹೀನಯಾನ, ವಜ್ರಯಾನ ಎಂಬ ಮೂರು ಪಂಥಗಳಾದವು. ಈ ಬೌದ್ಧರು ವೇದವನ್ನೇ ನಿಂದಿಸಿ ಹೊಸ ಮತವನ್ನೇ ಸ್ಥಾಪಿಸಿಬಿಟ್ಟರು. ವೈರಾಗ್ಯವೇ ಪ್ರಧಾನವಾಗಿ ಬೌದ್ಧರೆಲ್ಲರೂ ಭಿಕ್ಷುಗಳಾಗತೊಡಗಿದರು. ಸಂಘಾರಾಮವೆಂಬ ಮಠಗಳನ್ನು ಕಲ್ಪಿಸಿಕೊಂಡರು. ಒಂದೊಂದು ಆರಾಮದಲ್ಲಿ ಸಾವಿರಾರು ಭಿಕ್ಷುಗಳು ತುಂಬಿಕೊಂಡರು. ಹೊಟ್ಟೆಪಾಡಿಗಾಗಿ, ಸುಖ ಜೀವನಕ್ಕಾಗಿ ''ಭಿಕ್ಷು'' ವೇಷವನ್ನು ಧರಿಸಿದವರಿಗೆ ವೈರಾಗ್ಯವೆಲ್ಲಿಂದ ಬಂದೀತು? ಅನಾಚಾರ, ದುರಾಚಾರಗಳು ಸೇರಿಹೋದವು. ತಿರಿದು ತಿನ್ನುವ ಈ ಭಿಕ್ಷುಗಳು ಪ್ರಜೆಗಳಿಗೆ ಹೊರೆಯಾದರು. ಅದೇ ಸಮಯದಲ್ಲಿ ದಾಳಿಖೋರರಾದ ಮುಸಲ್ಮಾನರ ಆಕ್ರಮಣ ಪ್ರಬಲವಾಯಿತು. ಏಕೆಂದರೆ, ಅರ್ಥಶೂನ್ಯವಾದ ಬೌದ್ಧರ ಅಹಿಂಸಾವಾದವನ್ನು ಕೇಳಿ ಕೇಳಿ ಭಾರತೀಯರು ಹೇಡಿಗಳಾಗಿದ್ದರು. ಆ ಮುಸಲ್ಮಾನರು ಬಿಹಾರ, ಕೇರಳ ಮುಂತಾದ ರಾಜ್ಯಗಳಲ್ಲಿ ತುಂಬಿಕೊಂಡಿದ್ದ ಸಂಘಾರಾಮಗಳಿಗೆ ನುಗ್ಗಿ ಸಾವಿರಾರು ಜನರನ್ನು ಜಾತಿಗೆಡಿಸಿ ಮತಾಂತರಗೊಳಿಸಿದರು. ಅಹಿಂಸೆಯ ಪರಾಕಾಷ್ಠೆಯನ್ನು ಬೋಧಿಸುತ್ತಿದ್ದ ಜೈನಮುನಿಗಳೂ ನಮ್ಮವರು ಹೇಡಿಗಳಾಗುವುದಕ್ಕೆ ಸಾಕಷ್ಟು ಕಾಣಿಕೆಯನ್ನು ಸಲ್ಲಿಸಿದ್ದರು. ವೈದಿಕ ಧರ್ಮದ ಜಾಡನ್ನು ಅರಿಯಲಾರದೆ, ಧರ್ಮದ ಚೌಕಟ್ಟಿನಿಂದ ಹೊರಗೆ ಕಾಲಿಟ್ಟು **'ಅಹಿಂಸಾಪರಮೋಧರ್ಮಃ'** ಎಂದು ಘೋಷಿಸಿದ್ದ ವೈದಿಕ ಧರ್ಮವನ್ನೇ ಮಾರ್ಪಡಿಸಿ ವೇಷಾಂತರಗೊಳಿಸಿದ್ದಕ್ಕೆ ಆದ ಫಲವಿದು.

ಅದಕ್ಕೆ ವಿರುದ್ಧವಾಗಿ ವೈದಿಕ ಧರ್ಮದವರು ಸಾಧಿಸಿದ ರಾಷ್ಟ್ರಾಭಿಮಾನದ ಅಸಾಧಾರಣ ಕೃತಿಗಳನ್ನು ನೋಡಿರಿ. ಏಕಾಕಿಯಾದ ಒಬ್ಬ ಬ್ರಾಹ್ಮಣ ಚಾಣಕ್ಯನು ದುಷ್ಟರಾದ ನಂದರನ್ನು ಸದೆ ಬಡಿದು, ಸುವರ್ಣ ಯುಗವೆನಿಸಿದ ಗುಪ್ತಸಾಮ್ರಾಜ್ಯವನ್ನೇ ಸ್ಥಾಪಿಸಿದ. ತಾನು ಮಾತ್ರ ನಗರದ ಹೊರಗೆ ಮುರುಕಲು ಗುಡಿಸಲಿನಲ್ಲಿ ವಾಸವಾಗಿದ್ದ. ಗುಪ್ತ ಸಾಮ್ರಾಜ್ಯದಲ್ಲಿ ಅಲೆಕ್ಸಾಂಡರ್ ಮುಂತಾದ ವೀರರಿಗೆ ಹೆಜ್ಜೆಯಿಡಲು ಸಾಧ್ಯವಾಗಲಿಲ್ಲ. ಸಂನ್ಯಾಸಿಗಳಾದ ವಿದ್ಯಾರಣ್ಯರು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿ, ಹುಚ್ಚುಹೊಳೆಯಂತೆ ದಕ್ಷಿಣಕ್ಕೆ ಸಾಗಿ ಬರುತ್ತಿದ್ದ ಮಹಮ್ಮದೀಯ ಸೈನ್ಯವನ್ನು ಅನೇಕ ಶತಮಾನಗಳವರೆಗೆ ತಡೆಹಿಡಿದು ನಿಲ್ಲಿಸಿದರು. ಲಂಗೋಟಿಧಾರಿಗಳಾದ ಸ್ವಾಮಿ ಸಮರ್ಥ ರಾಮದಾಸರು ಶಿವಾಜಿಯನ್ನು ಹುರಿದುಂಬಿಸಿ ಛತ್ರಪತಿ ಮರಾಠಾ ರಾಜ್ಯ ಸ್ಥಾಪನೆಗೆ ನೆರವಾದರು. ಔರಂಗಜೇಬನ ಮತಾಂತರೀಕರಣದ ಉನ್ಮಾದಕ್ಕೆ ಔಷಧವನ್ನು ಕೊಡಿಸಿದರು. ನಾನಕ್ ಗುರುವು ಸಿಖ್ ಮತವನ್ನು ಸ್ಥಾಪಿಸಿದ್ದು ಮಹಮ್ಮದೀಯರು ಮಾಡುತ್ತಿದ್ದ ಮತಾಂತರೀಕರಣವನ್ನು ತಡೆಯುವುದಕ್ಕಾಗಿಯೇ. ಕಾಲಾನುರೋಧವಾಗಿ

ಹಿಂದೂ ಧರ್ಮದಲ್ಲಿ ಮಾಡಿದ ಅಲ್ಪ ಪರಿವರ್ತನೆ ಅದು. ನಾನಕ್ ಗುರುವಿನ ಗ್ರಂಥ ಸಾಹೇಬದಲ್ಲಿ ತುಂಬಿರುವುದು ವೈದಿಕ ಧರ್ಮವೇ. ಸ್ಪಷ್ಟವಾಗಿ ಅದ್ವೈತ ವೇದಾಂತವನ್ನೇ ಅದು ಬೋಧಿಸಿದೆ. ಸಿಖ್ ಗುರುಗಳೆಲ್ಲರೂ ಶ್ರೀರಾಮ ಭಕ್ತರು. ಮುಸಲ್ಮಾನರ ಹಾವಳಿಯನ್ನು ತಡೆಯಲಾರದೆ ಅನಂತರ ಖಡ್ಗಧಾರಿಗಳಾದರು. ವೀರಯೋಧರಾಗಿ ಮುಸಲ್ಮಾನರನ್ನೆದುರಿಸಿದ್ದು ಗುರುಗೋವಿಂದ ಸಿಂಹನೇ ಮೊದಲಾದವರ ಉಪದೇಶದಿಂದಲೇ. ಧೀರ ಕ್ಷತ್ರಿಯರಾಗಿ ಪಂಜಾಬನ್ನು ವೀರಭೂಮಿಯನ್ನಾಗಿ ಉಳಿಸಿದವರು ಸಿಕ್ಕರು. ಸಿಕ್ ಮತವು ಹಿಂದೂ ಮತಕ್ಕಿಂತ ಬೇರೆಯದೆಂದು ಸಾರುವುದಕ್ಕೆ ರಾಜಕೀಯಸ್ಥರ ಕುತ್ಸಿತ ಮನೋವೃತ್ತಿಯೇ ಕಾರಣ. ಹಣಕ್ಕಾಗಿ ಅಧಿಕಾರಕ್ಕಾಗಿ ತಮ್ಮ ಕಣ್ಣನ್ನೇ ಕಿತ್ತು ಹಾಕಲು ತಯಾರಾದ ಜನರಿವರು.

ಇರಲಿ, ನಮ್ಮ ಲೇಖನ ಎತ್ತೆತ್ತಲೋ ಜಾರಿ ಬಿಡುತ್ತದೆ! ವೈದಿಕ ಧರ್ಮವು ಪ್ರವೃತ್ತಿ, ನಿವೃತ್ತಿಗಳೆರಡನ್ನೂ ಬೋಧಿಸುತ್ತದೆ. ಮನುಷ್ಯನು ಸಹಜವಾಗಿ ಪ್ರವೃತ್ತಿ ಮಾರ್ಗದವನು. ಅರ್ಥ ಕಾಮಗಳಿಗಾಗಿ ಆಯುಸ್ಸನ್ನು ಸವೆಸತಕ್ಕವನು. ಅದು ಬೇಡವೆಂದು ಭಗವಂತನು ಬಂದು ಹೇಳಿದರೂ ಮಾನವನು ಕೇಳುವುದಿಲ್ಲ. ಹೀಗಿರುವಾಗ ಗ್ರಂಥಗಳು ವೈರಾಗ್ಯವನ್ನು ಉಪದೇಶಿಸಿದರೆ ಆಗತಕ್ಕದ್ದೇನು? ಈ ರಹಸ್ಯವನ್ನರಿತೇ ಮೇಧಾವಿಗಳಾದ ಋಷಿಗಳು ಅರ್ಥಕಾಮಗಳನ್ನು ನಿಷೇಧಿಸಲಿಲ್ಲ. ಅವು ವ್ಯಕ್ತಿಗೂ ಸಮಾಜಕ್ಕೂ ಹಿತಕಾರಿಗಳೇ ಆಗುವಂತೆ ಧರ್ಮವೆಂಬ ಅಂಕುಶದಿಂದ ನಿಯಂತ್ರಿಸಿದರು. **''ಧರ್ಮಾರ್ಥ ಕಾಮಾಃ ಸಮಮೇವ ಸೇವ್ಯಾಃ''** ಧರ್ಮಾರ್ಥಕಾಮಗಳಲ್ಲಿ ಮೂರಕ್ಕೂ ಸಮಾನವಾದ ಪ್ರಾಧಾನ್ಯವನ್ನಿತ್ತು ಮೂರನ್ನೂ ಸೇವಿಸತಕ್ಕದ್ದು. **'ಯೋ ಹ್ಯೇಕಸಕ್ತಃ ಸ ನರೋ ಜಘನ್ಯಃ'** ಇವುಗಳಲ್ಲಿ ಯಾವನಾದರೂ ಕೇವಲ ಧರ್ಮದಲ್ಲಿಯೋ, ಧನಾರ್ಜನೆಯಲ್ಲಿಯೋ ಅಥವಾ ಭೋಗಾಸಕ್ತಿಯಲ್ಲಿಯೋ ತೊಡಗಿದ್ದರೆ, ಅವನು ಕೀಳು ಮನುಷ್ಯನೆಂದು (ಅವಿವೇಕಿಯೆಂದು) ತಿಳಿಯತಕ್ಕದ್ದು - ಎಂದು ಸಾರಿದವರು ವ್ಯಾಸ ಮಹರ್ಷಿಗಳು. ಇಂತಹ ನೂರಾರು ಪ್ರಮಾಣಗಳನ್ನು ಪ್ರವೃತ್ತಿ ಮಾರ್ಗದ ಸ್ತುತಿಗಾಗಿ ತೋರಿಸಬಹುದು. ತಾತ್ಪರ್ಯವೇನೆಂದರೆ, ನಮ್ಮ ಗ್ರಂಥಗಳು ಬರಿಯ ವೈರಾಗ್ಯವನ್ನು ಬೋಧಿಸುತ್ತವೆ ಎಂಬುದು ಅಜ್ಞಾನದಿಂದಲೇ. ಇದು ಕಿಡಿಗೇಡಿತನದ ಆಪಾದನೆಯೇ ಹೊರತು ಸತ್ಯವಲ್ಲ.

ಶ್ರೀ ಶಂಕರಾಚಾರ್ಯರೇ ಗೀತಾ ಭಾಷ್ಯದ ಆದಿಯಲ್ಲಿ ಪ್ರವೃತ್ತಿ, ನಿವೃತ್ತಿ ಎಂಬೆರಡು ವೇದೋಕ್ತ ಧರ್ಮಗಳೆಂದೂ ಪರಮಾತ್ಮನು ಸೃಷ್ಟಿಯ ಆದಿಯಲ್ಲಿ ಮರೀಚಿ, ಕಶ್ಯಪ ಮೊದಲಾದ ಪ್ರಜಾಪತಿಗಳನ್ನು ಸೃಜಿಸಿ, ಪ್ರಾಣಿಗಳ ಅಭ್ಯುದಯಕ್ಕೆ ಹೇತುವಾದ ಪ್ರವೃತ್ತಿ ಲಕ್ಷಣ ಧರ್ಮವನ್ನು ಮರೀಚಿಯೇ ಮೊದಲಾದ ಪ್ರಜಾಪತಿಗಳಿಗೆ

ಬೋಧಿಸಿದನೆಂದೂ ಬರೆದಿದ್ದಾರೆ. ಈ ಪ್ರವೃತ್ತಿ ಧರ್ಮವು ವೇದೋಕ್ತವೆಂದೂ, ಪ್ರಾಣಿಗಳ ಅಭ್ಯುದಯಕ್ಕೆ ಹೇತುವೆಂದೂ, ಪರಮಾತ್ಮನೇ ಲೋಕಸ್ಥಿತಿಗಾಗಿ ಇದನ್ನು ಬೋಧಿಸಿದನೆಂದೂ ಸ್ಪಷ್ಟವಾಗಿ ತಿಳಿದುಬರುತ್ತದೆ. ಹೀಗಿರುವಾಗ ಯಾವ ವೈದಿಕನು ಪ್ರವೃತ್ತಿ ಲಕ್ಷಣ ಧರ್ಮವನ್ನು ನಿರಾಕರಿಸಿಯಾನು? ಅತ್ರಿ, ಅಗಸ್ತ್ಯ, ವಸಿಷ್ಠ, ವಿಶ್ವಾಮಿತ್ರಾದಿ ಮಹರ್ಷಿಗಳು ಗೃಹಸ್ಥರೇ ಹೊರತು ಸಂನ್ಯಾಸಿಗಳಲ್ಲ, ಸ್ವತಃ ಮನುವೂ ಸಹ ಗೃಹಸ್ಥನಾಗಿದ್ದು ಮನುವಂಶಕ್ಕೆ ಮೂಲ ಪುರುಷನಾಗಿದ್ದನು. ಮನುಸ್ಮೃತಿ ಹೇಳುತ್ತದೆ -

**''ಋಣಾನಿ ತ್ರೀಣ್ಯಪಾಕೃತ್ಯ ಮನೋಮೋಕ್ಷೇ ನಿವೇಶಯೇತ್ ।**
**ಅನಪಾಕೃತ್ಯ ಮೋಕ್ಷಂ ತು ಸೇವಮಾನೋ ವ್ರಜತ್ಯಧಃ ॥''** (ಮನು ೬-೩೫)

ಮಾನವನು ಗೃಹಸ್ಥನಾಗಿ ಮೂರು ಋಣಗಳನ್ನು ತೀರಿಸಿದ ಮೇಲೆ ಮನಸ್ಸನ್ನು ಮೋಕ್ಷದ ಕಡೆಗೆ ಇರಿಸಬೇಕು. ಈ ಋಣಗಳನ್ನು ತೀರಿಸದೇ ಮೋಕ್ಷಕ್ಕಾಗಿ ಸಂನ್ಯಾಸಿಯಾದರೆ, ಅವನು ಪತಿತನಾಗುತ್ತಾನೆ - ಎಂದು ಈ ಶ್ಲೋಕದ ತಾತ್ಪರ್ಯ. ಮನುಷ್ಯನು ಹುಟ್ಟುವಾಗಲೇ ಮೂರು ಋಣಗಳನ್ನು ಕಟ್ಟಿಕೊಂಡಿರುತ್ತಾನೆಂದು ಶ್ರುತಿ ಹೇಳುತ್ತದೆ. ಪ್ರವೃತ್ತಿ ಧರ್ಮಕ್ಕೆ ಮನುಷ್ಯನನ್ನು ಬಿಗಿದು ಕಟ್ಟುವುದಕ್ಕಾಗಿ ಋಣಗಳೆಂಬ ಮೂರು ಹಗ್ಗಗಳನ್ನು ನಿರ್ಮಿಸಿ ಅವುಗಳಿಗೆ ಧರ್ಮದ ಲೇಪವನ್ನು ಬಳಿದಿದ್ದಾರೆ.

ಆಧುನಿಕ ಸಮಾಜಶಾಸ್ತ್ರವು 'ಸಾಮಾಜಿಕ ಋಣ' ಎಂಬುದನ್ನೊಪ್ಪಿ ಮನುಷ್ಯನು ಸಮಾಜಕ್ಕೆ ಋಣಿಯಾಗಿರುತ್ತಾನೆಂದೂ, ಇದನ್ನು ತೀರಿಸುವುದಕ್ಕೋಸ್ಕರ ಸಮಾಜದ ಹಿತಕ್ಕಾಗಿ ದುಡಿಯಲೇಬೇಕೆಂದೂ ಬೋಧಿಸುತ್ತದೆ. ಸಾವಿರಾರು ವರ್ಷಗಳ ಹಿಂದೆಯೇ ಮನುಸ್ಮೃತಿಯು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಋಣತ್ರಯವನ್ನು ಬೋಧಿಸಿದೆ. ಇದು ಆಧುನಿಕವಾದ ''ಸಾಮಾಜಿಕ ಋಣ''ಕ್ಕಿಂತ ವ್ಯಾಪಕವಾದದ್ದು. ಸರ್ವಜ್ಞವಾದ ವೇದವೇ ಇದನ್ನು ಮಾನವನಿಗೆ ಬೋಧಿಸಿದೆ. ಆನಂತರ ಮನುಸ್ಮೃತಿ ಮೊದಲಾದ ಧರ್ಮ ಶಾಸ್ತ್ರಗಳು ವಿವರಿಸಿದ್ದರೂ ಧರ್ಮಶಾಸ್ತ್ರಗಳಲ್ಲಿ ಪ್ರಧಾನವಾದ ಮನುಸ್ಮೃತಿಯನ್ನೇ ಈ ಪ್ರಬಂಧಮಾಲೆಯಲ್ಲಿ ಮುಖ್ಯವಾಗಿ ಹೆಸರಿಸುತ್ತ ಬರಲಾಗಿದೆಯೆಂಬುದನ್ನು ನೆನಪಿನಲ್ಲಿಡಬೇಕು. ಋಷಿ ಋಣ, ಪಿತೃ ಋಣ, ದೇವ ಋಣ ಇವು ಮೂರು ಋಣಗಳು.

ಮನುಷ್ಯನು ಸಮಾಜ ಜೀವಿ. ಒಂಟಿಯಾಗಿ ಕಾಡಿನಲ್ಲಿ ಜೀವಿಸಲಾರ. ಗೃಹಸ್ಥನಂತೂ ತನ್ನ ಬದುಕಿಗೆ ಸಮಾಜವನ್ನವಲಂಬಿಸಿ ಜನರ ನಡುವೆ ಜನರ ಸಹಾಯದಿಂದಲೇ ಬದುಕನ್ನು ಸಾಗಿಸಬೇಕಾಗಿದೆ. ಇವನಿಗೆ ಆಹಾರ ಪದಾರ್ಥ, ವಸ್ತ್ರ ಔಷಧಾದಿಗಳು ಬೇಕು. ಕಳ್ಳಕಾಕರಿಂದ ಭೀತಿಯು ತಪ್ಪುವುದಕ್ಕಾಗಿ ರಕ್ಷಣೆ ಬೇಕು. ಮಕ್ಕಳ ವಿದ್ಯಾಭ್ಯಾಸಕ್ಕೆ ಶಾಲೆಗಳು ಬೇಕು. ಇವುಗಳ ಪಟ್ಟಿ ಬಹಳ ದೊಡ್ಡದಾದೀತು. ಅಂತೂ

ಸಮಾಜದ ನೆರವಿಲ್ಲದೇ ಇವನ ಬದುಕು ಎಂದಿಗೂ ಸಾಗುವುದಿಲ್ಲವಾದ್ದರಿಂದ, ಪ್ರತಿಯಾಗಿ ತಾನೂ ಸಮಾಜದ ಹಿತಕ್ಕಾಗಿ ಯಥಾಶಕ್ತಿ ದುಡಿಯಲೇಬೇಕೆಂದು ಸಮಾಜ ಶಾಸ್ತ್ರದ ಬೋಧನೆಯಾಗಿರುತ್ತದೆ.

''**ನಾನುಪಹತ್ಯ ಭೂತಾನಿ ಉಪಭೋಗಃ ಸಂಭವತಿ**'' ಎಂದು ಯೋಗಭಾಷ್ಯದ ವಚನ. (ಸಾಧನಪಾದ - ಸೂತ್ರ ೧೫) . ಇತರ ಜೀವಿಗಳಿಗೆ ಹಿಂಸೆ ಮಾಡದೇ ಯಾರಿಗೂ ಉಪಭೋಗವು ಸಂಭವಿಸುವುದಿಲ್ಲ - ಎಂದು ಅದರ ತಾತ್ಪರ್ಯ. ಇಲ್ಲಿ ವಿಷಯ ಭೋಗವೆಂಬ ಶಬ್ದವನ್ನು ಬಳಸದೇ ಉಪಭೋಗ ಶಬ್ದವನ್ನು ಬಳಸಿದ್ದಾರೆ. ದಿನದಲ್ಲಿ ಯಾವ ವಸ್ತುವನ್ನು ಬಳಸಿದರೂ ಅದು ಉಪಭೋಗವೇ. ಕಾಲಿಗೆ ಚಪ್ಪಲಿ, ಮುಳ್ಳು ತೆಗೆಯಲು ಸೂಜಿ, ಬರೆಯಲು ಪೆನ್ಸಿಲ್ ಬಳಸಿದ್ದರೂ ಉಪಭೋಗವೇ. ಇನ್ನೊಬ್ಬರ ಶ್ರಮವಿಲ್ಲದೇ ಒಂದೇ ಒಂದು ವಸ್ತುವೂ ನಮಗೆ ದೊರಕದು. ಬಹುಶ್ರಮದಿಂದ ಪೂರ್ವಜರು ಸಂಪಾದಿಸಿಕೊಟ್ಟಿರುವ ಲೌಕಿಕ ಮತ್ತು ಪಾರಮಾರ್ಥಿಕ ಜ್ಞಾನವನ್ನು ಜೀವನದಲ್ಲಿ ನಾವು ಉಪಯೋಗಿಸಿಕೊಳ್ಳುತ್ತೇವೆ. ಇದು **ಋಷಿ ಋಣ.** ಸ್ವತಃ ಅಧ್ಯಯನ, ಅಧ್ಯಾಪನ, ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಇವುಗಳಿಂದ ಋಷಿಋಣವನ್ನು ತೀರಿಸಬೇಕು. **ಪಿತೃಋಣ**ವೆಂಬುದು ಬಹುದೊಡ್ಡದು - ಎಂದರೆ ವಿಶಾಲವಾದದ್ದು. ಸಂಸ್ಕಾರ ಸಂಪನ್ನವಾದ ಜನಸಂತತಿ ಬೆಳೆಯುತ್ತ ಹೋಗಲೆಂಬುದು ಮುಖ್ಯ ಉದ್ದೇಶವಾಗಿದ್ದರೂ, ಗೃಹಸ್ಥನು ಸಮಾಜ ಜೀವಿಯಾಗಿದ್ದು, ಪೂರ್ವೋಕ್ತವಾದ **'ಸಾಮಾಜಿಕ ಋಣ'** ವನ್ನು ತೀರಿಸಬೇಕಾಗುತ್ತದೆ. ಈತನು ಮಾಡಬೇಕಾದ ಯಜ್ಞವು ಸೋಮಯಾಗವೂ ಅಲ್ಲ, ಅಶ್ವಮೇಧವೂ ಅಲ್ಲ. ಭಗವದ್ಗೀತೆಯಲ್ಲಿ ಹೇಳಿದಂತೆ ಯಜ್ಞವು ಬಹುವಿಧವಾದದ್ದು. ನಿತ್ಯವೂ ಗೃಹಸ್ಥನು ಪಂಚಯಜ್ಞಗಳನ್ನು ಮಾಡಬೇಕಾಗಿದೆ. ಬ್ರಹ್ಮಯಜ್ಞ, ಪಿತೃಯಜ್ಞ, ದೇವಯಜ್ಞ, ಭೂತಯಜ್ಞ, ಮನುಷ್ಯಯಜ್ಞ - ಇದೇ ಪಂಚಮಹಾಯಜ್ಞಗಳು. ಮನು ಹೇಳುತ್ತಾನೆ -

**ಅಧ್ಯಾಪನಂ ಬ್ರಹ್ಮಯಜ್ಞಃ ಪಿತೃಯಜ್ಞಸ್ತು ತರ್ಪಣಂ।**
**ಹೋಮೋ ದೈವೋ ಬಲಿರ್ಭೌತೋ ನೃಯಜ್ಞೋಽತಿಥಿಪೂಜನಮ್ ॥**

(ಮನು ೩-೭೦)

ವೇದಶಾಸ್ತ್ರಾಧ್ಯಯನ ಅವುಗಳ ಅಧ್ಯಾಪನ ಇವೆರಡೂ ಸೇರಿ ಬ್ರಹ್ಮಯಜ್ಞವೆನಿಸುತ್ತದೆ. ತರ್ಪಣವು ಪಿತೃಯಜ್ಞ, ವೈಶ್ವದೇವ ಹೋಮವು ದೇವಯಜ್ಞ, ಭೂತಬಲಿಯು ಭೂತಯಜ್ಞ, ಅತಿಥಿ ಸತ್ಕಾರವು ಮನುಷ್ಯ ಯಜ್ಞ. ಇವುಗಳನ್ನಿಲ್ಲಿ ವಿಶೇಷವಾಗಿ ವಿವರಿಸಬೇಕಾದ್ದಿಲ್ಲ. ಹಿಂದೆ ಹೇಳಿದ ಋಣತ್ರಯದ ವಿಮೋಚನೆಯೂ ಇದರಲ್ಲಡಗಿದೆ. ಭೂತಬಲಿಯೆಂದರೆ ನಾಯಿ, ಬೆಕ್ಕು ಮುಂತಾದ ಪ್ರಾಣಿಗಳಿಗೆ ಅನ್ನ

ಹಾಕುವುದು. ಈ ಪಂಚಮಹಾಯಜ್ಞಗಳು ಸಾಂಕೇತಿಕವಾದವು. ಇವನ್ನು ವ್ಯಾಪಕಾರ್ಥದಲ್ಲಿ ತೆಗೆದುಕೊಳ್ಳಬೇಕು. ಉದಾಹರಣೆಗೆ ಮನುಷ್ಯಯಜ್ಞವು ಬಡವರಿಗೆ ಅನ್ನದಾನ ಮಾಡುವುದಕ್ಕೆ ಉಪಲಕ್ಷಣ.

ಹೀಗೆ ಉಪಲಕ್ಷಣವಾಗಿ ತೆಗೆದುಕೊಂಡಾಗ ಸಮಾಜಶಾಸ್ತ್ರದ ಸಾಮಾಜಿಕ ಋಣವೆಲ್ಲವೂ ಇವುಗಳಲ್ಲಿ ಅಂತರ್ಗತವಾಗಿಬಿಡುತ್ತವೆ. ಅನ್ನಾರ್ಥಿಯಾಗಿ ಶೂದ್ರನು ಬಂದರೂ ಅತಿಥಿಯಂತೆ ಸತ್ಕರಿಸಬೇಕು. (ಮನು ೩-೧೧೨-೧೧೩)

ನೀರು, ಗಾಳಿ, ಬೆಳಕು, ಮರ, ಗಿಡ, ಬಳ್ಳಿ, ಹೂ, ಹಣ್ಣು ಮೊದಲಾದ ಸಕಲ ಪ್ರಾಕೃತಿಕ ವಸ್ತುಗಳು ದೈವಾನುಗ್ರಹದಿಂದ ನಮಗೆ ದೊರಕಿವೆ. ಈ ಕಾರಣದಿಂದ ದೇವಯಜ್ಞವನ್ನು ವಿಧಿಸಿದರು. ಇದೇ ಈಗ ವೈಶ್ವದೇವನೆನಿಸುತ್ತದೆ. ಇದರ ಉದ್ದೇಶವನ್ನು ಮನುವು ಇನ್ನೂ ವಿಸ್ತರಿಸಿ ಹೇಳಿದ್ದಾನೆ. ''**ನಾನುಪಹತ್ಯ ಭೂತಾನಿ ಉಪಬೋಗಃ ಸಂಭವತಿ**'' ಎಂಬ ನ್ಯಾಯದಂತೆ, ನಾವು ಎಷ್ಟು ಎಚ್ಚರದಿಂದಿದ್ದರೂ ನಮ್ಮಿಂದ ಕೆಲವು ಹಿಂಸೆಗಳು ನಡೆದೇ ನಡೆಯುತ್ತವೆ.

**ಪಂಚಸೂನಾಗೃಹಸ್ಥಸ್ಯ ಚುಲ್ಲೀ ಪೇಷಣ್ಯುಪಸ್ಕರಃ ।**
**ಕಂಡನೀ ಚೋದ ಕುಂಭಶ್ಚ ಬಧ್ಯತೇ ಯಾಸ್ತುವಾಹಯನ್ ॥**'' (೩-೬೮)

ಚುಲ್ಲಿ - ಒಲೆ, ಪೇಷಣಿ - ಬೀಸುವ ಕಲ್ಲು, ಉಪಸ್ಕಾರ - ಕಸಬರಿಗೆ, ಕಂಡನಿ - ಒರಳು, ಹಾರೆ, ಉದಕುಂಭ - ನೀರು ತುಂಬಿದ ಪಾತ್ರೆ ಈ ಪಂಚಸೂನಾ ದೋಷಗಳ ಪರಿಹಾರಕ್ಕಾಗಿ ಗೃಹಸ್ಥನು ಮನೆಯಲ್ಲಿ ವೈಶ್ವದೇವವನ್ನು ಮಾಡತಕ್ಕದ್ದು. ಸೂನಾ ಎಂದರೆ ಹಿಂಸೆಯ ಸ್ಥಾನ, ಹಿಂಸೆಯ ನಿಮಿತ್ತ. ಈ ಪ್ರಕಾರವಾಗಿ ನಾಯಿ, ಬೆಕ್ಕು, ಕ್ರಿಮಿ, ಕೀಟಗಳಲ್ಲಿ ಸಹ ಅನುಕಂಪೆ, ದಯಾಮಯನಾದ ಭಗವಂತನಲ್ಲಿ ಭಕ್ತಿ ಇವೆರಡನ್ನು ಧರ್ಮದ ಚೌಕಟ್ಟಿಗೆ ಒಳಪಡಿಸಿ ನಿರ್ಬಂಧದಿಂದ ಪಾಲಿಸಬೇಕೆಂದು ಮನುಸ್ಮೃತಿಯು ವಿಧಿಸಿದೆ. ಸಾಮಾಜಿಕ ಋಣವೆಂಬ ಆಧುನಿಕ ಕಲ್ಪನೆಯನ್ನು ಇವು ಹೇಳುವುದಿಲ್ಲ.

ಇಷ್ಟಾದ ಮೇಲೆ ಸಂನ್ಯಾಸಕ್ಕೆ ಅಧಿಕಾರ ಬರುತ್ತದೆ. ಸಂನ್ಯಾಸಿಯೂ ಸಹ ಭಿಕ್ಷೆಗಾಗಿ, ತುಂಡು ಬಟ್ಟೆಗಾಗಿ ಸಮಾಜವನ್ನಾಶ್ರಯಿಸಬೇಕಾಗುತ್ತದೆ. ಇದನ್ನು ನೆನಪಿನಲ್ಲಿಟ್ಟು ಶ್ರೀ ಶಂಕರರು ಕೌಪೀನ ಪಂಚಕದಲ್ಲಿ ''**ಲೋಕಹಿತಂ ಚರಂತಃ**'' ಎಂದು ಸಂನ್ಯಾಸಿಗಳನ್ನು ವರ್ಣಿಸಿದ್ದಾರೆ. ಜನರನ್ನು ಉನ್ಮಾರ್ಗದಿಂದ ತಪ್ಪಿಸುವುದಕ್ಕಾಗಿ ಅವರ ಶ್ರೇಯಸ್ಸಿಗಾಗಿ ಧರ್ಮೋಪದೇಶವನ್ನು ಮಾಡುತ್ತಲೇ ಪರಿವ್ರಾಜಕನಾಗಿರಬೇಕು. ಮಳೆಗಾಲದಲ್ಲಿ ಸಂಚಾರವು ಕಠಿಣವಾದ್ದರಿಂದ ಚಾತುರ್ಮಾಸ ವ್ರತಕ್ಕಾಗಿ ಸಂನ್ಯಾಸಿಯು ಒಂದೇ ಸ್ಥಳದಲ್ಲಿ ನೆಲೆಸಬೇಕಾಗುತ್ತದೆ. ಆಗ ಆತನ ಅವಶ್ಯಕತೆಗಳನ್ನು

ಗ್ರಾಮಸ್ಥರು ಪೂರೈಸಬೇಕು. ಅದಕ್ಕೆ ಪ್ರತಿಯಾಗಿ ಸಂನ್ಯಾಸಿಯೇ ಧಾರ್ಮಿಕ ಪ್ರವಚನಗಳಿಂದ ಅವರ ಉಪಕಾರವನ್ನು ತೀರಿಸಬೇಕೆಂದು ಶಾಸ್ತ್ರವು ವಿಧಿಸುತ್ತದೆ. ಧರ್ಮಶಾಸ್ತ್ರವು ಒಣ ವೈರಾಗ್ಯವನ್ನು ಬೋಧಿಸಿ ಲೋಕವ್ಯವಹಾರವನ್ನು ಉಪೇಕ್ಷಿಸುತ್ತದೆಯೆನ್ನುವುದು ಅವಿವೇಕದ ನುಡಿ. ಅಂತೆಯೇ ''ಸಂನ್ಯಾಸಿಗಳು ಸಮಾಜಕ್ಕೆ ಹೊರೆ'' ಎಂಬುದಂತೂ ಅಜ್ಞಾನಿಗಳಾಡುವ ತುಟಿಮಿರಿದ ಸೊಕ್ಕಿನ ಮಾತು. ಇವರು ಧರ್ಮಶಾಸ್ತ್ರವನ್ನು ಎಡಗಣ್ಣಿನಿಂದಲೂ ನೋಡಿದವರಲ್ಲ. ಬ್ರಹ್ಮಚಾರಿಗಳಿಗೂ, ಸಂನ್ಯಾಸಿಗಳಿಗೂ ಆಶ್ರಯವನ್ನು ನೀಡುವುದು ಗೃಹಸ್ಥಾಶ್ರಮವಾದ್ದರಿಂದ ಗೃಹಸ್ಥಾಶ್ರಮವನ್ನೇ ಮನುಸ್ಮೃತಿಯು ವಿಶೇಷವಾಗಿ ಹೊಗಳಿದೆ. ಕಲಿಯುಗದಲ್ಲಿ ವಾನಪ್ರಸ್ಥಾಶ್ರಮವು ನಿಷಿದ್ಧ. ಗೃಹಸ್ಥನಾಗಿದ್ದುಕೊಂಡೇ ಕ್ರಮವಾಗಿ ತನ್ನ ಲೋಕ ವ್ಯವಹಾರವನ್ನು ಮೋಟಕುಗೊಳಿಸುತ್ತ ಮನಃಪರಿಪಾಕದಿಂದ ವೈರಾಗ್ಯವನ್ನು ತಂದುಕೊಳ್ಳಲೆಂದು ಆಶಯ. ಈ ಕಾಲದಲ್ಲಿ ಧನ ಲೋಲುಪರಾದ ಜನರೂ, ಸರ್ಕಾರದವರೂ ಮರಗಳನ್ನು ಕಡಿದು ಅರಣ್ಯವನ್ನು ಧ್ವಂಸಗೊಳಿಸುವುದರಿಂದ ವಾನಪ್ರಸ್ಥರಿಗೆ ಗಡ್ಡೆ ಗೆಣಸುಗಳೂ, ಹಣ್ಣು ಹಂಪಲಗಳೂ ದೊರೆಯುವುದಿಲ್ಲವೆಂದು ಧರ್ಮಶಾಸ್ತ್ರವು ವಾನಪ್ರಸ್ಥಾಶ್ರಮವನ್ನು ನಿಷೇಧಿಸಿದ್ದರೂ ಇರಬಹುದು!

**''ವಿವಿದಿಷಾಸಂನ್ಯಾಸ, ವಿದ್ವತ್ ಸಂನ್ಯಾಸ''** ಎಂದು ಸಂನ್ಯಾಸವು ಎರಡು ವಿಧ. ಆತ್ಮಜ್ಞಾನವನ್ನು ಪಡೆಯುವ ಇಚ್ಛೆ ವಿವಿದಿಷಾ. ಈ ಉದ್ದೇಶದಿಂದ ತೆಗೆದುಕೊಳ್ಳುವ ಸಂನ್ಯಾಸ ವಿವಿದಿಷಾ ಸಂನ್ಯಾಸ. ಆತ್ಮಜ್ಞಾನಿಯಾದ ವಿದ್ವಾಂಸನಿಗೆ ಸ್ವತಃ ಪ್ರಾಪ್ತವಾಗತಕ್ಕದ್ದು ವಿದ್ವತ್ ಸಂನ್ಯಾಸ. ಮಠಾಧಿಪತಿಗಳು ಪ್ರಾಯೇಣ ವಿವಿದಿಷಾ ಸಂನ್ಯಾಸಿಗಳಾಗಿರುತ್ತಾರೆ. ಯಾವ ಸಂನ್ಯಾಸವೇ ಆಗಿರಲಿ, ಜನರಿಗೆ ಧರ್ಮೋಪದೇಶವನ್ನು ಮಾಡುತ್ತ ಅವರ ನಡೆನುಡಿಗಳನ್ನು ತಿದ್ದಿ ಮಾರ್ಗದರ್ಶನ ಮಾಡುವುದು ಪೀಠಾಧಿಪತಿಗಳ ಕರ್ತವ್ಯವಾಗಿದೆ. ಈ ಉದ್ದೇಶದಿಂದಲೇ ಉದಾರಿಗಳಾದ ರಾಜರೂ, ಶ್ರೀಮಂತರೂ ಮಠಗಳಿಗೆ ಭೂದಾನಾದಿಗಳನ್ನು ಮಾಡಿ ಅನುಕೂಲತೆಗಳನ್ನು ಕಲ್ಪಿಸಿಕೊಟ್ಟಿದ್ದಾರೆ. ಧರ್ಮಪ್ರಚಾರವೇ ಲೋಕ ಸಂಗ್ರಹ. ಶ್ರೀ ಶಂಕರ ಭಗವತ್ಪಾದರು ಮಠಗಳ ನಿರ್ಮಾಣವನ್ನು ಪ್ರೋತ್ಸಾಹಿಸಿದ್ದು ಈ ಉದ್ದೇಶದಿಂದಲೇ. ಸಂನ್ಯಾಸಿಗಳಾದ ಶ್ರೀ ವಿದ್ಯಾರಣ್ಯ ಸ್ವಾಮಿಗಳು ವಿಜಯ ನಗರ ಸಾಮ್ರಾಜ್ಯವನ್ನು ಸ್ಥಾಪಿಸಿ, ವೇದಭಾಷ್ಯಗಳನ್ನು ಬರೆಯಿಸಿ, ಸ್ವತಃ ಬರೆದು ಲೋಕ ಸಂಗ್ರಹಕ್ಕಾಗಿ ಎಂತಹ ಅದ್ಭುತ ಮಹಾಕಾರ್ಯಗಳನ್ನೆಸಗಿದರೆಂಬುದನ್ನು ಇತಿಹಾಸವು ದಾಖಲಿಸಿದೆ. ಈ ದಿಶೆಯಲ್ಲಿ ಶ್ರೀ ಸಮರ್ಥರಾಮದಾಸರು, ಬ್ರಹ್ಮಚೈತನ್ಯರು, ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರೇ ಮೊದಲಾದ ಮಹನೀಯರನ್ನು

ಸ್ಮರಿಸಿಕೊಳ್ಳಬಹುದು. ಮನುಸ್ಮೃತಿ ಹೇಳುತ್ತದೆ -

**ಅಹಿಂಸಾ ಸತ್ಯಮಸ್ತೇಯಂ ಶೌಚ ಮಿಂದ್ರಿಯ ನಿಗ್ರಹಃ ।**
**ಏತಂ ಸಾಮಾಜಿಕಂ ಧರ್ಮಂ ಚಾತುರ್ವರ್ಣ್ಯೇಽಬ್ರವೀನ್ಮನುಃ॥** (೧೦-೬೩)

ಹಿಂಸಾ ತ್ಯಾಗ, ಯಥಾರ್ಥವಾದ ನುಡಿ, ಕಳ್ಳತನ ಮಾಡದಿರುವುದು ಅನ್ಯಾಯವಾಗಿ ಪರಧನವನ್ನು ತೆಗೆದುಕೊಳ್ಳದಿರುವುದು, ಮನಸ್ಸು, ಮಾತು, ದೇಹ ಈ ಮೂರರಲ್ಲಿ ಶುದ್ಧತೆ ಇಂದ್ರಿಯ ಸಂಯಮ ಈ ನಾಲ್ಕು - ನಾಲ್ಕು ವರ್ಣದವರೂ ಪಾಲಿಸಬೇಕಾದ ಧರ್ಮ.

ಈ ನಾಲ್ಕು ಗುಣಗಳು ಮನುಷ್ಯಪ್ರಾಣಿಗೆ ಮನುಷ್ಯತ್ವವನ್ನು ಉಂಟುಮಾಡತಕ್ಕವು. ಸಾಮಾಜಿಕರನ್ನೂ ಮೊದಲು ಮನುಷ್ಯರನ್ನಾಗಿ ಮಾಡುವುದಕ್ಕಿಂತ ಹೆಚ್ಚಿನ ಸಮಾಜ ಸೇವೆ ಯಾವುದಿದ್ದೀತು? ಮನುಸ್ಮೃತಿ ಇರುವುದೇ ಮಾನವ ಧರ್ಮವನ್ನು ತಿಳಿಸಿಕೊಡುವುದಕ್ಕಾಗಿ. ಮಾನವ ಧರ್ಮವನ್ನೇ ಪಾಲಿಸದವನು ಮಾನವನಲ್ಲ. ಅವನು ಮಾನವವೃಕ ಅಥವಾ ವೃಕಮಾನವ. ಮೃಗ ಮಾನವ.

## ಏಷಣಾತ್ರಯ

ಮನು ಮಹರ್ಷಿಯು ಮನುಷ್ಯನ ಹೃದಯಾಂತರಾಳದ ಆಸೆಗಳೆಲ್ಲವನ್ನೂ ಬಲ್ಲನು. ಅವು ಕೈಗೂಡದೇ ಹೋದರೆ ಅವುಗಳಿಗಾಗಿ ಈತನು ಚಡಪಡಿಸುತ್ತಲೇ ಇರುತ್ತಾನೆ ಎಂಬುದೂ ಮನುವಿಗೆ ತಿಳಿದಿದೆ. ಆದ್ದರಿಂದ ನೇರವಾಗಿ ಗೃಹಸ್ಥನಿಗೆ ಸಂನ್ಯಾಸವನ್ನು ವಿಧಿಸದೇ ವಾನಪ್ರಸ್ಥಾಶ್ರಮವನ್ನು ಮಧ್ಯದಲ್ಲಿಟ್ಟು, ಅದರಲ್ಲಿ ಸಂನ್ಯಾಸಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಿಕೊಳ್ಳಲು ಏರ್ಪಡಿಸಿದ್ದಾರೆ. ಮನುಷ್ಯನ ಹೃದಯದಲ್ಲಿ ಜನ್ಮಾಂತರಗಳ ಸಂಸ್ಕಾರದಿಂದ ನೆಟ್ಟುಹೋಗಿರುವ ಆಸೆಗಳು ಮೂರು. ಪುತ್ರೈಷಣಾ, ವಿತ್ತೈಷಣಾ, ಲೋಕೈಷಣಾ - ಇವೇ ಆ ಮೂರು ಆಸೆಗಳು. ಇವು ಏಷಣಾತ್ರಯ. ಈಷಣಾತ್ರಯವೆಂಬ ರೂಪಾಂತರವೂ ಇದೆ. ಆಗ ಗುಣಸಂಧಿಯಿಂದ ಪುತ್ರೇಷಣಾ, ವಿತ್ತೇಷಣಾ, ಲೋಕೇಷಣಾ - ಎಂದು ಶಬ್ದರೂಪಗಳಾಗುತ್ತವೆ.

ಆಸೆಗಳನ್ನು ತೀರಿಸಿಕೊಳ್ಳುವ ಮೂರು ಪ್ರಯತ್ನಗಳು. ಮಕ್ಕಳು ಬೇಕು ಎನ್ನುವುದು ಪುತ್ರೈಷಣಾ. ಹಣ, ಭೋಗ ಸಾಮಗ್ರಿ ಬೇಕು ಎನ್ನುವುದು ವಿತ್ತೈಷಣಾ. ಕೃಷಿ, ವಾಣಿಜ್ಯ, ಅಧಿಕಾರ, ಕೀರ್ತಿ ಮುಂತಾದವುಗಳಲ್ಲಿ ತೊಡಗಿ, ಲೋಕ ವ್ಯವಹಾರಗಳಲ್ಲಿ ಮಗ್ನನಾಗಿ ಮೆರೆಯಬೇಕು - ಎಂಬ ಆಸೆ ಲೋಕೈಷಣಾ. ಪುತ್ರ, ವಿತ್ತ, ಲೋಕ - ಇವು ಮೂರು ಮಾನವನಿಗೆ ಅತ್ಯಂತ ಆಕರ್ಷಕವಾದ ವಸ್ತುಗಳು.

ಈ ಆಸೆಗಳು ಎಳೆಯುತ್ತಿರುವಾಗ ಯಾವಾತನೂ ಸಂನ್ಯಾಸಕ್ಕೆ ಎಂದಿಗೂ ಒಲಿಯುವುದಿಲ್ಲ. ಇವುಗಳ ಲೋಭವನ್ನು ತೊರೆದ ಹೊರತು ಮಾನವನಿಗೆ ಶ್ರೇಯಸ್ಸು ದೊರೆಯದು. ಆದ್ದರಿಂದ ಮನುವು ಜನರ ಹಿತಾಕಾಂಕ್ಷಿಯಾಗಿ ಬೋಧಿಸುತ್ತಾನೆ. ''ಅಯ್ಯಾ, ನೀವು ಈ ಮೂರು ಆಸೆಗಳನ್ನೂ ತೀರಿಸಿಕೊಳ್ಳಿರಿ. ಆದರೆ ಧರ್ಮಮಾರ್ಗದಿಂದಲೇ ತೀರಿಸಿಕೊಳ್ಳಬೇಕು. ಆದಷ್ಟು ನಿಗ್ರಹದಿಂದ ಸುಖಿಸಿರಿ. ಅತಿಬೇಡ, ಕುದುರೆಗಳ ಲಗಾಮು ಸಾರಥಿಯ ಕೈಯಲ್ಲಿರುವಂತೆ, ಇಂದ್ರಿಯಗಳನ್ನು ಹತೋಟಿಯಲ್ಲಿರಿಸುವ ಶಕ್ತಿ ನಿಮ್ಮಲ್ಲೇ ಇರಲಿ. ಹಾಗೆಯೇ ಮತ್ತೆ ಮತ್ತೆ ಪ್ರಯತ್ನಿಸಿ ಇಂದ್ರಿಯಗಳನ್ನು ಪೂರ್ಣವಾಗಿ ವಶಕ್ಕೆ ತಂದುಕೊಳ್ಳಿರಿ. ಅವನ್ನು ವಶಕ್ಕೆ ತಂದುಕೊಳ್ಳದಿದ್ದರೆ ಏಷಣಾತ್ರಯವೇ ತ್ರಿಶೂಲವಾಗಿ ನಿಮ್ಮನ್ನೇ ಚುಚ್ಚುತ್ತಾ ಹೋಗುವುದು. ಪುರುಷ ಪ್ರಯತ್ನದಿಂದ ಈ ತ್ರಯಗಳನ್ನು ಗೆಲ್ಲುವುದೇ ಪೌರುಷ. ಇನ್ನೊಂದು ರಾಜ್ಯವನ್ನು ಆಕ್ರಮಿಸಿ ಗೆಲ್ಲುವುದಾಗಲಿ, ಕೋಟಿ ಕೋಟಿ ಹಣವನ್ನು ಸಂಪಾದಿಸಿ ತುಂಬಿಕೊಳ್ಳುವುದಾಗಲಿ ಪೌರುಷವಲ್ಲ. ಅದನ್ನು ಅಲೆಕ್ಸಾಂಡರನೂ ಮಾಡಿರಬಹುದು. ಔರಂಗಜೇಬನೂ ಮಾಡಿರಬಹುದು. ಒಬ್ಬ ಮೆಹತಾನೂ ಮಾಡಬಹುದು. ಈ ತ್ರಯವನ್ನು ಜಯಿಸಿದ ಮೇಲೆ ಪರಿವ್ರಾಜಕನಾಗಿ ಭಿಕ್ಷೆ ಬೇಡುತ್ತಿರು! - ಎನ್ನುತ್ತದೆ ಬೃಹದಾರಣ್ಯಕೋಪನಿಷತ್ತು.

**''ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ**
**ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರಂತಿ ''** (೩-೪)

ಮನುಸ್ಮೃತಿಯು ಹೇಳುವುದೂ ಇದನ್ನೇ. **'ವೇದೋಽಖಿಲೋಧರ್ಮಮೂಲಂ'** ಎಂದು ಹೇಳಿರುವುದೂ ಈ ಕಾರಣದಿಂದಲೇ. ಮನುವಿನ ಸ್ವತಂತ್ರ ಕಲ್ಪನೆ ಯಾವುದೂ ಇಲ್ಲ.

ಈ ಪ್ರಕಾರವಾಗಿ ಬಾಲ್ಯದಲ್ಲಿ ಬ್ರಹ್ಮಚರ್ಯವನ್ನು ಪಾಲಿಸುತ್ತ ವಿದ್ಯಾರ್ಜನೆ ಮಾಡುವುದು, ಯೌವನದಲ್ಲಿ ಗೃಹಸ್ಥನಾಗಿ ಧರ್ಮಮಾರ್ಗದಿಂದ ಲೋಕವ್ಯವಹಾರದಲ್ಲಿ ತೊಡಗುವುದು, ವಯಸ್ಸಾದ ಮೇಲೆ ಮಕ್ಕಳಿಗೋ, ಉತ್ತರಾಧಿಕಾರಿಗಳಿಗೋ ಲೋಕವ್ಯವಹಾರಗಳನ್ನು ಒಪ್ಪಿಸಿ ಆತ್ಮಕಲ್ಯಾಣಕ್ಕಾಗಿ ಅಧ್ಯಾತ್ಮ ಮಾರ್ಗದಲ್ಲಿ ಆಸಕ್ತಿಯನ್ನು ಬೆಳೆಸಿಕೊಳ್ಳುವುದು - ಇವು ಮೂರು ಕ್ರಿಯಾಪೂರ್ವಕವಾಗಿ ಮೇಲೇರುವ ಮಾರ್ಗಗಳು. ಸಾಧ್ಯವಾದರೆ ಸಾಕಷ್ಟು ವೈರಾಗ್ಯವೂ ಶಮದಮಾದಿಗಳೂ ಸಿದ್ಧಿಸಿದರೆ ಸಂನ್ಯಾಸಿಯಾಗುವುದು - ಇದು ಮನುವಿನ ಮಾರ್ಗದರ್ಶನ. ಮನುಷ್ಯನಾಗಿ ಹುಟ್ಟಿದ ಮೇಲೆ ಮನುಷ್ಯ ಜನ್ಮದ ಸಾರ್ಥಕತೆ ಈ ಮಾರ್ಗದಿಂದ. ಆತ್ಮದರ್ಶನ ಮಾಡುವುದೇ ಮನುಷ್ಯನ ಕಡೆಯ ಗುರಿಯಾಗಿರಲಿ ಎನ್ನುವುದು ಮನುವಿನ ಉಪದೇಶ.

ಇದೇ ಭಾರತೀಯ ಸಂಸ್ಕೃತಿಯ ಜೀವಾಳ. ಮಹಾಕವಿ ಕಾಳಿದಾಸನು ತನ್ನ ರಘುವಂಶ ಕಾವ್ಯದಲ್ಲಿ ರಘುವಂಶ ರಾಜರ ಆದರ್ಶ ಜೀವನವನ್ನು ಚಿತ್ರಿಸುತ್ತ ಹೇಳುತ್ತಾನೆ -

**ಶೈಶವೇಽಭಸ್ತವಿದ್ಯಾನಾಂ ಯೌವನೇ ವಿಷಯೈಷಿಣಾಂ ।**
**ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಮ್॥**

ಈ ರಘುವಂಶದ ರಾಜರು ಬಾಲ್ಯದಲ್ಲಿ ವಿದ್ಯೆಯನ್ನು ಕಲಿತು ಯೌವನದಲ್ಲಿ ಮದುವೆಯಾಗಿ ವಿಷಯ ಸುಖಗಳನ್ನು ಅನುಭವಿಸತಕ್ಕವರು. ಅನಂತರ ಮುಪ್ಪು ಬಂದೊಡನೆ ಮುನಿಗಳಂತೆ ಆಹಾರಾದಿ ನಿಯಮಗಳನ್ನು ಪಾಲಿಸುತ್ತಾ ಶಮದಮಾದಿಗಳಲ್ಲಿ ತೊಡಗುತ್ತಾರೆ. ಕಡೆಗೆ ಅಧ್ಯಾತ್ಮದಲ್ಲಿ ನಿರತರಾಗಿ ಜ್ಞಾನ ಯೋಗದಿಂದ ದೇಹವನ್ನು ತ್ಯಜಿಸತಕ್ಕವರು - ಎಂದು ಈ ಶ್ಲೋಕದ ತಾತ್ಪರ್ಯವಾಗಿದೆ. ಅಂತೆಯೇ ರಘುರಾಜನು ತನಗೆ ವಯಸ್ಸಾದ ಮೇಲೆ ಮಗನಾದ ಅಜಕುಮಾರನಿಗೆ ತನ್ನ ರಾಜ್ಯವನ್ನಿತ್ತು ಪಟ್ಟಾಭಿಷೇಕ ಮಾಡಿ, ತಾನು ಲೋಕ ವ್ಯವಹಾರದಿಂದ ನಿವೃತ್ತನಾಗುತ್ತಾನೆ. ಶಮದಮಾದಿ ಸಂಪತ್ತುಗಳನ್ನು ಸಾಧಿಸಿ, ಅಧ್ಯಾತ್ಮ ಮಾರ್ಗದಲ್ಲಿ ಸಾಗಿ ಸಂನ್ಯಾಸಿಯಾಗುತ್ತಾನೆ. ಅನಂತರ ಅರಣ್ಯಾಭಿಮುಖನಾದ ರಘುವು ಅಜಕುಮಾರನ ಪ್ರಾರ್ಥನೆಯನ್ನು ಪೂರ್ತಿಯಾಗಿ ಅಲ್ಲಗಳೆಯಲಾರದೆ ನಗರದ ಹೊರಗೆ ಒಂದು ಆಶ್ರಮದಲ್ಲಿದ್ದು, ಯೋಗಮಾರ್ಗವನ್ನು ಕೈಗೊಳ್ಳುತ್ತಾನೆ. ಅರಮನೆಗೆ ಬರುವುದೇ ಇಲ್ಲ. ಕಡೆಗೆ ಆತ್ಮಜ್ಞಾನವನ್ನು ಪಡೆದು ಮುಕ್ತನಾದನೆಂದು ಕಾಳಿದಾಸನು ವರ್ಣಿಸಿದ್ದಾನೆ. ರಾಜಕೀಯ ಸಂನ್ಯಾಸವನ್ನು ತೆಗೆದುಕೊಳ್ಳುತ್ತೇನೆಂದು ಪದೇ ಪದೇ ಹೇಳುವ ಈಗಿನ ರಾಜಕಾರಣಿಗಳಿಗೆ ರಘುರಾಜನ ಚರಿತೆಯನ್ನು ಅನ್ವಯಿಸಿ ನೋಡಬಹುದು.

ಅದಿರಲಿ ; ನಮ್ಮ ಸಾಮಾನ್ಯ ಜನರ ಪರಿಸ್ಥಿತಿ, ನಡವಳಿಕೆಗಳಾದರೂ ಹೇಗಿವೆ? ಮುಪ್ಪು ಬಂದು ಅಡರಿದರೂ ಆಸೆ ಹಿಂಗುವುದಿಲ್ಲ. ದೇಹವನ್ನು ಮುಪ್ಪು ಆವರಿಸಿದಂತೆ, ಆಸ್ತಿಹಣಗಳ ಆಸೆಗೆ ಯೌವನ ಬರುತ್ತದೆ ! ಶ್ರೀ ಶಂಕರ ಭಗವತ್ಪಾದರು 'ಭಜಗೋವಿಂದ' ಸ್ತೋತ್ರದಲ್ಲಿ ಹೇಳಿದ - ''**ವೃದ್ಧೋ ಯಾತಿ ಗೃಹೀತ್ವಾದಂಡಂ ತದಪಿ ನ ಮುಂಚತ್ಯಾಶಾಪಿಂಡಂ ॥**'' ಎಂಬ ನುಡಿಯನ್ನು ರುಜುವಾತು ಪಡಿಸುತ್ತೇವೆ. ವಯಸ್ಸಾದ ಮೇಲಾದರೂ ಧನ ವ್ಯವಹಾರವನ್ನು ಕಡಿಮೆ ಮಾಡಿ ಆಚಾರ - ವಿಚಾರಗಳಿಗೆ ಮನಸ್ಸನ್ನು ಕೊಡಬೇಡವೆ? ಇಳಿ ವಯಸ್ಸಿನಲ್ಲಾದರೂ ರಾಮಾಯಣ, ಭಾರತ, ಭಾಗವತ, ಭಗವದ್ಗೀತೆ ಮುಂತಾದ ಸದ್ಗ್ರಂಥಗಳನ್ನೋದುತ್ತ ಅಧ್ಯಾತ್ಮ ವಿಚಾರದಲ್ಲಿ ಆಸಕ್ತಿಯನ್ನಿಡಬೇಡವೆ?

ಸಂನ್ಯಾಸದ ವಿಷಯವಾಗಿ ಇನ್ನೊಂದು ಮಾತು. ಈಗಿರುವ ಮಠಗಳಂತೆ

ಹಿಂದಿನ ಕಾಲದಲ್ಲಿ ಮಠಗಳಿದ್ದವೋ ಇಲ್ಲವೋ ನಮಗೆ ತಿಳಿಯದು. ಶ್ರೀ ಶಂಕರಾಚಾರ್ಯರಂತೂ ಯಾವ ಮಠದಲ್ಲಿಯೂ ಇರಲಿಲ್ಲ. ಅವರು ಪರಿವ್ರಾಜಕರಾಗಿ ಕಾಲ್ನಡಿಗೆಯಲ್ಲಿಯೇ ಸಂಚರಿಸಿ ವೈದಿಕ ಧರ್ಮ ಪ್ರಚಾರ ಮಾಡಿದರು. ಈ ಧರ್ಮ ಪ್ರಚಾರ ಕಾರ್ಯವು ಶಾಶ್ವತವಾಗಿ ನಡೆಯುತ್ತಿರಬೇಕೆಂದು ನಿರ್ಧರಿಸಿ ಈ ರಾಷ್ಟ್ರದ ನಾಲ್ಕೂ ದಿಕ್ಕುಗಳಲ್ಲಿ ನಾಲ್ಕು ಮಠಗಳನ್ನು ಸ್ಥಾಪಿಸಿ ತಮ್ಮ ಶಿಷ್ಯರನ್ನು ಅಲ್ಲಿರಿಸಿ, ಶಾಶ್ವತವಾಗಿ ಧರ್ಮಪ್ರಚಾರವೂ, ಧರ್ಮಪೋಷಣೆಯೂ ನಡೆಯುತ್ತಿರಲೆಂದು ಮಾರ್ಗದರ್ಶನ ಮಾಡಿದರು. ಆಚಾರ್ಯರ ಇತರ ಶಿಷ್ಯರೂ ಅವರ ಆದೇಶದಂತೆ ಈ ರಾಷ್ಟ್ರದ ನಾನಾ ಭಾಗಗಳಲ್ಲಿ ಮಠಗಳನ್ನು ಸ್ಥಾಪಿಸಿದರು. ಶಿಷ್ಯ ಪರಂಪರೆಯಿಂದ ಅವುಗಳ ಶಾಖೆಗಳು ಬೇರೆ ಬೇರೆಯಾಗುತ್ತ ಹೋಗಿವೆ. ಆದ್ದರಿಂದ ಈಗ ಅದ್ವೈತ ಪೀಠಗಳಿರುವ ಮಠಗಳೆಲ್ಲವೂ ಶ್ರೀ ಶಂಕರರ ಸಾಕ್ಷಾತ್ ಶಿಷ್ಯರಿಂದ ಮುಂದುವರಿಯುತ್ತಾ ಬಂದಿರುತ್ತವೆ.

ಈ ಮಠಗಳು ನಡೆಸುತ್ತಿದ್ದ ಉತ್ತಮ ಕಾರ್ಯಗಳನ್ನು ಕಂಡು, ಅನೇಕ ರಾಜರು ಧರ್ಮಪೋಷಣೆಗಾಗಿ ಮಠಗಳಿಗೆ ದತ್ತಿ ಜಮೀನು ಮುಂತಾದ ನೆರವನ್ನಿತ್ತು ಉಪಕಾರ ಮಾಡಿದ್ದಾರೆ.

ಆಶ್ರಮಗಳ ಪ್ರಸ್ತಾವ ಇಷ್ಟು ಸಾಕಾಗಬಹುದು. ಮುಂದೆ ನಾಲ್ಕು ವರ್ಣಗಳ ಪ್ರಸ್ತಾವ ಬರತಕ್ಕದ್ದಿದೆ. ಇವುಗಳ ನಡುವೆ ಕೊಂಡಿಯಾಗಿ ವೇದಗಳ ವಿಷಯವನ್ನೆತ್ತುವ ಉದ್ದೇಶ ಉಂಟು. ವೇದವು ಅಪೌರುಷೇಯವೆಂದೂ ಆದ್ದರಿಂದಲೇ ಅದು ಪ್ರಮಾಣ ಗ್ರಂಥವಾಗಿದೆಯೆಂದೂ ಪ್ರತಿಪಾದಿಸಬೇಕಾಗಿದೆ. ಶ್ರೀ ಗುರುಕೃಪೆಯಿಂದ ಯಥಾಶಕ್ತಿ, ಯಥಾಮತಿ ಸಾಧ್ಯವಾದೀತೆಂದು ಈ ಲೇಖಕನಿಗೆ ವಿಶ್ವಾಸವಿದೆ.

# ೬ - ವೇದವು ಅಪೌರುಷೇಯ

'ವೇದೋऽಖಿಲೋ ಧರ್ಮ ಮೂಲಂ' ಎಂದು ಮನು ಮಹರ್ಷಿಯು ನುಡಿದಿರುವನಷ್ಟೆ. ''ವೇದಾದ್ ಧರ್ಮೋಹಿ ನಿರ್ಬಭೌ'' ಇತ್ಯಾದಿ ವಚನಗಳೂ ಇದನ್ನೇ ಸಾರುತ್ತಿವೆ. ವೇದವು ಧರ್ಮದ ಜನ್ಮಭೂಮಿ ಎಂದರ್ಥ. ಈ ಕಾಲದಲ್ಲಿ ಯಾವುದನ್ನು ರಾಷ್ಟ್ರದ ಸಂವಿಧಾನ (Constitution) ಎಂದು ವ್ಯವಹರಿಸುತ್ತಾರೋ ಅದೇ ಜನ್ಮಭೂಮಿ ಎಂಬುದರ ಅರ್ಥ. ಸಂವಿಧಾನವನ್ನವಲಂಬಿಸಿ ಅದಕ್ಕೆ ವಿರೋಧ ವಾಗದಂತೆ, ಅದಕ್ಕೆ ಅನುಗುಣವಾಗಿ ಸರ್ಕಾರವು ಬೇರೆ ಬೇರೆ ವಿಷಯಗಳಲ್ಲಿ ಕಾನೂನುಗಳನ್ನು ರಚಿಸಿಕೊಳ್ಳುತ್ತದೆ. ಅಂತೆಯೇ ಮನುಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ, ಮೊದಲಾದ ಸ್ಮೃತಿಗ್ರಂಥಗಳು ದೇಶ ಕಾಲಾನುಗುಣವಾಗಿ ಧರ್ಮಾನುರೋಧಿಗಳಾದ ನಿಯಮಗಳನ್ನು ರಚಿಸಿಕೊಟ್ಟಿರುತ್ತವೆ. ಕಾನೂನುಗಳನ್ನು ರಚಿಸಲು ಸಂವಿಧಾನವನ್ನು ಬಲ್ಲ, ನ್ಯಾಯಗಳ ಸೂಕ್ಷ್ಮತೆಯನ್ನರಿತ ತಜ್ಞರಿಗೆ ಮಾತ್ರ ಹೇಗೆ ಅಧಿಕಾರವಿರುತ್ತದೆಯೋ ಹಾಗೆ ಸ್ಮೃತಿಗಳನ್ನು ರಚಿಸುವುದಕ್ಕೆ ಸಮಗ್ರ ವೇದವನ್ನರಿತು ಧರ್ಮದ ಸೂಕ್ಷ್ಮತೆಯನ್ನು ಬಲ್ಲ ಋಷಿಗಳಿಗೆ ಮಾತ್ರ ಅಧಿಕಾರವಿರುತ್ತದೆ. ರಾಷ್ಟ್ರಕ್ಕೆ ಸೇರಿದ ವಿಭಿನ್ನ ರಾಜ್ಯಗಳ ಕಾನೂನುಗಳಲ್ಲಿ ಆಂಶಿಕವಾದ ಭೇದವಿರುವಂತೆ ವಿಭಿನ್ನ ಸ್ಮೃತಿಗಳಲ್ಲಿ ಆಂಶಿಕವಾದ ಪರಸ್ಪರ ಭೇದವಿರುವುದು ಸಾಧ್ಯ. ಅಂತಹ ಸಂದರ್ಭದಲ್ಲಿ ಸಂಪ್ರದಾಯಾನುಸಾರಿಯಾಗಿ ವ್ಯವಸ್ಥೆಯೆಂದು ಧರ್ಮಶಾಸ್ತ್ರಗಳೇ ಹೇಳಿವೆ. ಏವಂಚ

**''ಶ್ರುತಿಸ್ಮೃತೀ ಮಮೈವಾಜ್ಞೇ''** ಶ್ರುತಿಸ್ಮೃತಿಗಳೆರಡೂ ನನ್ನ (ಈಶ್ವರನ) ಆಜ್ಞೆಗಳು - ಎಂಬ ಹೇಳಿಕೆಯು ಉಪಪನ್ನವಾಗುತ್ತದೆ. ಸಮಸ್ತ ಇತಿಹಾಸ ಪುರಾಣಗಳೂ ಆಗಮಗಳೂ ಸಾಂಖ್ಯಾದಿದರ್ಶನಗಳೂ ವೇದ ಪ್ರಾಮಾಣ್ಯವನ್ನು ಒಪ್ಪಿಕೊಂಡಿವೆ. ಈ ರಾಷ್ಟ್ರದಲ್ಲಿ ಉದಿಸಿದ ಬೌದ್ಧ, ಜೈನ ಮತಗಳೆರಡೂ ವೇದದ ಪ್ರಾಮಾಣ್ಯವನ್ನು ಒಪ್ಪದಿದ್ದರೂ ಆ ಮತಗಳ, ಆ ಉಪದೇಶಗಳ ಮೂಲವು ವೇದವೇ ಆಗಿದೆ ಎಂಬ ವೈಚಿತ್ರ್ಯವು ಕಣ್ಣಿದ್ದವರಿಗೆ ಸ್ಪಷ್ಟವಾಗಿ ಕಾಣುತ್ತದೆ. ಅದನ್ನು ವಿವರಿಸುವುದು ಈ ಪ್ರಬಂಧದ ಉದ್ದೇಶವಲ್ಲ. ಈ ಭಾರತ ದೇಶದಲ್ಲಿ ಆಗಿ ಹೋದ ವ್ಯಾಸವಸಿಷ್ಠಾದಿ ಮಹರ್ಷಿಗಳೂ, ದಾರ್ಶನಿಕರೂ, ತಾರ್ಕಿಕರೂ, ಉದಯನಾಚಾರ್ಯ, ಕುಮಾರಿಲ ಭಟ್ಟರಂತಹ ಮಹಾಮೇಧಾವಿಗಳೂ ಪರಮೋನ್ನತಧೀಶಕ್ತಿಯುಳ್ಳ ಶ್ರೀ ಶಂಕರಾಚಾರ್ಯರೇ ಮೊದಲಾದ ಮಹನೀಯರೂ ವೇದದ ಪ್ರಾಮಾಣ್ಯವನ್ನೂ, ಪವಿತ್ರತೆಯನ್ನೂ ಏಕಕಂಠದಿಂದ ಅಂಗೀಕರಿಸಿರುವುದಕ್ಕೆ ನಿಮಿತ್ತವೇನು? - ಎಂಬ ಪ್ರಶ್ನೆಗೆ, ವೇದವು ಸರ್ವಜ್ಞನೂ ಸರ್ವಶಕ್ತನೂ ಆದವನ ಅಮೃತವಾಣಿಯೆಂಬ ವಿಶ್ವಾಸವೇ ನಿಮಿತ್ತವೆಂಬ ಉತ್ತರದ ಹೊರತು ಇನ್ನೊಂದು ಸಮಾಧಾನವು ದೊರೆಯುವುದಿಲ್ಲ. **''ತಸ್ಯ ಮಹತೋ ಭೂತಸ್ಯ ನಿಶ್ವಸಿತಮೇತದ್ ಯದೃಗ್ವೇದೋ ಯಜುರ್ವೇದಃ ಸಾಮವೇದಃ''** ಎಂದು ವೇದವೇ ತನ್ನ ಆತ್ಮಕಥೆಯನ್ನು ಹೇಳಿಕೊಂಡಿರುತ್ತದೆ. ವೇದವು ನಿತ್ಯವೂ ಸತ್ಯವೂ ಆದ್ದರಿಂದಲೇ ಅದನ್ನು ಅಪೌರುಷೇಯ ಎನ್ನುತ್ತಾರೆ. ಅಪೌರುಷೇಯವೆಂದರೆ ಅಲ್ಪಜ್ಞನಾದ ಪುರುಷನಿಂದ ನಿರ್ಮಿತವಾದದ್ದಲ್ಲ ಎಂದರ್ಥ. ಹಾಗಾದರೆ ಬಹುಜ್ಞನಾದ ವಿದ್ವಾಂಸನು ರಚಿಸಿರಬಹುದು - ಎಂದು ಶಂಕಿಸಿದರೆ, ಯಾವ ಮನುಷ್ಯನಿಗೂ ನಿಲುಕದ ಅಚಿಂತ್ಯ ರಚನಾ ವೈಚಿತ್ರ್ಯವಿರುವ ವಿಶ್ವದ ದೃಷ್ಟಿಯಲ್ಲಿ ಬಹುಜ್ಞನೆನಿಸಿದ ವಿದ್ವಾಂಸನೂ ಅಲ್ಪಜ್ಞನೋ ಅಜ್ಞನೋ ಆಗಿ ಬಿಡುತ್ತಾನೆ. ವಿಶ್ವವನ್ನು ನಿರ್ಮಿಸಿದವನಿಗೆ ಮಾತ್ರ ವಿಶ್ವವೈಚಿತ್ರ್ಯದ ರಹಸ್ಯವು ತಿಳಿದಿರುತ್ತದೆ. ಅಂತಹವನು ಯಾರು? **'ವಿಶ್ವಾಧಿಕೋರುದ್ರೋ ಮಹರ್ಷಿಃ'** ಎನಿಸಿದವನು ಯಾರೋ ಅವನೇ. ಆತನೇ ಈಶ್ವರನೆಂಬ ವಿಶ್ವಾಧಿಕನಾದ ಮಹಾಪುರುಷ. **'ಅತ್ಯತಿಷ್ಠದ್ದಶಾಂಗುಲಮ್'** ಆತನೇ **'ಇದಂ ಸರ್ವಮಸೃಜತ'**.

## ಒಂದು ಆಕ್ಷೇಪ

ಈ ವಾಗ್ವೈಭವದ ನುಡಿಗಳಿರಲಿ. ಸರಳವಾದ ಮಾತುಗಳಿಂದ ವಿಚಾರ ಮಾಡೋಣ. ವೇದವು ಶಬ್ದಮಯವಾದ ಒಂದು ಭಾಷೆಯಲ್ಲಿದೆ. ಅದು ಜನರಿಗೆ ಅರ್ಥವಾಗುವುದರಿಂದ ಮನುಷ್ಯರ ಭಾಷೆ. ಮನುಷ್ಯರು ಕಾಡುಗಳಲ್ಲಿ ಅನಾಗರಿಕ

ಸ್ಥಿತಿಯಲ್ಲಿ ಬಹಳ ಕಾಲವಿದ್ದು ನಾಗರಿಕ ಸ್ಥಿತಿಗೆ ಬರುತ್ತಿರುವಾಗ ವ್ಯವಹಾರಕ್ಕಾಗಿ ಭಾಷೆಯನ್ನು ನಿರ್ಮಿಸಿಕೊಂಡಿದ್ದಾರೆ. ವಿಸ್ತಾರವಾದ ಈ ಭೂಮಿಯಲ್ಲಿ ಜನರೆಲ್ಲರೂ ಒಂದೇ ಸ್ಥಳದಲ್ಲಿ ನೆಲೆಸಿರಲಿಲ್ಲ. ದೊಡ್ಡ ದೊಡ್ಡ ಸಮುದ್ರಗಳಿಂದ ಬಹುದೂರದವರೆಗೆ ಅಗಲಿ ಹೋದ ಭೂಖಂಡಗಳಲ್ಲಿದ್ದ ಮನುಷ್ಯರಿಗೆ ಅನ್ಯೋನ್ಯ ಸಂಪರ್ಕವೇ ಇರಲಿಲ್ಲ. ಆದ್ದರಿಂದ ಬೇರೆ ಬೇರೆ ದೇಶಗಳಲ್ಲಿ ನೆಲೆಸಿದವರು ತಮಗೆ ಬೇಕಾದಂತೆ ಭಾಷೆಯನ್ನು ನಿರ್ಮಿಸಿಕೊಂಡದ್ದರಿಂದ ಪ್ರಪಂಚದಲ್ಲಿ ಅಸಂಖ್ಯ ಭಾಷೆಗಳಾಗಿ ಬಿಟ್ಟಿವೆ. ಹೀಗೆ ಭಾಷೆಯನ್ನು ಮನುಷ್ಯನು ನಿರ್ಮಿಸಿಕೊಂಡಿರುವಾಗ ಭಾಷಾ ರೂಪವಾದ ಗ್ರಂಥವು ಮನುಷ್ಯ ನಿರ್ಮಿತವಲ್ಲವೆನ್ನುವುದು ಅಸಂಗತವಾಗುತ್ತದೆ. ರಾಮಾಯಣ, ಮಹಾಭಾರತ - ಮುಂತಾದ ಗ್ರಂಥಗಳನ್ನು ವಾಲ್ಮೀಕಿಯೇ ಮೊದಲಾದವರು ಬರೆದಿದ್ದಾರೆಂಬುದು ಸರ್ವವಿದಿತ. ಹಾಗಾದರೆ ವೇದವನ್ನು ಬರೆದವರ ಹೆಸರೇಕೆ ನಮಗೆ ತಿಳಿದಿಲ್ಲ? ವ್ಯಾಸ, ವಾಲ್ಮೀಕಿ ಮೊದಲಾದವರಂತೆ ವೇದವನ್ನು ಬರೆದವರ ಹೆಸರೂ ಗೊತ್ತಿರಬೇಕಾಗಿರುತ್ತದಲ್ಲವೆ? ಎಂದು ಹೇಳಬಹುದು. ಅದೇನೂ ಆಕ್ಷೇಪದ ವಿಷಯವಲ್ಲ. ಈಗಲೂ ಎಷ್ಟೋ ಶಾಸ್ತ್ರಗ್ರಂಥಗಳ, ಕಾವ್ಯಗಳ, ಸ್ತೋತ್ರಗಳ ಕರ್ತೃಗಳು ಯಾರೆಂಬುದೇ ನಮಗೆ ತಿಳಿದಿಲ್ಲ. ಹಿಂದಿನ ಕಾಲದಲ್ಲಿ ಗ್ರಂಥಕರ್ತರು ತಮ್ಮ ಹೆಸರುಗಳನ್ನು ಹೇಳಿಕೊಳ್ಳುವುದು ಹೆಚ್ಚಾಗಿ ರೂಢಿಯಲ್ಲಿರಲಿಲ್ಲ. ಅತಿ ಪ್ರಾಚೀನ ಕಾಲದಲ್ಲಿ ವೇದಗಳ ರಚನೆಯಾಗಿರುವುದರಿಂದಲೂ ಆಗ ಬರವಣಿಗೆಯು ರೂಢಿಯಲ್ಲಿ ಇಲ್ಲದ್ದರಿಂದಲೂ ವೇದಕರ್ತೃಗಳ ಹೆಸರು ನಮಗೆ ತಿಳಿಯದೇ ಹೋಗಿದೆ. ಇಷ್ಟು ಮಾತ್ರದಿಂದ ವೇದವು ಅಪೌರುಷೇಯವೆಂದೂ, ಈಶ್ವರನಿಂದ ಉದ್ಭೂತ ವಾಯಿತೆಂದೂ ಹೇಳುವುದು ಮೂಢ ವಿಶ್ವಾಸವಾಗುತ್ತದೆ ಎಂದು ಆಧುನಿಕ ವಿದ್ವಾಂಸರು ಹೇಳುತ್ತಾರೆ.

ಕುಮಾರಿಲಭಟ್ಟರೇ ಮೊದಲಾದ ಮೀಮಾಂಸಕರು ವೇದವು ಅನಾದಿ ನಿತ್ಯವೆಂದು ವಾದಿಸುತ್ತಾರೆ. ಈಶ್ವರ ನಿರ್ಮಿತವೆಂಬುದನ್ನು ಅವರು ಒಪ್ಪುವುದಿಲ್ಲ. ಜಯಂತ ಭಟ್ಟರೇ ಮೊದಲಾದ ತಾರ್ಕಿಕರು ವೇದವು ಈಶ್ವರ ಪ್ರೋಕ್ತವೆಂದು ಸಾಧಿಸಿದ್ದಾರೆ. ಒಟ್ಟಿನಲ್ಲಿ ಅದು ಅಪೌರುಷೇಯವೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯವೇನೂ ಇಲ್ಲ. ಆಧುನಿಕರಾದರೋ - ವೇದವನ್ನು ಋಷಿಗಳು ಬೇರೆ ಬೇರೆ ಕಾಲದಲ್ಲಿ ಬರೆದು ಪ್ರಚಾರಕ್ಕೆ ತಂದಿದ್ದಾರೆ. ಈಶ್ವರ ಪ್ರೋಕ್ತವೆನ್ನುವುದೂ ಮತೀಯ ಶ್ರದ್ಧೆಯಿಂದ. ಖುರಾನ್ ಎಂಬುದು ಅಲ್ಲಾಹುವಿನ ಸಂದೇಶವೆಂದೂ ಮಹಮ್ಮದ್ ಪೈಗಂಬರನ ಮೂಲಕ ಪ್ರಕಟವಾಯಿತೆಂದೂ ನಂಬಿದ್ದಾರೆ. ಕ್ರೈಸ್ತರು ಕ್ರಿಸ್ತನು ಹೇಳಿದ್ದಾದರೂ ಬೈಬಲ್ ದೇವವಾಣಿಯೇ ಎಂದೂ ವಿಶ್ವಾಸವನ್ನೇ ತಳೆದಿದ್ದಾರೆ.

ಪ್ರಾಯೇಣ ಎಲ್ಲ ಮತದವರಿಗೂ ತಮ್ಮ ಮೂಲ ಗ್ರಂಥಗಳಲ್ಲಿ ಈ ಬಗೆಯ ನಂಬಿಕೆಯೇ ಇದೆ. ಇದು ನಂಬಿಕೆಯೇ ಹೊರತು ವಸ್ತುಸ್ಥಿತಿಯಲ್ಲ ಎನ್ನುತ್ತಾರೆ. ನಮ್ಮ ಪ್ರಾಚೀನರು ವೇದಕ್ಕೆ ಅಪೌರುಷೇಯತ್ವವನ್ನು ಸಾಧಿಸುವುದಕ್ಕಾಗಿ ಹೇಳಿದ ಯಾವ ಯುಕ್ತಿಗಳೂ ಈ ಆಧುನಿಕ ವಿಮರ್ಶಕರ ಮೇಲೆ ಪರಿಣಾಮವನ್ನು ಬೀರಲಿಲ್ಲ.

ವೇದದ ವಿಷಯವಿರಲಿ. ವೈಯಾಕರಣರು ಶಬ್ದಗಳೆಲ್ಲವೂ ನಿತ್ಯವೆನ್ನುತ್ತಾರೆ. ಇದರಲ್ಲಿ ಮತ ಸಂಬಂಧಿಯಾದ ಶ್ರದ್ಧೆ ಯಾವುದೂ ಇಲ್ಲ. ಇದು ಶುದ್ಧ ದಾರ್ಶನಿಕ ವಿಚಾರ. ಶಬ್ದವು ನಿತ್ಯವಾದ್ದರಿಂದ ಶಬ್ದಕ್ಕೆ ಲೋಪ ಆಗಮ ಆದೇಶಗಳು ಬಂದು ರೂಪಾಂತರಗೊಳ್ಳುತ್ತವೆಯೆಂಬುದನ್ನು ಅವರು ಅಂಗೀಕರಿಸುವುದಿಲ್ಲ. ಮಹಾ ಭಾಷ್ಯಕಾರನಾದ ಪತಂಜಲಿಯು ''ಶಬ್ದಗಳು ಕೂಟಸ್ಥನಿತ್ಯಗಳೆಂದೂ ಲೋಪ ಆಗಮ ಆದೇಶಗಳು ಬರುವುದಾದರೆ ಶಬ್ದವು ರೂಪಾಂತರವನ್ನು ಹೊಂದಿ ವಿಕೃತವಾಗುತ್ತದೆಯೆಂದೂ ಹೇಳಬೇಕಾಗುತ್ತದೆ. ಕೂಟಸ್ಥ ನಿತ್ಯಶಬ್ದದಲ್ಲಿ ಯಾವ ವಿಕಾರವೂ ಆಗಕೂಡದು '' ಎಂದು ಹೇಳಿದ್ದಾನೆ. ಪಾಣಿನಿಯು ಇಷ್ಟರೂಪಗಳನ್ನು ತೋರಿಸುವುದಕ್ಕಾಗಿ ಲೋಪಾದಿಗಳನ್ನು ವಿಧಿಸಿದ್ದಾನೆ. ಅಲ್ಲಿ ಲೋಪಾದಿಗಳು ಬಂದವೆಂದು ನಮ್ಮ ಬುದ್ಧಿಯನ್ನು ಬದಲಿಸಿಕೊಳ್ಳುತ್ತ ಹೋಗಿ ಶಬ್ದದ ಸಾಧು ರೂಪವನ್ನು ತಿಳಿದುಕೊಳ್ಳಬೇಕು. ಶಬ್ದದಲ್ಲಿ ಯಾವ ಪರಿಣಾಮವೂ ಆಗುವುದಿಲ್ಲ. ನಮ್ಮ ಬುದ್ಧಿಯಲ್ಲಿ ಪರಿಣಾಮವಾಗುತ್ತದೆ. ರಾಜನ್ ಶಬ್ದದ ನಕಾರಕ್ಕೆ ಲೋಪ ಬಂದು ರಾಜಾ ಎಂಬ ಶಬ್ದವಾಗುವುದಿಲ್ಲ. 'ರಾಜಾ' ಶಬ್ದದಲ್ಲಿ ನಕಾರವಿಲ್ಲ. ಆದ್ದರಿಂದ ಅದನ್ನು ಉಚ್ಚರಿಸಬಾರದು ಎಂದು ಹೇಳಿ ನಮ್ಮ ಬುದ್ಧಿಯನ್ನು ಪರಿವರ್ತಿಸುವುದಕ್ಕಾಗಿ ಲೋಪವನ್ನು ಶಾಸ್ತ್ರದಲ್ಲಿ ಹೇಳಿದ್ದಾರೆ ಎಂದು ಅಭಿಪ್ರಾಯ. ಅಸ್ ಧಾತುವಿಗೆ ಭೂ ಎಂಬ ಆದೇಶ ಬರುತ್ತದೆ. ಎಂದರೆ ಅಸ್ ಧಾತುವಿನ ಸ್ಥಾನದಲ್ಲಿ ಭೂ ಎಂದು ನಮ್ಮ ಬುದ್ಧಿಯನ್ನು ಪರಿವರ್ತಿಸಿಕೊಳ್ಳಬೇಕು ಎಂದರ್ಥ. ಇದನ್ನೇ ಬುದ್ಧಿವಿಪರಿಣಾಮಾದ್ವಾ ಎಂಬ ವಾರ್ತಿಕವು ತಿಳಿಸಿದೆ. ಏವಂಚ ವೈಯಾಕರಣರು ಶಬ್ದವು ನಿತ್ಯವೆಂದು ವಿಭಿನ್ನ ಗ್ರಂಥಗಳಲ್ಲಿ ಸಾಧಿಸಿರುವುದು ಮತೀಯವಾದ ಶ್ರದ್ಧೆಯಿಂದಲ್ಲ, ವಸ್ತುಸ್ಥಿತಿಯನ್ನು ದಾರ್ಶನಿಕವಾಗಿ ಸ್ಥಾಪಿಸುವುದಕ್ಕೋಸ್ಕರ ಎಂದು ಸಿದ್ಧವಾಗುತ್ತದೆ.

ಆದರೆ ಯಾವ ಶಬ್ದಗಳು ನಿತ್ಯವೆಂದು ವೈಯಾಕರಣರು ಹೇಳುತ್ತಾರೆ? ಸಂಸ್ಕೃತ ಭಾಷೆಯೇ ವಿಕೃತವಾಗಿ ಪ್ರಾಕೃತ ಭಾಷೆಗಳು ಹುಟ್ಟಿದವು. ಹಿಂದಿ, ಗುಜರಾತಿ, ಮರಾಠಿ ಮುಂತಾದ ಭಾಷೆಗಳೇ ಸಂಸ್ಕೃತಜನ್ಯವಾದವು. ಸಂಸ್ಕೃತ ಶಬ್ದಗಳು ತದ್ಭವಗಳಾಗಿ ವಿಕೃತವಾದವು. ಸಕಲ ಭಾಷೆಗಳಲ್ಲಿ ಹಳ್ಳಿಗರಾಡುವ ವಿಕೃತ ಭಾಷೆಗಳಿದ್ದೇ ಇರುತ್ತವೆ.

''ಇಂಡೋ ಯುರೋಪಿಯನ್ ಎಂಬ ಭಾಷೆ ಈ ದೇಶದಲ್ಲಿ ಸಂಸ್ಕೃತ ಭಾಷೆಯೆಂಬ ಹೆಸರನ್ನು ಪಡೆಯಿತು. ಶಬ್ದವು ನಿತ್ಯವೆನ್ನುವುದು ಅಸಂಗತವೇ ಸರಿ'' ಎಂದು ಆಧುನಿಕರ ಅಭಿಪ್ರಾಯ.

ಆದುದರಿಂದ ಪ್ರಾಚೀನರು ಹೇಳುವ ಯುಕ್ತಿಗಳಾಗಲಿ, ಆಪ್ತವಚನಗಳಾಗಲಿ ಇಂದಿನ ವಿಚಾರಶೀಲರ ಮೇಲೆ ಪ್ರಭಾವವನ್ನು ಬೀರಲು ಅಸಮರ್ಥವಾದಂತೆ ಅನುಭವಕ್ಕೆ ಬಂದಿರುತ್ತದೆ. ''ಈ ಜನರು ಏನನ್ನಾದರೂ ಹೇಳಿಕೊಳ್ಳಲಿ, ವೇದದ ಪ್ರಾಮಾಣ್ಯವನ್ನು ನಂಬಲಿ, ಬಿಡಲಿ. ನಮ್ಮ ನಂಬಿಕೆ ನಮಗೆ'' ಎಂದು ಸುಮ್ಮನಿರುವುದೂ ಸರಿಯಲ್ಲ. ಅದು ನಮ್ಮ ಅಸಹಾಯಕತೆಯನ್ನೂ, ಪರಾಭವವನ್ನೂ ಸೂಚಿಸುವುದಲ್ಲದೆ, ಮುಂದಿನ ಸಂತತಿಯವರ ಮೇಲೆ ಕೆಟ್ಟ ಪರಿಣಾಮವನ್ನೇ ಉಂಟುಮಾಡುವುದು. ವೇದದಲ್ಲಿ ನಂಬಿಕೆಯೇ ಹೋದಾಗ ವೈದಿಕ ಧರ್ಮದ ಗತಿ ಏನಾದೀತೆಂದೂ, ವಿಶೇಷವಾಗಿ - ಬ್ರಾಹ್ಮಣ್ಯವೂ ಉಳಿದೀತೆ? ಎಂಬುದನ್ನೂ ಚಿಂತಿಸಬೇಕು.

ಆಧುನಿಕ ಚಿಂತಕರಿಗೆ ಸವಾಲನ್ನೊಡ್ಡುವ ವಿಚಾರಧಾರೆಗಳೂ ಇವೆ. ಆ ವಿಚಾರ ಧಾರೆಗಳಿಂದ ಹುಟ್ಟುವ ಸವಾಲಿಗೆ ಆಧುನಿಕರಿಂದ ಸರಿಯಾದ ಉತ್ತರವು ದೊರೆಯಲಾರದೆಂದೇ ನನ್ನ ನಂಬಿಕೆ. ಬಹಳ ವರ್ಷಗಳ ಹಿಂದಿನಿಂದಲೇ ಆ ವಿಚಾರವು ನನ್ನ ಚಿಂತನ ಮಂಥನಕ್ಕೆ ಒಳಗಾಗಿತ್ತು. ಕೆಲವು ವರ್ಷಗಳ ಹಿಂದೆ ಮಂಥನದ ಒಂದಂಶವನ್ನು ''**ಸಂಸ್ಕೃತಂ ನಾಮ ದೈವೀವಾಕ್**'' ಎಂಬ ಸಂಸ್ಕೃತ ಪ್ರಬಂಧದಲ್ಲಿ ಪ್ರಕಟಿಸಿದ್ದೇನೆ. ಅದೆಲ್ಲವನ್ನೂ ಕ್ರೋಡೀಕರಿಸಿ ವೇದದ ಅಪೌರುಷೇಯತೆಯನ್ನೂ, ಪ್ರಾಮಾಣ್ಯವನ್ನೂ ಇಂದಿನ ಬುದ್ಧಿಜೀವಿಗಳೆದುರಿಗೆ ಸ್ಥಾಪಿಸಬೇಕು ಎಂಬುದು ಈ ಲೇಖನ ಮಾಲೆಯ ಉದ್ದೇಶವಾಗಿದೆ. ಶ್ರೀ ಸದ್ಗುರುಗಳ ಅನುಗ್ರಹದಿಂದ ಈ ಮಾಲೆಯು ಪೂರ್ಣವಾದೀತೆಂದು ನಂಬಿ, ಭಗವಂತನನ್ನು ಧ್ಯಾನಿಸಿ ಆರಂಭಿಸುತ್ತೇನೆ.

ಭಾಷೆಯು ಬರಿಯ ಶಬ್ದರಾಶಿಯಲ್ಲ. ನಮ್ಮ ಅಭಿಪ್ರಾಯವನ್ನು ಇನ್ನೊಬ್ಬರಿಗೆ ತಿಳಿಸಲು ಉಪಯುಕ್ತವಾದ ಒಂದು ಮಹತ್ತರ ಸಾಧನವಾಗಿದೆ ಭಾಷೆ. ಅದರಲ್ಲಿ ನಾಮಪದ, ಕ್ರಿಯಾಪದ, ಪ್ರಕೃತಿ, ಪ್ರತ್ಯಯ, ವಿಭಕ್ತಿ, ವಚನ - ಮುಂತಾದ ವಿಭಾಗಗಳು ಇದ್ದೇ ಇರಬೇಕು. ಮಾತಾಡತಕ್ಕವರಿಗೆ ಈ ವಿಭಾಗವೇನೂ ಗೊತ್ತಿರದಿದ್ದರೂ ಪ್ರಕೃತಿ ಪ್ರತ್ಯಯ ಮುಂತಾದ ಹೆಸರನ್ನೇ ಅವರು ಕೇಳಿರದಿದ್ದರೂ ತಮ್ಮ ಅಭಿಪ್ರಾಯದ ಅಭಿವ್ಯಕ್ತಿಗೆ ಯಾವ ಶಬ್ದವನ್ನು ಯಾವ ರೀತಿಯಲ್ಲಿ ಹೇಳಬೇಕೆಂಬುದು ತಿಳಿದೇ ಇದ್ದು, ಸಹಜವಾಗಿ ಆಯಾ ವಿಭಕ್ತಿ ಪ್ರತ್ಯಯಗಳನ್ನು ಅವುಗಳ ಸ್ವರೂಪದ ಅರಿವಿಲ್ಲದೆಯೇ ಪ್ರಯೋಗಿಸುತ್ತಾರೆ. ಭೂತ ಕಾಲ, ವರ್ತಮಾನ ಕಾಲ, ಭವಿಷ್ಯತ್ಕಾಲಗಳಿಗೆ

ಅನುಗುಣವಾಗಿ ಕ್ರಿಯಾಪದಗಳನ್ನು ಬಳಸಬಲ್ಲರು. ಇಂತಹ ಭಾಷೆಗಳು ಜಗತ್ತಿನಲ್ಲಿ ಅಸಂಖ್ಯಾತವಾಗಿವೆ. ಈ ಪ್ರಕಾರವಾಗಿ ಎಲ್ಲ ಭಾಷೆಗಳ ಶಬ್ದಗಳನ್ನು ಗುಣಿಸಿ ಸೇರಿಸಿದರೆ ಅವುಗಳ ಸಂಖ್ಯೆ ಊಹಾತೀತವಾಗಿ ಬೆಳೆದು ಹೋಗುತ್ತದೆ. ಈ ಭಾಷೆಗಳಲ್ಲಿರುವ ಬೇರೆ ಬೇರೆ ಶಬ್ದರೂಪಗಳಿಗೆ ಅರ್ಥವಿಶೇಷವನ್ನು ಕೊಡುವ ಶಕ್ತಿ ಇರುತ್ತದೆ. ಮರ, ಮರಗಳು, ಮರವನ್ನು, ಮರಗಳಲ್ಲಿ - ಎನ್ನುವಾಗ ಆ ಶಬ್ದರೂಪಗಳಿಗಿರುವ ಶಬ್ದಶಕ್ತಿಯು ಮಾತಾಡುವವರಿಗೆ ಗೊತ್ತಿರುತ್ತದೆ. ಮರಗಳು ಎನ್ನುವುದಕ್ಕೆ ಬದಲಾಗಿ ಮರವನ್ನು ಎಂದೋ, ಮರವನ್ನು ಎನ್ನುವುದಕ್ಕೆ ಬದಲಾಗಿ ಮರಗಳಲ್ಲಿ ಎಂದೋ ಯಾವ ಹಳ್ಳಿಗನೂ ಹೇಳುವುದಿಲ್ಲ. ಆದರೆ ಆ ಪದಕ್ಕೆ ಅಂತಹ ಶಕ್ತಿ ಹೇಗೆ ಬರುತ್ತದೆಯೆಂದೂ ಆ ಶಕ್ತಿಯ ಸ್ವರೂಪವು ಏನೆಂಬುದನ್ನು ಅರಿಯದಿದ್ದರೂ ಜನರು ಸರಿಯಾಗಿಯೇ ಬಳಸಿಬಿಡುತ್ತಾರೆ. ಅದೆಲ್ಲವನ್ನೂ ವ್ಯಾಕರಣ ಶಾಸ್ತ್ರವು ತಿಳಿಸಿಕೊಡುತ್ತದೆ. ಆ ಶಾಸ್ತ್ರವನ್ನೇನೂ ಮಾತಾಡತಕ್ಕವರು ಓದಿರುವುದಿಲ್ಲ. ಪರಿಸ್ಥಿತಿ ಹೀಗಿರುವಾಗ ಈ ಭಾಷೆಗಳು ಹೇಗೆ ಹುಟ್ಟಿದವು? ಈ ಶಬ್ದಕ್ಕೆ ಈ ಅರ್ಥವೆಂದು ಯಾರು ಗೊತ್ತು ಮಾಡಿದರು? ಎಂಬುದನ್ನು ನಿರ್ಣಯಿಸಿ ಹೇಳುವುದು ಮನುಷ್ಯನಿಂದ ಅಸಾಧ್ಯವೆಂಬುದು ವಿಚಾರ ಶೀಲರ ಮನಸ್ಸಿಗೆ ಹೊಳೆಯುತ್ತದೆ. ಇದನ್ನು ನಿರ್ಣಯಿಸುವುದಕ್ಕಾಗಿ ಹೊರಟ ಭಾಷಾ ಶಾಸ್ತ್ರವು ಒಂದು ರೀತಿಯಲ್ಲಿ ಸಮಾಧಾನವನ್ನು ಹೇಳಲು ಪ್ರಯತ್ನಿಸಿದೆ. ಈ ಭಾಷಾ ಶಾಸ್ತ್ರಿಗಳ ಹೇಳಿಕೆಯನ್ನು ಹೀಗೆ ಸಂಗ್ರಹಿಸಬಹುದು - ಜಗತ್ತಿನಲ್ಲಿರುವ ಎಲ್ಲ ಭಾಷೆಗಳನ್ನೂ ನಾಲ್ಕು ಅಥವಾ ಐದು ವರ್ಗಗಳನ್ನಾಗಿ ವಿಭಾಗಿಸಬಹುದು. ಒಂದೊಂದು ವರ್ಗದಲ್ಲಿ ಶಬ್ದದಲ್ಲಿರುವ ಒಂದೊಂದು ವರ್ಣವೂ ಹೇಗೆ ಬದಲಾಯಿಸುತ್ತದೆ. ಯಾವ ವರ್ಣವು ಯಾವ ಬಗೆಯ ವಿಕಾರವನ್ನು ತಳೆಯುತ್ತದೆ. ಶಬ್ದಾರ್ಥವೂ ಹೇಗೆ ಬದಲಾಯಿಸುತ್ತದೆ- ಎಂಬುದನ್ನು ಪರಿಶೀಲಿಸಿ ನಾನಾ ಕಾರಣಗಳನ್ನು ರೂಪಿಸಲಾಗಿದೆ. ಇದೆಲ್ಲವನ್ನೂ ಗಮನಿಸಿದರೆ ವಿಭಿನ್ನ ಭಾಷೆಗಳ ಮೂಲ ಸ್ವರೂಪವು ತಿಳಿಯುತ್ತದೆ. ಈ ಮೂಲ ಸ್ವರೂಪವನ್ನು ನಾಲ್ಕು ಅಥವಾ ಐದು ವರ್ಗಗಳನ್ನಾಗಿ ವಿಂಗಡಿಸಬಹುದು. ಆದ್ದರಿಂದ ಮೊದಲು ನಾಲ್ಕೋ ಐದೋ ಭಾಷೆಗಳು ಮಾತ್ರ ಇದ್ದವು - ಎನ್ನುತ್ತಾರೆ.

ಈ ಭಾಷಾ ಶಾಸ್ತ್ರವು ಕ್ರಮಬದ್ಧವಾಗಿ ರಚಿತವಾದದ್ದು. ಇದನ್ನು ರಚಿಸಿದವರು ಬಹುಭಾಷಾವಿದರೂ, ಸೂಕ್ಷ್ಮದರ್ಶಿಗಳೂ ಆದ ವಿದ್ವಾಂಸರೆನ್ನುವುದರಲ್ಲಿ ನಮಗೆ ಯಾವ ಸಂದೇಹವೂ ಇಲ್ಲ. ಭಾಷಾ ವರ್ಗವು ಎಷ್ಟಾದರೂ ಆಗಲಿ, ವರ್ಣವ್ಯತ್ಯಯ, ಅರ್ಥ ವ್ಯತ್ಯಯಗಳಿಗೆ ಕಾರಣಗಳೇನೇ ಇರಲಿ, ನಮ್ಮ ವಿಚಾರವು ಅದಲ್ಲ. ಪ್ರಕೃತವಾದದ್ದು ವೇದವಾದ್ದರಿಂದ ವೇದಭಾಷೆಯು ಮನುಷ್ಯನು ನಿರ್ಮಿಸಿಕೊಂಡದ್ದೇ

ಅಲ್ಲವೇ? ಎಂಬುದೀಗ ವಿಚಾರಣೀಯ. ವೇದದಲ್ಲಿ ಬಳಸಿರುವುದು ಸಂಸ್ಕೃತ ಭಾಷೆ. ಕೆಲವು ವೈದಿಕ ಶಬ್ದಗಳು ಲೌಕಿಕ ಸಂಸ್ಕೃತದಲ್ಲಿ ಬಿಟ್ಟುಹೋಗಿರಬಹುದು. ಈಗಿನ ಸಂಸ್ಕೃತವನ್ನು ಪಾಣಿನಿಯು 'ಭಾಷಾ' ಎಂದೂ, ವೇದವನ್ನು 'ಛಂದಸ್, ನಿಗಮ' ಎಂದೂ ವ್ಯವಹರಿಸುತ್ತಾನೆ. ಒಂದೇ ಅಷ್ಟಾಧ್ಯಾಯಿಯಲ್ಲಿ ಲೌಕಿಕ ವೈದಿಕ ಶಬ್ದಗಳ ಪ್ರಕ್ರಿಯೆಯನ್ನು ತಿಳಿಸುತ್ತ, ಎಲ್ಲಾದರೂ ಸ್ವಲ್ಪ ವ್ಯತ್ಯಾಸವು ಕಂಡಾಗ ಮಾತ್ರ ಅದನ್ನು ಪಾಣಿನಿಯು ತಿಳಿಸಿದ್ದಾನೆ. ಸಂಸ್ಕೃತವು ವೇದಭಾಷೆಯಾದ್ದರಿಂದಲೇ ಮಹಾ ವೈಯಾಕರಣನಾದ ಭರ್ತೃಹರಿಯು ವಾಕ್ಯಪದೀಯದಲ್ಲಿ ಸಂಸ್ಕೃತ ಭಾಷೆಯನ್ನು "**ದೈವೀವಾಕ್**" ಎಂದು ಕರೆದಿದ್ದಾನೆ. ದಂಡಿಯೂ ಸಹ "**ಸಂಸ್ಕೃತಂ ನಾಮ ದೈವೀವಾಕ್**" ಎಂದಿದ್ದಾನೆ.

ಡಾರ್ವಿನ್ ಮಹಾಶಯನ ವಿಕಾಸವಾದದಂತೆ ಕೋಟಿ ಕೋಟಿ ವರ್ಷಗಳ ಹಿಂದೆ 'ಅಮೀಬಾ' ಎಂಬ ಸೂಕ್ಷ್ಮ ಜಂತು ಈ ಲೋಕದಲ್ಲಿ ಧೊಪ್ಪನೆ ಕಾಣಿಸಿಕೊಂಡಿತಷ್ಟೆ. ಅದು ಬಹುಸಂಖ್ಯೆಯಲ್ಲಿ ಭೂಲೋಕದ ವಿಭಿನ್ನ ಪ್ರದೇಶಗಳಲ್ಲಿ ಕಾಣಿಸಿಕೊಂಡಿರಬೇಕು. ಅಮೀಬಾಗಳು ಕಾಲಕ್ರಮದಲ್ಲಿ ವಿಕಾಸವಾದದಂತೆ ಕಪಿರೂಪವಾಗಿ ಬೆಳೆದವು. ಕಪಿಗಳು ಕಾಲಕ್ರಮದಲ್ಲಿ ಗೋರಿಲ್ಲಾಗಳಾಗಿ ಬಾಲಗಳನ್ನು ಉದುರಿಸಿಕೊಂಡು ಮನುಷ್ಯಾಕೃತಿಯನ್ನು ತಳೆದವು. ಮರಗಳ ಮೇಲೆ ಹಾರಾಡುವುದನ್ನು ತ್ಯಜಿಸಿದ ಕಪಿಗಳು ಈ ಪ್ರಕಾರದಿಂದ ಮನುಷ್ಯರಾಗಿ ನೆಲದ ಮೇಲೆ ತಿರುಗಾಡತೊಡಗಿದವು. ಅನಂತರ ಈ ಮನುಷ್ಯರೆಂಬ ಕಾಡು ಜಂತುಗಳು ಮಾತಾಡುವುದನ್ನು ಕಲಿತು ಭಾಷೆಯನ್ನು ಬೆಳೆಸಿಕೊಂಡು ನಾಗರಿಕ ಪ್ರಜೆಗಳಾದವು - ಎಂದು ಭಾಷಾಶಾಸ್ತ್ರವು ಹೇಳುತ್ತದೆ.

ರಮ್ಯವಾದ ಈ ಕಥೆಯಲ್ಲಿ ಮನುಷ್ಯನು ಭಾಷೆಯನ್ನು ಸ್ವತಃ ಹೇಗೆ ಕಲಿತುಕೊಂಡನೆಂಬುದು ನಮಗೆ ಬೇಕಾದ ಅಂಶ. ಆ ಕ್ರಮವನ್ನು ಮಾತ್ರ ಭಾಷಾಶಾಸ್ತ್ರವು ತಿಳಿಸುವುದಿಲ್ಲ. ಅದನ್ನು ನಾವು ಊಹಿಸಿಕೊಳ್ಳಬೇಕಾಗಿದೆ. ಕನ್ನಡವು ಹೇಗೆ ಹುಟ್ಟಿರಬಹುದೆಂಬುದನ್ನು ಊಹಿಸೋಣ. ಅದೇ ಕ್ರಮ ಸಂಸ್ಕೃತಕ್ಕೂ ಅನ್ವಯಿಸುತ್ತದೆ. ಭಾಷೆಯು ಶಬ್ದಗಳಿಂದ ಆದದ್ದು. ಶಬ್ದವು ಅ, ಆ, ಇ, ಈ, ಕ, ಚ, ಟ, ತ, ಪ - ಮುಂತಾದ ವರ್ಣಗಳ ಸಮೂಹ.

ಮನುಷ್ಯ ಜಾತಿಯು ಹುಟ್ಟಿದಾಗ ಮನುಷ್ಯನು ಕಪಿಗೆ ಸದೃಶನಾಗಿದ್ದ. ಯಾವ ವರ್ಣವನ್ನೂ ಉಚ್ಚರಿಸಲು ಅವನಿಗೆ ಬರುತ್ತಿರಲಿಲ್ಲ. ಪ್ರಾಣಿಗಳಂತೆ ಯಾವುದೋ ಧ್ವನಿಯನ್ನು ಮಾಡಬಲ್ಲವನಾಗಿದ್ದಿರಬಹುದು. ವರ್ಣಾತ್ಮಕವಾದ ಅ, ಕ - ಮುಂತಾದವನ್ನು ಅವನು ಕೇಳಿಯೇ ಇರಲಿಲ್ಲವಾದ್ದರಿಂದ ಅದನ್ನು ಹೊರಡಿಸುವುದು

ಹೇಗೆ? ಈಗಲೂ ಹುಟ್ಟುಕಿವುಡನಾದ ಬಾಲಕನಿಗೆ ಮಾತಾಡಲು ಬರುವುದೇ ಇಲ್ಲ. ಅವನ ಬಾಯಿಯಲ್ಲಿ ಯಾವ ದೋಷವೂ ಇರುವುದಿಲ್ಲ. ಆದರೂ ವರ್ಣಾತ್ಮಕ ಶಬ್ದವನ್ನು ಉಚ್ಚರಿಸಲಾರ. ಇದನ್ನು ಭಾಷಾ ವಿಜ್ಞಾನಿಗಳು ಪ್ರಯೋಗ ಮಾಡಿ ನಿರ್ಣಯಿಸಿದ್ದಾರೆ. ಯಾವ ಭಾಷೆಯನ್ನೂ ಆಡದೇ, ವರ್ಣಾತ್ಮಕ ಶಬ್ದವೂ ಕೇಳಿಸದಂತೆ ಚಿಕ್ಕ ಶಿಶುಗಳನ್ನು ಸಾಕಿದರು. ಐದಾರು ವರ್ಷಗಳು ಕಳೆದರೂ ಆ ಮಕ್ಕಳಿಗೆ ಒಂದು ಅಕ್ಷರವನ್ನು ಉಚ್ಚರಿಸಲೂ ಬರುತ್ತಿರಲಿಲ್ಲ. ಅನಂತರ ಮಾತಾಡತಕ್ಕವರೊಡನೆ ಸೇರಿದಾಗ ಎಲ್ಲರೂ ಮಾತಾಡುವುದನ್ನು ಕಲಿತುಕೊಂಡರು.

ಅಕಾರಾದಿ ವರ್ಣಗಳು ಬಾಯಿಯಲ್ಲಿರುವ ಗೊತ್ತಾದ ಕೆಲವು ಸ್ಥಾನಗಳಲ್ಲಿ ಹುಟ್ಟುತ್ತವೆ. ಅವನ್ನು ಹೊರಡಿಸಲು ಮಾತಾಡತಕ್ಕವನು ವಿಶಿಷ್ಟವಾದ ಒಂದು ಪ್ರಯತ್ನವನ್ನು ಮಾಡಬೇಕಾಗುತ್ತದೆ. ಯಾವ ಅಕ್ಷರವು ಯಾವ ಸ್ಥಾನದಲ್ಲಿ ಯಾವ ಪ್ರಯತ್ನದಿಂದ ಹುಟ್ಟುತ್ತದೆಯೆಂಬುದನ್ನು ಶಿಕ್ಷಾಶಾಸ್ತ್ರವೂ, ವ್ಯಾಕರಣ ಶಾಸ್ತ್ರವೂ ಗೊತ್ತುಮಾಡಿವೆ. ಕಂಠ, ತಾಲು, ದಂತ, ಓಷ್ಠ - ಇತ್ಯಾದಿ ಸ್ಥಾನಗಳನ್ನೂ, ವಿವೃತ, ಸ್ಪೃಷ್ಟ - ಮುಂತಾದ ಪ್ರಯತ್ನಗಳನ್ನೂ ವಿಂಗಡಿಸಿ ತಿಳಿಸಿವೆ. ಅದರ ವಿವರಣೆ ಇಲ್ಲಿ ಬೇಕಾಗಿಲ್ಲ. ತಾತ್ಪರ್ಯವೇನೆಂದರೆ , ಒಂದು ಮಗು ಬೆಳೆಯುವಾಗ ತಾಯಿ, ತಂದೆ ಮೊದಲಾದವರು ಆಡುವ ಮಾತನ್ನು ಕೇಳಿ ಅಕ್ಷರಗಳ ಉಚ್ಚಾರಣೆಯನ್ನು ಕ್ರಮವಾಗಿ ಕಲಿತುಕೊಳ್ಳುತ್ತದೆ. ಮಗುವಿಗೆ ಅಕ್ಷರದ ಸ್ಥಾನ ಪ್ರಯತ್ನಗಳೇನೂ ಗೊತ್ತಿರುವುದಿಲ್ಲ. ಮಾತಾಡತಕ್ಕ ತಾಯಿ - ತಂದೆಗಳಿಗೇ ಗೊತ್ತಿರುವುದಿಲ್ಲ ! ಆದರೂ ಇವರು ಮಾತಾಡುತ್ತಾರೆ. ಮಗು ಕಲಿತುಕೊಳ್ಳುತ್ತದೆ. ಕ, ತ, ಮ, ಅ, ಉ - ಮುಂತಾದ ಅಕ್ಷರಗಳನ್ನು ಹೇಳುವಾಗ ಯಾವ ಸ್ಥಳಕ್ಕೆ ನಾಲಗೆಯನ್ನು ಹೇಗೆ ಮುಟ್ಟಿಸಬೇಕೆಂಬುದನ್ನು ಮಕ್ಕಳು ಹೇಗೆ ತಿಳಿದುಕೊಳ್ಳುತ್ತವೆ? ನೋಡಿ ತಿಳಿದುಕೊಳ್ಳತಕ್ಕದ್ದಲ್ಲ. ಹುಟ್ಟು ಕುರುಡಾದ ಮಗುವೂ ಮಾತಾಡಬಲ್ಲದು. ಆದ್ದರಿಂದ ಅಕ್ಷರಗಳ ಉಚ್ಚಾರಣೆಯನ್ನು ಕೇಳಿಯೇ ಕಲಿತುಕೊಳ್ಳಬೇಕೆಂದು ಸಿದ್ಧವಾಗುತ್ತದೆ. ಇದಕ್ಕೆ ಜನ್ಮಾಂತರ ಸಂಸ್ಕಾರವೇ ಕಾರಣವೆನ್ನದೆ ಗತ್ಯಂತರವಿಲ್ಲ. ಇನ್ನಾವ ಕಾರಣವನ್ನು ಊಹಿಸಲೂ ಶಕ್ಯವಿಲ್ಲ.

ಪರಿಸ್ಥಿತಿ ಹೀಗಿರುವಾಗ ಆದಿ ಮಾನವನು ಅಕ್ಷರಗಳ ಉಚ್ಚಾರಣೆಯನ್ನು ಹೇಗೆ ಕಲಿತುಕೊಂಡನು? ಕಾಗೆ ಕೂಗುವುದನ್ನು ಕೇಳಿ **'ಕಾ'** ಎಂದು ಕಲಿತಿರಬೇಕು. ದನಕರುಗಳು ಕೂಗುವುದನ್ನಾಲಿಸಿ **'ಅಮಾ'** ಎಂದು ಆದಿಮಾನವನು ಕಲಿತಿರಬಹುದು. ಮೋಡವು ಗುಡುಗುವುದನ್ನು ಕೇಳಿ **'ಡುಡುಡಂಡೂ'** ಎಂದು ತಾನೂ ಕೂಗಿರಬಹುದು. ಭಾಷಾ ಶಾಸ್ತ್ರಿಗಳು ಹೀಗೆಯೇ ಹೇಳಿದ್ದಾರೆ. ಕಾಕ, ಘೂಕ, ಭೇಕ - ಮುಂತಾದವು ಶಬ್ದಾನುಕರಣದಿಂದ ಹುಟ್ಟಿವೆಯೆಂದು ಅವರ ಸಿದ್ಧಾಂತವಾಗಿದೆ. ಇತರ ಶಬ್ದಗಳು

ಬೇರೆ ಬೇರೆ ಕಾರಣಗಳಿಂದಲೂ ಹುಟ್ಟಿರಬಹುದು. ಮೊದಲು ಅಕ್ಷರಗಳು ಹುಟ್ಟಿ ಆಮೇಲೆ ಶಬ್ದಗಳು ಹುಟ್ಟಿದವೆಂದೂ ಆಮೇಲೆ ವಾಕ್ಯವನ್ನಾಡುವುದು ರೂಢಿಗೆ ಬಂದಿತೆಂದೂ ಅವರು ವಾದಿಸುತ್ತಾರೆ.

ಆದರೆ ಹಕ್ಕಿ, ನಾಯಿ, ಹಸು - ಮುಂತಾದ ಪ್ರಾಣಿಗಳ ಕೂಗಿನಿಂದಾಗಲಿ, ಗುಡುಗು ಮುಂತಾದ ಪ್ರಕೃತಿ ಜನ್ಯಧ್ವನಿಯಿಂದಾಗಲಿ ಎಷ್ಟು ಅಕ್ಷರಗಳ ಉಚ್ಚಾರಣೆ ಗೊತ್ತಾದೀತು? ಹೆಚ್ಚೆಂದರೆ ೮-೧೦ ಅಕ್ಷರಗಳು ತಿಳಿದುಬರಬಹುದು. ಅವುಗಳಿಂದ ಶಬ್ದರಚನೆ ಸಾಧ್ಯವಾದೀತೆ? ಮೊದಲು ಆದಿ ಮಾನವನು ಏಕಾಕ್ಷರದಿಂದ ವಸ್ತುವನ್ನು ನಿರ್ದೇಶಿಸಿರಬಹುದು. ನೀರನ್ನು ಸೂಚಿಸುವುದಕ್ಕಾಗಿ ಮೊದಲು ವಾ ವಾ ಎಂದು ಹೇಳುತ್ತಿದ್ದವೆನ್ನೋಣ. ಆಮೇಲೆ ಗಾಳಿಯನ್ನು ಸೂಚಿಸುವುದಕ್ಕಾಗಿಯೂ ವಾವಾ ಎಂದೇ ಹೇಳಬೇಕಾಗಿತ್ತು. ಅವೆರಡಕ್ಕೆ ವ್ಯತ್ಯಾಸವೇ ತಿಳಿಯುತ್ತಿರಲಿಲ್ಲ. ಎಷ್ಟೋ ವರ್ಷಗಳ ಮೇಲೆ ತಾನು ಕಂಡುಹಿಡಿದ 'ರಿ'ಯನ್ನು ಸೇರಿಸಿ ವಾರಿ ಶಬ್ದವನ್ನು ಮಾಡಿಕೊಂಡಿರಬೇಕು. ಯಾವಾಗಲೋ 'ಯು' ಶಬ್ದವನ್ನು ಕೇಳಿ, ಇನ್ನೊಂದು ವಾ ಶಬ್ದಕ್ಕೆ ಸೇರಿಸಿ ವಾಯು ಶಬ್ದವನ್ನು ನಿರ್ಮಿಸಿಕೊಂಡಿರಬೇಕು. ಹೀಗೆ ಶತಮಾನಗಳು ಕಳೆದ ಮೇಲೆ ಕ್ರಿಯಾಪದವಿಲ್ಲದೆ ವ್ಯವಹಾರವು ನಡೆಯುವುದಿಲ್ಲವೆಂದು ಗೊತ್ತಾಗಿ ಕ್ರಿಯಾಪದಗಳನ್ನು ನಿರ್ಮಿಸಿಕೊಂಡಿರಬೇಕು. ಆಮೇಲೆ ಅನೇಕ ಕ್ರಿಯಾಪದಗಳನ್ನು ನಿರ್ಮಿಸಿ ಕೊಂಡಿರಬೇಕು. ಇದು ಸುತ್ತಮುತ್ತಲಿನ ಜನರಿಗೆ ತಿಳಿದು ಅವರೂ ಬಳಸಲು ತೊಡಗಿರಬೇಕು. ಇದು ಜನರ ಭಾಷೆಯು ಬೆಳೆಯುವುದಕ್ಕಾಗಿ ಪ್ರಥಮಾವಸ್ಥೆ. ಆದರೆ ಯಾವ ಭಾಷೆಯೂ ಕ್ರಿಯೆಯನ್ನು ಸೂಚಿಸುವ ಶಬ್ದವಿಲ್ಲದೆ ಪೂರ್ಣವಾಗುವುದೇ ಇಲ್ಲ. ವಸ್ತುವನ್ನು ನಿರ್ದೇಶಿಸಿ ಅದಕ್ಕೊಂದು ಹೆಸರನ್ನಿಡಬಹುದು. ಕ್ರಿಯೆಯನ್ನು ನಿರ್ದೇಶಿಸಿ ಹೆಸರನ್ನಿಡುವುದು ಹೇಗೆ? ಹೇಳು, ಹೋಗು, ಬಾ, ನೋಡು, ಕೇಳು - ಮುಂತಾದ ಶಬ್ದಗಳು ಗೊತ್ತಾದ ಕ್ರಿಯೆಯನ್ನು ನಿರ್ದೇಶಿಸುತ್ತವೆಯೆಂಬುದನ್ನು ಗೊತ್ತುಮಾಡಿಕೊಳ್ಳುವುದು ಹೇಗೆ? ಭೂತ, ಭವಿಷ್ಯದ್, ವರ್ತಮಾನಗಳನ್ನು ಉತ್ತಮ ಪುರುಷ, ಮಧ್ಯಮ ಪುರುಷ, ಪ್ರಥಮ ಪುರುಷಗಳಿಗಾಗಿ ಬೇರೆ ಬೇರೆ ಪ್ರತ್ಯಗಳಿಂದ ಸೂಚಿಸುವ ಬಗೆ ಹೇಗೆ? ಭಾಷೆಯು ಒಂದು ನಾಡಿನ ಎಲ್ಲ ಜನರ ಸ್ವತ್ತಾಗಿದ್ದು ಸಮಸ್ತ ಜನರಿಗೂ ತಿಳಿದಿರಬೇಕಾಗುತ್ತದೆ. ಕೆಲವರಾದರೂ ಒಂದು ಕಡೆ ಸಭೆ ಸೇರಿ ಈ ಪದಾರ್ಥಗಳನ್ನು ಸಂಕೇತಿಸಲು ಈ ಪದಗಳನ್ನು ಗೊತ್ತು ಮಾಡಿಕೊಳ್ಳೋಣ! - ಎಂಬ ನಿರ್ಧಾರವನ್ನು ಕೈಗೊಳ್ಳಬೇಕು. ಅಂತಹ ಸಭೆಯನ್ನು ಸೇರಿಸುವುದು ಹೇಗೆ? ಸಭೆ ಎಲ್ಲಿ ಸೇರಬೇಕು? ಯಾವ ಉದ್ದೇಶಕ್ಕಾಗಿ ಸೇರಬೇಕು? ಎಂದು ಜನರಿಗೆ ಬಿಡಿಸಿ ಹೇಳಲು ನಮ್ಮಲ್ಲಿ ಶಬ್ದಗಳೇ ಇರುವುದಿಲ್ಲವಲ್ಲ! ಒಂದು ವೇಳೆ ಸಭೆ ಸೇರಿದರೂ

ಭಾವನಾತ್ಮಕವಾದ ವಸ್ತುವನ್ನು ಗುರುತಿಸಿ ಸಂಕೇತಗಳನ್ನಿಡುವುದು ದುಷ್ಕರವೇ ಸರಿ. ಕಾಮ, ಕ್ರೋಧ, ಲೋಭ, ಪ್ರೀತಿ, ದ್ವೇಷ - ಮುಂತಾದ ಭಾವಗಳು ಕೈ ತೋರಿಸಿ ಗುರುತಿಸುವ ವಸ್ತುಗಳಲ್ಲ. ಯಾವುದು ಕ್ರೋಧವೆಂದೂ, ಯಾವುದು ಪ್ರೀತಿ ಎಂದೂ ಗುರುತಿಸಿ ಹೆಸರನ್ನಿಡುವುದು ಅಶಕ್ಯವೇ ಸರಿ. ಅಂತೆಯೇ ಭಾವನಾಗಮ್ಯಗಳಾದ ಅಣ್ಣ, ತಮ್ಮ, ಹೆಂಡತಿ, ಗಂಡ, ಮಗ, ಮಾವ, ಭಾವ, ಹಿರಿಯ, ಕಿರಿಯ - ಮುಂತಾದ್ದನ್ನು ಸಂಕೇತದಿಂದ ಗುರುತಿಸಿ, ಹೆಸರಿಡುವುದು ಆಗದ ಮಾತು. ನಾಮಪದಗಳಲ್ಲಿ ಅರ್ಥ ನಿರ್ದೇಶಪೂರ್ವ-ವಾಗಿ ವಿಭಕ್ತಿಗಳನ್ನು ಕ್ರಿಯಾಪದಗಳಲ್ಲಿ ಆಖ್ಯಾತಪ್ರತ್ಯಯಗಳನ್ನು ಯಾವ ಯಾವುದೆಂದು ಗೊತ್ತು ಮಾಡಿಕೊಳ್ಳುವುದೂ ಆಗದ ಮಾತು. ಈ ಪ್ರಕಾರದಲ್ಲಿ ಆಲೋಚಿಸಿಕೊಂಡಾಗ ಒಂದು ಭಾಷೆಯನ್ನು ಮಾತಾಡಲು ಬರದವರು ಸೇರಿ, ಭಾಷೆಯನ್ನು ನಿರ್ಮಿಸಿಕೊಳ್ಳುತ್ತಾರೆ - ಎನ್ನುವುದು ನಮ್ಮ ಊಹೆಗೆ ನಿಲುಕುವುದಿಲ್ಲ. ಅಲ್ಲದೆ ಹಾಗೆ ನಿರ್ಮಿಸಿಕೊಂಡ ಶಬ್ದಗಳನ್ನು ನೆನಪಿಟ್ಟುಕೊಳ್ಳುವುದು ಹೇಗೆ? ಭಾಷೆಯೇ ಇಲ್ಲದಾಗ ಬರಹವೂ ಇಲ್ಲ ಎಂಬುದು ಸ್ಫುಟವಾಗಿ ಎದ್ದು ತೋರುತ್ತದೆ. ಭಾಷೆಯಲ್ಲಿ ಸಾವಿರಾರು ಶಬ್ದಗಳಾದರೂ ಕನಿಷ್ಠಪಕ್ಷ ಇರುತ್ತವೆ. ಅವು ಒಂದು ನಿಯಮಕ್ಕೆ ಕಟ್ಟುಬಿದ್ದ ಏಕರೂಪದ ಶಬ್ದಗಳಲ್ಲ. ಉದಾಹರಣೆಗೆ, ಕೊಡುತ್ತಾನೆ ಎಂಬ ಕ್ರಿಯಾಪದದ ಭೂತಕಾಲದ ರೂಪ ಕೊಟ್ಟನು. ಬಿಡುತ್ತಾನೆ - ಬಿಟ್ಟನು, ಇಡುತ್ತಾನೆ - ಇಟ್ಟನು ಎಂದಾಗುತ್ತದೆ. ಹಾಗೆಯೇ ನೋಡುತ್ತಾನೆ ಎಂಬುದು ನೋಡಿದನು ಎಂದಾಗುವುದೇ ಹೊರತು ನೊಟ್ಟನು ಎಂದಾಗುವುದಿಲ್ಲ. ಕೂಡುತ್ತಾನೆ - ಕೂಡಿದನು ಎಂದಾಗುವುದೇ ಹೊರತು ಕುಟ್ಟನು ಎಂದಾಗುವುದಿಲ್ಲ. ಭಾಷೆಯನ್ನು ಮಾಡಿಕೊಂಡವರು ನೆನಪಿಟ್ಟುಕೊಳ್ಳುವುದಕ್ಕೆ ಅನುಕೂಲವಾಗುವಂತೆ ಸುಲಭವಾಗಿ ಮಾಡಿಕೊಳ್ಳದೆ ಕಷ್ಟವನ್ನೇಕೆ ತಂದುಕೊಂಡರೆಂಬ ಪ್ರಶ್ನೆಗೆ ಸರಿಯಾದ ಉತ್ತರ ದೊರೆಯದು. ಇದೆಲ್ಲವನ್ನು ಪರ್ಯಾಲೋಚಿಸಿದರೆ ಭಾಷೆಯನ್ನು ಮನುಷ್ಯನು ತನ್ನ ವ್ಯವಹಾರಕ್ಕಾಗಿ ನಿರ್ಮಿಸಿಕೊಂಡಿದ್ದಾನೆ ಎಂಬ ಭಾಷಾ ಶಾಸ್ತ್ರಿಗಳ ಸಿದ್ಧಾಂತವೇ ಅಲ್ಲಾಡಿಹೋಗುತ್ತದೆ. ಆದರೆ ಮೂಲದಲ್ಲಿದ್ದ ಭಾಷೆಯೊಂದು ಅಲ್ಪಜ್ಞರಾದವರ ಬಾಯಲ್ಲಿ, ಉಚ್ಚಾರಣೆಗೆ ಅಸಮರ್ಥರಾದವರ ಬಾಯಲ್ಲಿ ರೂಪಾಂತರಗೊಂಡು ನಾನಾ ಕಾರಣಗಳಿಂದ ವಿಕೃತವಾಗುತ್ತದೆ ಎಂಬುದು ಸತ್ಯ. ಉದಾಹರಣೆಯಾಗಿ ಕನ್ನಡವನ್ನೇ ನೋಡಿರಿ : ಪಂಪಾದಿ ಕವಿಗಳು ಬಳಸುತ್ತಿದ್ದ ಹಳೆಗನ್ನಡವು, ನಡುಗನ್ನಡವಾಗಿ ಹೊಸಗನ್ನಡವಾಗಿದೆ. ಹವ್ಯಕರಾಡುವ ಕನ್ನಡವೇ ಒಂದು ಬಗೆ. ಇತರ ಕನ್ನಡಿಗರ ಕನ್ನಡ ಇನ್ನೊಂದು ಬಗೆ. ದ. ಕನ್ನಡ, ಉ. ಕನ್ನಡ, ಧಾರವಾಡ ಪ್ರಾಂತ, ಮೈಸೂರು, ಬೆಂಗಳೂರು ಪ್ರಾಂತಗಳಲ್ಲಿ ಇನ್ನೂ ಅನೇಕ ಬಗೆಗಳನ್ನು ಕಾಣಬಹುದು. ಏಕದೇಶೀಯವೂ ಸೀಮಿತವೂ ಆದ ಕನ್ನಡ ಭಾಷೆಯೇ ಒಂದು ಒಗಟಾಗಿ ನಿಂತಾಗ, ಅಖಂಡ ಭರತಖಂಡ ವ್ಯಾಪಕವೂ,

ಜಗತ್ತಿನಲ್ಲಿಯೇ ಅತಿ ಪ್ರಾಚೀನವೂ ಆದ ವಾಙ್ಮಯಕ್ಕೆ ಆಶ್ರಯವೂ ಭಾಷಾ ಸಾರ್ವಭೌಮವೂ ಆಗಿ ಅಮರವಾಣಿಯೆನಿಸಿಕೊಂಡಿರುವ ಸಂಸ್ಕೃತ ಭಾಷೆಯ ರಹಸ್ಯವನ್ನು ಭಾಷಾ ಶಾಸ್ತ್ರವು ಬಿಡಿಸಬಲ್ಲುದೆ?

ಆಚಾರ್ಯ ಪಾಣಿನಿಯು ರಚಿಸಿರುವ ಅಷ್ಟಾಧ್ಯಾಯಿಯು ಸಂಸ್ಕೃತ ಭಾಷೆಯ ವ್ಯಾಕರಣ ಶಾಸ್ತ್ರವೆಂದು ನಾವು ತಿಳಿದುಕೊಂಡಿದ್ದೇವೆ. ಆದರೆ ಇದು ಯಾವ ಭಾಷೆಯ ವ್ಯಾಕರಣವೆಂದು ಸೂತ್ರಕಾರರೂ ಹೇಳಿಲ್ಲ. ವಾರ್ತಿಕಕಾರರೂ ಹೇಳಿಲ್ಲ. ಭಾಷ್ಯಕಾರ ಪತಂಜಲಿಗಳು "**ಇದು ಯಾವ ಶಬ್ದಗಳ ಅನುಶಾಸನ?**" ಎಂದು ಪ್ರಶ್ನೆ ಮಾಡಿಕೊಂಡು, "**ಲೌಕಿಕ ಶಬ್ದಗಳ ಮತ್ತು ವೈದಿಕ ಶಬ್ದಗಳ ಅನುಶಾಸನ**" ಎಂದು ಉತ್ತರ ಹೇಳಿದ್ದಾರೆ. ಲೋಕದಲ್ಲಿ ಪ್ರಸಿದ್ಧವಾದವು ಲೌಕಿಕ ಶಬ್ದಗಳು. ವೇದದಲ್ಲಿರತಕ್ಕವು ವೈದಿಕ ಶಬ್ದಗಳು. ಹರದತ್ತನೆಂಬ ವ್ಯಾಖ್ಯಾನಕಾರನು "ಸರ್ವ ಲೋಕ ಪ್ರಸಿದ್ಧವಾದವು ಲೌಕಿಕ ಶಬ್ದಗಳು. ಅವುಗಳಿಗೆ ಇದು ಅನುಶಾಸನ. ಅಪಶಬ್ದಗಳು ಸರ್ವಲೋಕ ಪ್ರಸಿದ್ಧಗಳಲ್ಲ"- ಎಂದು ಬರೆದಿದ್ದಾನೆ. ಭಾಷ್ಯಕಾರರು ಇನ್ನೊಂದು ಸಂದರ್ಭದಲ್ಲಿ ಈ ವಾಙ್ಮಯವು "**ಸಪ್ತದ್ವೀಪಗಳಿರುವ ಈ ವಸುಮತಿ (ಪೃಥ್ವಿ) ಯಲ್ಲಿ ಪ್ರಸಿದ್ಧವಾಗಿದೆ**"ಯೆಂದು ತಿಳಿಸಿದ್ದಾರೆ.

ಇದರಿಂದ ಫಲಿತವಾದ ಅರ್ಥ ಇದು :- ಒಂದು ಕಾಲದಲ್ಲಿ ಸಂಸ್ಕೃತ ಭಾಷೆಯು ಈ ಪೃಥ್ವಿಯನ್ನೇ ವ್ಯಾಪಿಸಿಕೊಂಡಿತ್ತು. ಇದರ ಮೂಲವು ವೇದವೇ ಆಗಿದ್ದರೂ ಕೆಲವು ಶಬ್ದಗಳು ಲೌಕಿಕ ಭಾಷೆಯಲ್ಲಿ ಬಿಟ್ಟು ಹೋಗಿದ್ದವು. ಉದಾತ್ತ, ಅನುದಾತ್ತಾದಿ ಸ್ವರಗಳೂ ಲೌಕಿಕ ಭಾಷೆಯಲ್ಲಿ ಶಿಥಿಲವಾಗಿ, ಕ್ಲಿಷ್ಟವಾದ್ದರಿಂದ ಕ್ರಮೇಣ ಬಿಟ್ಟುಹೋದವು. ಈ ಭಾಷೆಯಲ್ಲಿ ಶಬ್ದ ಭಂಡಾರವು ಅತ್ಯಧಿಕವಾಗಿದ್ದು ಅವುಗಳ ರೂಪಗಳೂ ನಾನಾ ಪ್ರಕಾರವಾದ್ದರಿಂದ ಜನಸಾಮಾನ್ಯರ ಭಾಷೆಯಲ್ಲಿ ಕೆಲವು ಶಬ್ದಗಳು ಹೀಗೆ ಮಾಯವಾದ್ದರಲ್ಲಿ ಆಶ್ಚರ್ಯವೇನಿಲ್ಲ. ಪರ್ಯಾಯ ಶಬ್ದಗಳು ಬಹಳ ಇದ್ದಾಗ ಕೆಲವು ಲುಪ್ತವಾಗುವುದು ಸಹಜ. ಉದಾಹರಣೆಗೆ, ಅಮರ ಕೋಶದಲ್ಲಿರುವ ಪದಗಳೆಲ್ಲವೂ ಲೌಕಿಕ ಪದಗಳೇ ಆದರೂ ಎಷ್ಟೋ ಪರ್ಯಾಯ ಪದಗಳು ಈಗ ಬಳಕೆಯಲ್ಲಿಲ್ಲ. ವೈದಿಕ ಭಾಷೆ, ಲೌಕಿಕ ಭಾಷೆಗಳು ಮೂಲದಲ್ಲಿ ಏಕರೂಪದಲ್ಲಿದ್ದುದರಿಂದಲೇ ಒಂದೇ ವ್ಯಾಕರಣವು ಇವೆರಡನ್ನೂ, ಸಮಾನವಾಗಿ ಅನುಶಾಸನ ಮಾಡಲು ಸಮರ್ಥವಾಯಿತು. ವೈದಿಕ ಶಬ್ದಗಳಲ್ಲಿರುವ ಕೆಲವೇ ವಿಶೇಷಗಳನ್ನು ಅಲ್ಲಲ್ಲಿ ತಿಳಿಸುತ್ತ ಹೋದರೆ ಸಾಕು. ಉಳಿದ ನಿಯಮಗಳೂ ಶಬ್ದರೂಪಗಳೂ ಉಭಯತ್ರ ಸಮಾನವಾದ್ದರಿಂದ ಒಂದೇ ಶಬ್ದಶಾಸ್ತ್ರವು ಲೌಕಿಕ ವೈದಿಕ ಶಬ್ದಗಳೆರಡನ್ನೂ ನಿರ್ವಹಿಸುವುದು ಸುಲಭವಾಯಿತು. ಪರಿಣಾಮವಾಗಿ ವೈದಿಕ ಭಾಷೆಯಿಂದ ಲೌಕಿಕ ಭಾಷೆಯನ್ನೇ ಪೃಥಕ್‌ಕರಿಸಿದಂತಾಗಿ, ಲೌಕಿಕ ಶಬ್ದಗಳ ವಿಶೇಷವನ್ನು '**ಭಾಷಾಯಾಂ**' ಇತ್ಯಾದಿ ರೀತಿಯಿಂದ ಪರಿಷ್ಕರಿಸಿದ್ದೇ

ಇದರ 'ಸಂಸ್ಕಾರ!' ಈ ಸಂಸ್ಕಾರವನ್ನು ಪಡೆದ ಲೌಕಿಕ ಭಾಷೆಯೇ ಸಂಸ್ಕೃತ ಭಾಷೆ.

ಸಂಸ್ಕೃತ ಭಾಷೆಯು ಪರಕೀಯವಾದ ಇನ್ನೊಂದು ಮೂಲ ಭಾಷೆಯಿಂದ ಹುಟ್ಟಿದೆಯೆಂದೂ ಅದು ಜರ್ಮನ್ ಮುಂತಾದ ಪಾಶ್ಚಾತ್ಯ ಭಾಷೆಗಳಿಗೂ ಮೂಲವೆಂದೂ ಕೆಲವು ಪಾಶ್ಚಾತ್ಯ ಭಾಷಾ ಶಾಸ್ತ್ರಜ್ಞರು ಹೇಳಿದ್ದಾರೆ. ಊಹೆಯಿಂದ ನಿರ್ಮಿಸಿಕೊಂಡ ಈ ಭಾಷೆಗೆ ಇಂಡೋಜರ್ಮನ್ ಅಥವಾ ಇಂಡೋ ಯುರೋಪಿಯನ್ ಎಂದು ನಾಮಕರಣವನ್ನು ಮಾಡಿಕೊಂಡಿದ್ದಾರೆ. ಈಚೆಗೆ ಬಹುಮಂದಿ ಭಾಷಾ ಶಾಸ್ತ್ರಿಗಳೇ ಈ ಕಲ್ಪನೆಯನ್ನು ವಿಸ್ತಾರವಾಗಿ ಖಂಡಿಸಿರುವುದರಿಂದ ಇಲ್ಲಿ ಅದರ ಪ್ರಸ್ತಾವವು ಬೇಕಾಗಿಲ್ಲ. ಭಾರತೀಯರ ಸಂಸ್ಕೃತ ಭಾಷೆಗೆ ಪಾಶ್ಚಾತ್ಯ ಭಾಷೆಗಳ ಜನನಿಯೆಂಬ ಗೌರವವನ್ನು ಸಲ್ಲಿಸಲು ಹೊಟ್ಟೆಕಿಚ್ಚು ಮಾತ್ರವೇ ಅಡ್ಡ ಬಂದೀತು. ಆ ಮೂಲ ಭಾಷೆಯ ಒಂದು ತುಣುಕೂ ಈಗ ಲಭ್ಯವಾಗದಿರುವುದಕ್ಕೆ ಕಾರಣವನ್ನೇ ಅವರು ಕೊಡಲಾರದೆ ಹೋಗಿದ್ದಾರೆ.

ಇರಲಿ ! ಈ ಪೀಠಿಕೆಯಿಂದ ಪ್ರಕೃತವಾದ ವೇದದ ಅಪೌರುಷೇಯತೆಗೆ ಸಂದ ಉಪಯೋಗವೇನು? ಸಂಸ್ಕೃತವು ಜಗತ್ತಿನಲ್ಲೆಲ್ಲ ಬಳಸುತ್ತಿದ್ದ ಸಾರ್ವಲೌಕಿಕ ಭಾಷೆಯೆಂದೂ, ಅದು ವೈದಿಕ ಭಾಷೆಗಿಂತ ಭಿನ್ನವಾದದ್ದಲ್ಲವೆಂದೂ, ಲೋಕದಲ್ಲಿ ವೈದಿಕ ಭಾಷೆಯನ್ನು ಬಳಸುತ್ತಿದ್ದ ಕಾಲ ಯಾವುದೆಂಬುದೇ ಪ್ರಾಚೀನರಿಗೂ ತಿಳಿದಿರಲಿಲ್ಲವೆಂದೂ ಸಿದ್ಧವಾಯಿತು. ಉದಾತ್ತಸ್ವರಿತಾದಿಸ್ವರಗಳನ್ನು ಮಾತಾಡುವಾಗಲೂ ಬಳಸುತ್ತಿದ್ದ ಜನರು ಯಾರು? ವಿದ್ವಜ್ಜನರಿಗೂ ದುರ್ಗಮವಾದ ಸ್ವರವಿಧಿಯನ್ನು ಮಾತಾಡುವ ಭಾಷೆಯಲ್ಲಿ ಬಳಸಲು ಸಾಧ್ಯವೆ? ಯಾವ ಪ್ರಯೋಜನಕ್ಕಾಗಿ ಹೊರಲಾರದ ಹೊರೆಯನ್ನು ಅವರು ಹೊತ್ತಿದ್ದರು? - ಎಂಬ ಪ್ರಶ್ನೆಗಳಿಗೆ **ಸಮಂಜಸವಾದ ಉತ್ತರ ದೊರೆಯುವವರೆಗೆ ವೇದವು ಅಪೌರುಷೇಯವೆಂಬ ನಿಲುವಿಗೆ ಬಾಧೆ ಇಲ್ಲ.** ಇದನ್ನು ಮನಗಾಣಿಸುವುದಕ್ಕಾಗಿ ಈ ಪೀಠಿಕೆ ಉಪಯುಕ್ತವಾಗುತ್ತದೆ. ಈ ಅಭಿಪ್ರಾಯದಿಂದಲೇ ಕುಮಾರಿಲಭಟ್ಟಪಾದರು ವೇದದ ಅಪೌರುಷೇಯತ್ವವನ್ನು ವಿಸ್ತಾರವಾಗಿ ತಂತ್ರಾಲೋಕದಲ್ಲಿ ಸಮರ್ಥಿಸಿದ್ದಾರೆ. "**ಆದಿಮಾತ್ರಮಪಿಶ್ರುತ್ವಾ**" ಎಂದು ಆರಂಭವಾಗುವ ಏಳು ಶ್ಲೋಕಗಳ ತಾತ್ಪರ್ಯ ಹೀಗಿದೆ "ಋಗ್ವೇದದ ಮೊದಲನೆಯ ಮಂತ್ರವನ್ನು ಕೇಳಿದರೆ ಸಾಕು. ಅದು ಮನುಷ್ಯ ರಚಿತವೆಂದು ಬುದ್ಧಿಯಿದ್ದವರು ಯಾರೂ ಹೇಳಲಾರರು. ಕವಿಗಳು ಕಾವ್ಯಗಳನ್ನು ರಚಿಸುವಾಗ ಲೋಕವ್ಯವಹಾರದಲ್ಲಿರುವ ಪದಗಳನ್ನು ವಾಕ್ಯಗಳನ್ನು ಬಳಸಿ, ಲೋಕದಲ್ಲಿ ಕಂಡವ್ಯವಹಾರವನ್ನೇ ವರ್ಣಿಸುತ್ತಾರೆ. ಋಗ್ವೇದದಲ್ಲಿ ಆರವತ್ತನಾಲ್ಕು ಪ್ರಪಾಠಕಗಳಿವೆ. ಅವುಗಳನ್ನು ನಿಯತವಾದ ಅನುದಾತ್ತಾದಿ ಸ್ವರಗಳಿರುವ ಪದಗಳಿಂದ ರಚಿಸಲಾಗಿದೆ. ಲೋಕದಲ್ಲಿ ಎಲ್ಲಿಯೂ

ಕೇಳಿಬರದ ಈ ಸ್ವರಗಳುಳ್ಳ ಪದಗಳಿಂದ ಯಾವನು ಅಷ್ಟು ವಿಸ್ತಾರವಾದ ಗ್ರಂಥವನ್ನು ರಚಿಸಿಯಾನು? ''**ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವ ಮೃತ್ವಿಜಂ। ಹೋತಾರಂ ರತ್ನಧಾತಮಮ್ ........**' ಎಂದು ಮನುಷ್ಯನು ಹೇಳಬಲ್ಲನೆ? ಇಂತಹ ವಾಕ್ಯವನ್ನು ರಚಿಸುವಾಗ ಮನುಷ್ಯನು ಇಂತಹ ಛಂದಸ್ಸನ್ನು ಬೇರೆ ಎಲ್ಲಿ ಕಂಡಿರಬಹುದು? ಈ ಋಕ್ಕಿನಲ್ಲಿ ಪ್ರತಿಪಾದಿಸಿದ ವಿಷಯವು ಅವನಿಗೆ ಗೊತ್ತಾದದ್ದು ಹೇಗೆ? ಏನನ್ನು ಆಲೋಚಿಸಿ ಯಾವ ಉದ್ದೇಶದಿಂದ ಇದನ್ನು ರಚಿಸಿದ್ದಾನೆ? ಅಗ್ನಿಯು ಪುರೋಹಿತನೆಂಬುದನ್ನು ಇವನು ತಿಳಿದದ್ದು ಹೇಗೆ? ಬೆಂಕಿಯ ಪೌರೋಹಿತ್ಯವನ್ನು ಈ ಮನುಷ್ಯನು ಎಲ್ಲಿ ನೋಡಿದ್ದ? ''**ಈಳೇ**'' ಎಂಬ ಶಬ್ದವನ್ನಿಲ್ಲಿ ಬಳಸಿದ್ದು ಹೇಗೆ? ಇಂತಹ ಒಂದು ಶಬ್ದವಿದೆ ಎಂದು ಅವನಿಗೆ ಹೇಗೆ ಗೊತ್ತಾಯಿತು? (ಲೋಕದಲ್ಲಿ 'ಈಡೇ' ಎಂಬ ಶಬ್ದ ಉಂಟು. 'ಈಳೇ' ಎಂಬ ಶಬ್ದವಿಲ್ಲ) ಅಗ್ನಿಯು ಯಜ್ಞದ ದೇವನೆಂಬುದನ್ನು ಇವನು ಹೇಗೆ ತಿಳಿದ? ಎಲ್ಲಿ ಕಂಡಿದ್ದ? ''**ಈ ಕರ್ಮಕ್ಕೆ ಈತನು ದೇವ**'' ಎನ್ನುವುದು ವೇದವಿಧಿಯಿಂದಲೇ ತಿಳಿದುಬರಬೇಕು. ಮನುಷ್ಯನು ಹೇಳಿದ ಮಾತ್ರಕ್ಕೆ ಅಗ್ನಿಯು ಯಜ್ಞದೇವನಾಗಿ ಬಿಡುತ್ತಾನೆಯೆ?'' ಇತ್ಯಾದಿ.

ವೇದವನ್ನು ಮನುಷ್ಯರೇ ರಚಿಸಿದ್ದಾರೆಂದು ವಾದಿಸತಕ್ಕವರು ಈ ಪ್ರಶ್ನೆಗಳಿಗೂ ಸಮಂಜಸವಾದ ಉತ್ತರವನ್ನು ಹೇಳಬೇಕು -

೧. ವೇದದಲ್ಲಿ **ಜಗತೀ, ತ್ರಿಷ್ಟುಪ್** - ಇತ್ಯಾದಿ ಛಂದಸ್ಸುಗಳನ್ನು ಬಳಸಿದ್ದಾರಷ್ಟೆ. ಇವುಗಳಲ್ಲಿ ಇಷ್ಟೇ ಪಾದಗಳು, ಇಷ್ಟೇ ಅಕ್ಷರಗಳಿರಬೇಕೆಂಬ ನಿಯಮವಿದೆ. ಲಘು, ಗುರು - ಎಂಬ ಮಾತ್ರೆಗಳ ವ್ಯವಸ್ಥೆ ಇದೆ. ವೇದವನ್ನು ರಚಿಸಿದವರು ಈ ಬಗೆಯ ಛಂದಸ್ಸುಗಳನ್ನು ಎಲ್ಲಿ ಕಂಡಿದ್ದರು? ಹೇಗೆ ತಿಳಿದಿದ್ದರು? ವೇದಕ್ಕಿಂತ ಹಿಂದಿನ ಯಾವುದೇ ಒಂದು ಕಾವ್ಯವಾಗಲಿ, ಲಕ್ಷಣವಾಗಲಿ ನಮಗೆ ದೊರಕಿಲ್ಲ.

೨. ಶ್ರೀ ಕುಮಾರಿಲ ಭಟ್ಟರು ಹೇಳಿದಂತೆ, ಲೋಕದಲ್ಲಿ ಎಲ್ಲೆಲ್ಲಿಯೂ ಇಲ್ಲದ ''**ಸುತೇಭಿಃ, ಜಗುರಿಃ, ದಾಶುಷೇ, ಯುಯೋಧಿ**'' - ಇತ್ಯಾದಿ ಸಾವಿರಾರು ಪದಗಳನ್ನು ಲೋಕದಲ್ಲಿ ಬಳಸುತ್ತಿದ್ದವರು ಯಾರು? ಎಲ್ಲಿದ್ದರು? ಸಪ್ರಮಾಣವಾಗಿ ತೋರಿಸಬೇಕು.

೩. ವೇದಾಂಗವೆನಿಸಿದ ನಿರುಕ್ತವನ್ನು ರಚಿಸಿದ ಯಾಸ್ಕಾಚಾರ್ಯರು ಕ್ರಿ. ಪೂ. ೮ ನೇ ಶತಮಾನದಲ್ಲಿದ್ದರೆಂದು ಈಗಿನ ಇತಿಹಾಸ ಶೋಧಕರ ಊಹೆ. ಇವರಿಗಿಂತಲೂ ಪೂರ್ವದಲ್ಲಿ ಎಷ್ಟೋ ವೈಯಾಕರಣರೂ ನಿರುಕ್ತಕಾರರೂ ಇದ್ದರು. ಯಾಸ್ಕರೇ ತಮ್ಮ ನಿರುಕ್ತದಲ್ಲಿ ಆಗ್ರಾಯಣ, ಔದುಂಬರಾಯಣ, ಗಾರ್ಗ್ಯ, ಗಾಲವ, ಕೌತ್ಸ - ಮುಂತಾದ ಹದಿನಾರು ಮಂದಿ ನಿರುಕ್ತಕಾರರ ಹೆಸರುಗಳನ್ನು ಬರೆದಿದ್ದಾರೆ.

ಅವರ ಒಂದು ಗ್ರಂಥವೂ ನಮಗೀಗ ದೊರೆಯುವುದಿಲ್ಲ. ವೇದದಲ್ಲಿರುವ ಕೆಲವು ಶಬ್ದಗಳಿಗೆ ಅರ್ಥವೇ ಆಗುವುದಿಲ್ಲವೆಂದು ಆ ನಿರುಕ್ತಕಾರರು ಹೇಳಿದ್ದಾರೆಂದು ಯಾಸ್ಕರು ಹೇಳುತ್ತಾರೆ. ಒಂದು ಋಗ್ವೇದ ಮಂತ್ರವನ್ನು ಉದಾಹರಿಸಿದ್ದಾರೆ. ಅದರಲ್ಲಿ **''ಜರ್ಭರೀ, ತುರ್ಫರೀತೂ, ಫರ್ಫರೀಕಾ, ಮದೇರೂ, ಮರಾಯೂ''**- ಮುಂತಾದ ಶಬ್ದಗಳಿವೆ. ಈ ಶಬ್ದಗಳ ಅರ್ಥವು ತಿಳಿಯದೆಂದು ಕೌತ್ಸನೇ ಮೊದಲಾದ ಮಹರ್ಷಿಗಳು ಹೇಳಿದ್ದರಂತೆ. ಹೀಗೆ ವೇದವಿದ್ವಾಂಸರಾದ ಪ್ರಾಚೀನ ಮಹರ್ಷಿಗಳಿಗೇ ಈ ಶಬ್ದಗಳ ಅರ್ಥವು ಗೊತ್ತಿರಲಿಲ್ಲವೆಂದಾಗ, ಈ ಶಬ್ದಗಳು ಲೋಕದಲ್ಲಿ ಬಳಕೆಯಲ್ಲಿದ್ದವೆಂದು ಹೇಳಲು ಸಾಧ್ಯವೇ? ಅತಿ ಪ್ರಾಚೀನ ಕಾಲದಲ್ಲಿದ್ದಿರಬಹುದೆಂದರೆ, ಎಷ್ಟು ಪ್ರಾಚೀನ? ಮಂತ್ರವು ಪರಂಪರೆಯಲ್ಲಿ ಉಳಿದಿದೆ, ಅರ್ಥವು ಮಾತ್ರ ತಿಳಿಯದು - ಎನ್ನುವ ಪರಿಸ್ಥಿತಿ ಹೇಗೆ ಪ್ರಾಪ್ತವಾಯಿತು? ಆದ್ದರಿಂದ ಇದು **''ದೈವೀವಾಕ್''**, ಮನುಷ್ಯ ವಾಕ್ ಅಲ್ಲ ಎಂಬುದನ್ನು ಒಪ್ಪಿಕೊಳ್ಳಬೇಕಾಗುವುದು.

೪. ಸಾಮವೇದದಲ್ಲಿ ಋಙ್ಮಂತ್ರಗಳಿಗೆ ಅತಿ ಕ್ಲಿಷ್ಟವಾದ ನಾನಾ ಬಗೆಯ ಸಾಮಸ್ವರಗಳಿವೆ. ಗುರೂಪದೇಶದಂತೆ ಇಪ್ಪತ್ತು ಮೂವತ್ತು ಬಾರಿಯಾದರೂ ಹೇಳಿ ಕೇಳಿ ಕಷ್ಟದಿಂದ ಕಲಿಯಬೇಕಲ್ಲದೇ, ಅದರ ಉಚ್ಚಾರಣೆಯನ್ನು ಸರಿಯಾಗಿ ತಿಳಿಯಲು ಅನ್ಯರಿಂದ ಸಾಧ್ಯವೇ ಇಲ್ಲ. ಅನುದಾತ್ತಾದಿಸ್ವರಗಳನ್ನು ಲೋಕ ಭಾಷೆಯಲ್ಲಿ ಬಳಸುತ್ತಿದ್ದಿರಬೇಕೆಂದು ಯಾವನಾದರೊಬ್ಬ ಮೂರ್ಖನು ವಾದಿಸಬಹುದು. ಆದರೆ ಈ ಸಾಮಗೀತೆಯನ್ನು ಲೋಕದಲ್ಲಿ ಬಳಸುತ್ತಿದ್ದರೆಂದು ಹಠಮಾರಿಯಾದ ಯಾವ ಅತಿ ಮೂರ್ಖನೂ ಹೇಳಲಾರ. ಭಾಷೆಯಲ್ಲೆಲ್ಲೂ ಕಾಣದ ಈ ಗೀತಿಯನ್ನು ಸಾಮವೇದದಲ್ಲಿ ಯಾವನು ಯಾವ ಕಾರಣದಿಂದ ಸೇರಿಸಿದ?

೫. ಶೌನಕರು ''ಬೃಹದ್ದೇವತಾ'' ಎಂಬ ಗ್ರಂಥದಲ್ಲಿ ವೇದ ಪ್ರತಿಪಾದ್ಯ ದೇವತೆಗಳನ್ನು ಪೃಥಿವೀಸ್ಥಾನರು. ಅಂತರಿಕ್ಷಸ್ಥಾನರು, ದ್ಯುಸ್ಥಾನರೆಂದು, ಮೂರು ವಿಧವಾಗಿ ವಿಂಗಡಿಸಿದ್ದಾರೆ. ಬೃಹಸ್ಪತಿ, ಬ್ರಹ್ಮಣಸ್ಪತಿ, ವಿಶ್ವೇದೇವರು, ಅಶ್ವಿನೀದೇವತೆಗಳು - ಮೊದಲಾದವರು ಈ ವಿಭಾಗದಲ್ಲಿ ಸೇರುತ್ತಾರೆ. ಇವರ ಆಯುಧ, ವಾಹನ, ಗುಣ, ಸ್ವಭಾವಾದಿಗಳನ್ನು ವೇದದಲ್ಲಿ ಸ್ತುತಿಸಿರುವ ಪ್ರಕಾರ ನಮಗೆ ಪರಿಚಯ ಮಾಡಿಸಿದ್ದಾರೆ. ವೇದವು ಮನುಷ್ಯ ರಚಿತವಾಗಿದ್ದರೆ, ಹೀಗೆ ವರ್ಣಿಸಿದ ಮನುಷ್ಯರು ಈ ದೇವತೆಗಳನ್ನು ಎಲ್ಲಿ ಕಂಡಿದ್ದರು? ಹೇಗೆ ಕಂಡಿದ್ದರು? - ಎಂಬ ಪ್ರಶ್ನೆ ಏಳುತ್ತದೆ.

೬. ಯಾಸ್ಕರು ನಿರುಕ್ತದಲ್ಲಿ **''ಋಷಿರ್ದರ್ಶನಾತ್''** ಎಂದಿದ್ದಾರೆ. ಋಷಿಗಳು ಮಂತ್ರದ್ರಷ್ಟಾರರೇ ಹೊರತು ಕರ್ತಾರರಲ್ಲ ಎಂದು ಅವರ ಹೇಳಿಕೆ ಇದೆ. ಸಮಾಧಿ ಸ್ಥಿತಿಯಲ್ಲಿದ್ದಾಗ ಪ್ರಾಚೀನ ಋಷಿಗಳಿಗೆ ಈ ಮಂತ್ರಗಳು ಗೋಚರಿಸಿದವು. ಆಗ ಅವರ

ಮುಖದಿಂದ ಇವು ಹೊರಬಂದವು. ಕಶ್ಯಪ, ವಸಿಷ್ಠ, ವಿಶ್ವಾಮಿತ್ರ, ವಾಮದೇವ - ಮೊದಲಾದವರು ಈ ಮಂತ್ರಗಳಿಗೆ ದ್ರಷ್ಟಾರರಾದ ಋಷಿಗಳೆಂದೇ ಪ್ರಸಿದ್ಧಿ. ಆದ್ದರಿಂದಲೇ ಪಾಣಿನಿಯೂ ಸಹ ''**ದೃಷ್ಟಂ ಸಾಮ, ತೇನ ಪ್ರೋಕ್ತಂ**'' ಇತ್ಯಾದಿ ಸೂತ್ರಗಳನ್ನು ರಚಿಸಿದ್ದಾನೆ. ಇಲ್ಲದಿದ್ದರೆ ''**ತೇನ ಕೃತಂ**'' ಎಂಬುದರಿಂದಲೇ ''**ವಾಸಿಷ್ಠಂ ಸಾಮ, ವಾಮದೇವ್ಯಂ**'' ಇತ್ಯಾದಿ ಶಬ್ದಗಳು ಸಿದ್ಧವಾಗುತ್ತಿದ್ದವು. ''**ತೇನ ದೃಷ್ಟಂ**'' ಇತ್ಯಾದಿ ಸೂತ್ರಗಳನ್ನು ರಚಿಸಿದ್ದೇಕೆ? ಎಂಬ ಪ್ರಶ್ನೆ - ಮನುಷ್ಯಕೃತವಾದದ್ದು ವೇದವೆಂದರೆ, ಅವಶ್ಯವಾಗಿ ಹುಟ್ಟುತ್ತದೆ.

೭. ವೇದವು ಪ್ರತಿಪಾದಿಸಿರುವ ಆಧ್ಯಾತ್ಮಿಕ ಸಿದ್ಧಾಂತವು ಅತ್ಯಂತ ಗಹನವೂ, ಗಂಭೀರವೂ ಆಗಿದೆ. ಮನುಷ್ಯ ಮಾತ್ರರ ಊಹೆಗೂ ನಿಲುಕತಕ್ಕದ್ದಲ್ಲ. ''**ಪುರುಷ ಏವೇದಂ ಸರ್ವಂ, ಸರ್ವಂ ಖಲ್ವಿದಂ ಬ್ರಹ್ಮ, ನೇಹ ನಾನಾಸ್ತಿ ಕಿಂಚನ, ಏಕಮೇವಾದ್ವಿತೀಯಂ ಬ್ರಹ್ಮ**'' ಇತ್ಯಾದಿ ವಾಕ್ಯಗಳಿಂದ ಶ್ರುತಿಗಳು ಸಮಸ್ತ ವಿಶ್ವವೂ ಬ್ರಹ್ಮ ಸ್ವರೂಪವೆಂದು ಪ್ರತಿಪಾದಿಸುತ್ತಿವೆ. ಮನುಷ್ಯನಿಂದ ಇಂತಹ ಕಲ್ಪನೆ ಶಕ್ಯವಾದೀತೆ? ''**ಅಹಂ ರುದ್ರೇಭಿರ್ವಸುಭಿಶ್ಚರಾಮಿ ಅಹಮಾದಿತ್ಯೈಃ ....... ಅಹಂ ಮನುರಭವಂ ಸೂರ್ಯಶ್ಚ**'' ಇಂತಹ ಮಾತನ್ನು ಯಾವ ದಾರ್ಶನಿಕನು ಹೇಳಿಕೊಂಡಾನು? ''**ತತ್ತ್ವಮಸಿ, ಅಹಂ ಬ್ರಹ್ಮಾಸ್ಮಿ**'' ಎಂದು ಜೀವನಿಗೂ ಪರಮಾತ್ಮನಿಗೂ ಅಭೇದವನ್ನು ಎಂತಹ ಬುದ್ಧಿಶಾಲಿಯೂ ಕಂಡುಹಿಡಿಯಲಾರ. ಎಂತಹ ದುರಹಂಕಾರಿಯೂ ಹೇಳಿಕೊಳ್ಳಲಾರ. ಮನುಷ್ಯರಚಿತ ಗ್ರಂಥದಲ್ಲಿ ಮೇಲ್ಕಂಡ ನುಡಿಗಳು ಬರುವುದು ಶಕ್ಯವೆ?

೮. ವೇದರಾಶಿಯಾದರೋ ಅಪಾರವಾದದ್ದು. ಒಬ್ಬ ಮನುಷ್ಯನಿಂದಂತೂ ರಚಿಸಲು ಶಕ್ಯವಾದದ್ದೇ ಅಲ್ಲ. ಮನುಷ್ಯ ರಚಿತವಾದಲ್ಲಿ ಭಾಷಾ ವೈಲಕ್ಷಣ್ಯವನ್ನು ಶೈಲಿಯನ್ನು ಗಮನಿಸಿದಾಗ, ನೂರಾರು ವರ್ಷಗಳ ಅಂತರದಲ್ಲಿ ಬೇರೆ ಬೇರೆ ದೇಶವಾಸಿಗಳು ರಚಿಸಿದ್ದೆಂದು ಹೇಳಲೇಬೇಕಾಗುತ್ತದೆ. ಹಾಗಿರುವಾಗ ಸಿದ್ಧಾಂತದಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಲೇಬೇಕು. ಏಕೆಂದರೆ, ಎಲ್ಲರೂ ಏಕಾಭಿಪ್ರಾಯವನ್ನು ಅತೀಂದ್ರಿಯದ ವಿಷಯದಲ್ಲಿ ತಳೆಯುವುದು ಆಗತಕ್ಕದ್ದಲ್ಲ. ಆದರೆ ವೇದದ ಅನಂತ ಶಾಖೆಗಳಲ್ಲಿ ಅಭಿಪ್ರಾಯ ಭೇದವಿಲ್ಲ. ವೇದವು ಹೀಗೆ ಬೇರೆ ಬೇರೆ ಜನರಿಂದ ರಚಿತವಾಗಿದ್ದರೆ ಅಭಿಪ್ರಾಯ ಭೇದವೇಕೆ ಬರಲಿಲ್ಲ?

೯. ಪುರುಷಸೂಕ್ತದಲ್ಲಿ ''**ಋಚಃ ಸಾಮಾನಿ ಜಜ್ಞಿರೇ। ಛಂದಾಂಸಿ ಜಜ್ಞಿರೇ ತಸ್ಮಾತ್**'' ಎಂದು ಹೇಳಿದೆ. ಯಜ್ಞಪುರುಷನಿಂದ ಋಗಾದಿ ವೇದಗಳು ಹುಟ್ಟಿದವೆಂದು ಅಭಿಪ್ರಾಯ. ''**ಯೋವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ। ತಸ್ಯ ಮಹತೋ ಭೂತಸ್ಯ**

**ನಿಃಶ್ವಸಿತಮೇತದ್ ಯದೃಗ್ವೇದೋ ಯಜುರ್ವೇದಃ ಸಾಮವೇದಃ''** ಇತ್ಯಾದಿ ವಚನಗಳು ವೇದದಲ್ಲಿಯೇ ಹೇಗೆ ಬಂದವು?

೧೦. ಶ್ರೀ ಶಂಕರಾಚಾರ್ಯರು ಸೂತ್ರ ಭಾಷ್ಯದಲ್ಲಿ (೧-೧-೩) ಹೀಗೆ ಬರೆದಿದ್ದಾರೆ - ''**ನ ಹಿ ಈದೃಶಸ್ಯ ಶಾಸ್ತ್ರಸ್ಯ ಋಗ್ವೇದಾದಿ ಲಕ್ಷಣಸ್ಯ ಸರ್ವಜ್ಞಗುಣಾನ್ವಿತಸ್ಯ ಸರ್ವಜ್ಞಾದನ್ಯತಃ ಸಂಭವೋಽಸ್ತಿ''** ''ಈ ಪ್ರಕಾರವಾಗಿ ಸರ್ವಜ್ಞಗುಣಗಳಿಂದ ಕೂಡಿದ ಋಗ್ವೇದವೇ ಮೊದಲಾದ ವೇದರೂಪ ಶಾಸ್ತ್ರವು ಸರ್ವಜ್ಞನಾದ ಪರಮೇಶ್ವರನಿಂದಲ್ಲದೇ ಬೇರೆಯವರಿಂದ ಹೊರಬರುವುದು ಅಸಂಭವ.'' ವೇದವು ಸರ್ವಜ್ಞವೆಂದೇ ಆಚಾರ್ಯರು ಹೇಳಿದ್ದಾರೆ. ವೇದವನ್ನು ರಚಿಸಬಲ್ಲ ಸರ್ವಜ್ಞನಾದ ಮಾನವ ಯಾರು?

ಈ ಪ್ರಕಾರವಾಗಿಯೇ ನಮ್ಮ ಇತರ ಆಚಾರ್ಯರೂ, ಋಷಿಗಳೂ ಮಹಾ ವಿದ್ವಾಂಸರೂ ಅವಿಚ್ಛಿನ್ನವಾಗಿ ವೇದವು ಅಪೌರುಷೇಯವೆಂದೇ ಹೇಳುತ್ತ ಬಂದಿರುವುದು ಯಾವ ಕಾರಣದಿಂದ? ಅವರೆಲ್ಲರೂ ಮೂಢವಿಶ್ವಾಸದಿಂದ ಹೇಳುತ್ತಾರೆ ಎನ್ನುವುದಾದರೆ, ನೀವೇ ಮೂಢರಲ್ಲವೆನ್ನುವುದಕ್ಕೆ ಆಧಾರವೇನು?

೧೧. ಯಾಸ್ಕರು ನಿರುಕ್ತದಲ್ಲಿ ಋಷಿಗಳು ವೇದವನ್ನು ಸಾಕ್ಷಾತ್ಕರಿಸಿ ಕೊಂಡಿದ್ದರೆಂದೂ ಹಾಗೆ ಸಾಕ್ಷಾತ್ಕರಿಸಿಕೊಳ್ಳದಿದ್ದವರಿಗೆ ವೇದಮಂತ್ರಗಳನ್ನು ಉಪದೇಶಿಸಿದರೆಂದೂ ಬರೆದಿದ್ದಾರೆ. (ನಿರುಕ್ತ ೧-೩೦) ಉಪದೇಶದಿಂದ ಶ್ರವಣ ಮಾಡುತ್ತಲೇ ವೇದವನ್ನು ಕಲಿಯುತ್ತಿದ್ದರೇ ಹೊರತು ಬೇರೆ ರೀತಿಯಲ್ಲಿ ಯಾರಿಗೂ ವೇದವು ಲಭ್ಯವಿರಲಿಲ್ಲ. ವೇದವನ್ನು ಬರೆದಿಡುವ ಪದ್ಧತಿಯೇ ಇರಲಿಲ್ಲ. ಆದ್ದರಿಂದಲೇ ವೇದಕ್ಕೆ ''**ಶ್ರುತಿ**'' ಎಂಬ ಹೆಸರು ಪ್ರಸಿದ್ಧವಾಗಿದೆ. ವೈಯಾಕರಣರೂ, ನಿರುಕ್ತಕಾರರೂ ಮತ್ತು ಮೀಮಾಂಸಕರೂ ಶಬ್ದವು ನಿತ್ಯವೆಂದು ಸ್ಥಾಪಿಸಿದ್ದಾರೆ. ವೇದವು ಅನಾದಿಯೆಂದೂ, ನಿತ್ಯವೆಂದೂ ಒಪ್ಪದೇ ಹೋದರೆ ಶಬ್ದಕ್ಕೆ ನಿತ್ಯತ್ವವೇ ಸಿದ್ಧಿಸದೇ ಹೋದೀತು. ಶಬ್ದವು ನಿತ್ಯವೆನ್ನುವುದು ವೈದಿಕ ಶಬ್ದವನ್ನವಲಂಬಿಸಿಯೇ ಸರಿ. ಆದ್ದರಿಂದಲೇ ಸಂಸ್ಕೃತ ಭಾಷೆಯೇ ನಿತ್ಯವೆಂದೂ, ಅಮರವಾಣಿಯೆಂದೂ ಸಿದ್ಧವಾಗುತ್ತದೆ. ಭಗವಾನ್ ಭರ್ತೃಹರಿಯು ವಾಕ್ಯಪದೀಯದಲ್ಲಿ ಸಂಸ್ಕೃತವನ್ನು ''**ದೈವೀವಾಕ್**'' ಎಂದು ಕರೆದಿದ್ದಾನೆ. ಅಲಂಕಾರಿಕನಾದ ದಂಡಿಯೂ ಸಹ ''**ಸಂಸ್ಕೃತಂ ನಾಮ ದೈವೀವಾಗನ್ವಾಖ್ಯಾತಾ ಮಹರ್ಷಿಭಿಃ**'' ಎಂದಿದ್ದಾನೆ. ಭರ್ತೃಹರಿಯ ಇನ್ನೊಂದು ಮಾತು ಗಮನಾರ್ಹವಾದದ್ದು. ಆತನು ಬ್ರಹ್ಮಕಾಂಡದಲ್ಲಿ ''ಮಹರ್ಷಿಗಳ ದಿವ್ಯ ಜ್ಞಾನವು ಪ್ರತ್ಯಕ್ಷಜ್ಞಾನಕ್ಕಿಂತ ಬೇರೆಯಲ್ಲ. ಅವರ ದಿವ್ಯ ಜ್ಞಾನವೂ ಸಹ ವೇದದಿಂದಲೇ ಬಂದದ್ದು'' ಎಂದಿದ್ದಾನೆ. ''**ಪ್ರತ್ಯಕ್ಷಾನ್ನ ವಿಶಿಷ್ಯತೇ - ತದಪ್ಯಾಗಮ ಪೂರ್ವಕಂ**'' ಎಂಬ ಮಾತುಗಳಿಂದ

**''ನ ಚಾಗಮಾದೃತೇ ಧರ್ಮಸ್ತರ್ಕೇಣ ವ್ಯವತಿಷ್ಠತೇ''** ವೇದದ ಹೊರತಾಗಿ ಧರ್ಮದ ಸ್ವರೂಪವನ್ನು ತರ್ಕದಿಂದ ನಿರ್ಣಯಿಸಲು ಶಕ್ಯವೇ ಅಲ್ಲ - ಎನ್ನುವುದೂ ಆತನ ಹೇಳಿಕೆಯಾಗಿದೆ. ಆದ್ದರಿಂದಲೇ **''ಧರ್ಮಬ್ರಹ್ಮಣೀ ವೇದೈಕವೇದ್ಯೇ''**= 'ಧರ್ಮ, ಬ್ರಹ್ಮ - ಇವೆರಡರ ಸ್ವರೂಪವನ್ನು ವೇದದಿಂದ ಮಾತ್ರವೇ ತಿಳಿಯಲು ಸಾಧ್ಯ' ಎಂದು ಪ್ರಾಚೀನರ ಸೂಕ್ತಿ ಇದೆ.

೧೨. **'ವೇದಾಂತಕೃದ್ ವೇದವಿದೇವ ಚಾಹಂ'** = ' ಉಪನಿಷತ್ತುಗಳನ್ನು ನಿರ್ಮಿಸಿದವನು ನಾನು. ವೇದಾರ್ಥವನ್ನು ಬಲ್ಲವನು ನಾನೊಬ್ಬನೇ' ಎಂದು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ನುಡಿದಿದ್ದಾನೆ. **'ವೇದ್ಯಂ ಪವಿತ್ರಮೋಂಕಾರಃ ಋಕ್ ಸಾಮ ಯಜುರೇವ ಚ'**- ಎಂಬುದೂ ಶ್ರೀಕೃಷ್ಣನ ಹೇಳಿಕೆಯೇ. ಪವಿತ್ರವಾದ ಜ್ಞೇಯ ವಸ್ತು ನಾನು. **'ಓಂಕಾರ, ಋಕ್, ಯಜಸ್, ಸಾಮ'** - ಇವುಗಳೂ ನಾನೇ ಎಂದು ಅರ್ಥ. ಇದನ್ನು ಬರೆದವರೂ ವೇದವ್ಯಾಸರೇ! ಹುಲ್ಲು ಕಡ್ಡಿಯಂತಹ ಮಾನವನ ಕೃತಿಗೆ ಇಷ್ಟು ಗೌರವ ದೊರಕೀತೆ ಎಂಬುದನ್ನು ಸಾರಗ್ರಾಹಿಗಳಾದ ವಿಚಾರಶೀಲರು ಆಲೋಚಿಸಬೇಕು.

ಇನ್ನೊಂದು ಮಾತು - ದೇವರು ಇದ್ದಾನೆಂದು ನಂಬಿರುವ ಆಸ್ತಿಕರಿಗೆ ಹೇಳತಕ್ಕದ್ದಿದು. ಸರ್ವಜ್ಞನೂ ಸರ್ವಶಕ್ತನೂ ಆದ ಭಗವಂತನು ಮಾತು ಬಾರದ ಮೂಕನಾಗಿದ್ದನೆ? ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುವ ಆತನಿಗೆ, ಸ್ವತಃ ಆಲೋಚಿಸುವುದಕ್ಕಾಗಿ ಒಂದು ಭಾಷೆ ಇದ್ದೇ ಇರಬೇಕು. ಸರ್ವಜ್ಞನಾದ್ದರಿಂದ ಸರ್ವಭಾಷೆಗಳೂ ತಿಳಿಯುತ್ತಿದ್ದವು ಎಂಬುದು ಸಮಾಧಾನವಲ್ಲ. ಈಗ ಜಗತ್ತಿನಲ್ಲಿರುವ ಸಾವಿರಾರು ಭಾಷೆಗಳು ಮನುಷ್ಯ ಕಲ್ಪಿತವಾದ ಉಪಭಾಷೆಗಳು. ಬಹುಭಾಷೆಗಳನ್ನು ಬಲ್ಲ ಮನುಷ್ಯನೂ ಸಹ ಸ್ವತಃ ಆಲೋಚಿಸುವುದು ಯಾವುದೋ ಒಂದೇ ಭಾಷೆಯಲ್ಲಿ. **'ಸ ಭೂರಿತಿ ವ್ಯಾಹರತ್, ಭುವಮಸೃಜತ'** ಎಂದು ಶಬ್ದ ಪೂರ್ವಕವಾದ ಸೃಷ್ಟಿಯನ್ನೇ ವೇದವು ಘೋಷಿಸುತ್ತದೆ. ಈಶ್ವರನ ಆ ಭಾಷೆ ವೇದ ಭಾಷೆಯೇ ಹೊರತು ಇನ್ನೊಂದಲ್ಲ. ಆದ್ದರಿಂದಲೇ ಸಂಸ್ಕೃತವು ದೇವ ಭಾಷೆ, ಅಮರವಾಣಿಯೆಂದು ವಿಖ್ಯಾತವಾಗಿದೆ. ಇದಕ್ಕಿಂತ ಪ್ರಾಚೀನತರವಾದ ಭಾಷೆ ಇನ್ನೊಂದು ಇಲ್ಲದಿರುವುದು ಇದನ್ನು ಸೂಚಿಸುತ್ತದೆ. ಆದಿಯಲ್ಲಿ ಮಾನವನು ಕಲ್ಪಿಸಿಕೊಂಡ ಭಾಷೆ ಇದಾಗಿದ್ದರೆ, ಕೇವಲ ವ್ಯಾವಹಾರಿಕವಾದ ಕೆಲವೇ ಶಬ್ದಗಳು ಇದರಲ್ಲಿರಬೇಕಾಗಿತ್ತು. ಮತ್ತು ಉಚ್ಚಾರಣೆಗೆ ಸುಲಭವಾದ ಪದಗಳಿಂದ ಕೂಡಿದ ಸರಳವಾಕ್ಯ ರಚನೆ ಇರಬೇಕಾಗಿತ್ತು. ಆದರೆ ಸಂಸ್ಕೃತದಲ್ಲಿ ಅಪಾರವಾದ ಶಬ್ದ ಸಾಗರವೇ ಇದೆ. ಒತ್ತಕ್ಷರಗಳಿಂದಲೂ ಮಹಾಪ್ರಾಣಗಳಿಂದಲೂ ಘಟಿತವಾದ ಕ್ಲಿಷ್ಟವಾಕ್ಯ ರಚನೆ ವೇದದಲ್ಲಿಯೇ ತುಂಬಿಕೊಂಡಿದೆ. ಅಧಿಯಜ್ಞ, ಅಧಿದೈವ, ಅಧ್ಯಾತ್ಮ ಪರವಾದ ಮೂರು ಬಗೆಯ

ಅರ್ಥಗಳು ವೇದ ಮಂತ್ರಗಳಿಗಿವೆಯೆಂದು ಯಾಸ್ಕರು ಹೇಳುತ್ತಾರೆ.

ವೇದವು ಸರ್ವಜ್ಞವಾದದ್ದೆಂದು ಶ್ರೀ ಶಂಕರ ಭಗವತ್ಪಾದರೇ ಉದ್ಗರಿಸಿದರು. ಇಂತಹ ಮೆಚ್ಚುಗೆಯನ್ನು ಆದಿಮಾನವನ ಲಾವಣಿ ಪದ್ಯಗಳು ಗಳಿಸಬಲ್ಲವೆ? ಪೂರ್ವಗ್ರಹವಿಲ್ಲದೆ ಬುದ್ಧಿಜೀವಿಗಳೋ, ಬುದ್ಧಿವಂತ ಜೀವಿಗಳೋ ವಿಚಾರಮಾಡಲಿ.

ಮನುಷ್ಯನು ವ್ಯವಹಾರಕ್ಕಾಗಿ ನಿರ್ಮಿಸಿಕೊಂಡ ಭಾಷೆಯಲ್ಲಿ ಒಂದು ವಸ್ತುವನ್ನು ಸೂಚಿಸಲು ಎಷ್ಟು ಶಬ್ದಗಳಿದ್ದಾವು? ಒಂದು ವಸ್ತುವಿಗೆ ಒಂದು ಶಬ್ದ ಸಾಕು. ಅಥವಾ ಕಾಲಕ್ರಮದಲ್ಲಿ ಮೂರು ನಾಲ್ಕು ಶಬ್ದಗಳು ಹುಟ್ಟಿಕೊಳ್ಳಬಹುದು. ಯಾಸ್ಕರಿಗಿಂತ ಪೂರ್ವದಲ್ಲಿಯೇ ರಚಿತವಾಗಿದ್ದ ವೈದಿಕ ನಿಘಂಟುವಿನಲ್ಲಿ ಒಂದು ವಸ್ತುವನ್ನು ಸೂಚಿಸಲು ಎಷ್ಟೆಷ್ಟು ಪರ್ಯಾಯ ಪದಗಳಿದ್ದವೆಂಬುದನ್ನು ಯಾಸ್ಕರೇ ಹೀಗೆ ಹೇಳಿದ್ದಾರೆ -

೧) ನೀರೆಂಬ ಅರ್ಥದಲ್ಲಿ ಪರ್ಯಾಯ ಪದಗಳು - ೧೦೧, ೨) ಮೋಡವೆಂಬ ಅರ್ಥದಲ್ಲಿರುವ ಶಬ್ದಗಳು - ೩೦, ೩) ವಾಕ್ ಎಂಬ ಅರ್ಥದಲ್ಲಿರುವ ಶಬ್ದಗಳು - ೫೭, ೪) ಕುದುರೆ ಎಂಬ ಅರ್ಥದಲ್ಲಿ -೨೬, ೫) ಅನ್ನವೆಂಬ ಅರ್ಥದಲ್ಲಿ ೨೮, ೬) ಮನುಷ್ಯ ಎಂಬ ಅರ್ಥದಲ್ಲಿ - ೨೫, ೭) ಬೇಗನೆ ಎಂಬಅರ್ಥದಲ್ಲಿ - ೨೬, ೮) ಬೆರಳು ಎಂಬ ಅರ್ಥದಲ್ಲಿ - ೨೨, ಇವು ಕೆಲವೇ ಉದಾಹರಣೆಗಳು ಮಾತ್ರ.

ಇನ್ನು ಒತ್ತಕ್ಷರ, ಮಹಾಪ್ರಾಣ, ವಿಚಿತ್ರ ವಾಕ್ಯ ರಚನೆ ಇವುಗಳಿಗೆ ಉದಾಹರಣೆಗಳನ್ನು ಕೊಡುತ್ತ ಹೋದರೆ ಮುದ್ರಣಕಾರರಿಗೆ ತುಂಬ ಕಷ್ಟವನ್ನು ಒಡ್ಡಿದಂತಾಗುವುದು! ವಿಚಾರ ಶೀಲರಿಗೆ ಇಷ್ಟು ಸಾಕು. ಪೂರ್ವಗ್ರಹಗಳಿಂದ ತುಂಬಿದ ಅವಿಚಾರಿಗಳಿಗೆ ಎಷ್ಟು ಹೇಳಿದರೂ ''ಗೋರ್ಕಲ್ಲ ಮೇಲೆ ಮಳೆ ಸುರಿದಂತೆ'' ಆಗುವುದು.

**ಋಗಾದಿವೇದಾಃ ಸರ್ವೇಽಪಿ ಧ್ರುವಮೀಶ್ವರನಿಃಸೃತಾಃ ।**
**ತದುದ್ಭವಾ ಸಂಸ್ಕೃತೇಯಂ ನಿತ್ಯಂ ಗೀರ್ವಾಣಭಾಷಿತಾ ॥**
**ತದ್ಯೋನಯಃ ಪ್ರಾಕೃತಾದ್ಯಾಃ ವಿಶ್ವಂ ವ್ಯಾಪ್ಯಾವತಸ್ಥಿರೇ ॥**

# ೭ - ನೀತಿ ಸಂಹಿತೆ

ಇದುವರೆಗಿನ ಬರಹಗಳಿಂದ ಓದುಗರಲ್ಲಿ ಕೆಲವರಿಗಾದರೂ ಮನುಸ್ಮೃತಿಯ ವಿಷಯದಲ್ಲಿದ್ದಿರಬಹುದಾದ ಅನಾದರ, ಅಸಡ್ಡೆ, ಉಪೇಕ್ಷೆಗಳು ದೂರವಾಗಿರಬಹುದೆಂದು ನಿರೀಕ್ಷಿಸುತ್ತೇನೆ. ಪ್ರಾಯೇಣ ಜನತೆಯು ಧರ್ಮಶಾಸ್ತ್ರದ ವಿಚಾರವಾಗಿ ತಳೆದಿರುವ ಅನಾದರ ಬುದ್ಧಿಗೆ ಇಂದಿನ ವಿದ್ಯಾಭ್ಯಾಸ ಪದ್ಧತಿಯೇ ಕಾರಣ ವಾಗಿರುವುದರಿಂದ ಜನರನ್ನು ದೂರಿ ಫಲವಿಲ್ಲ. ಶಾಲಾ ಕಾಲೇಜುಗಳಲ್ಲಿ ಸಾಮಾನ್ಯ ನೀತಿಪಾಠಕ್ಕೇ ಸೊನ್ನೆಯಾಗಿರುವಾಗ ಅಲ್ಲಿ ಕಲಿತ ವಿದ್ಯಾವಂತರಿಗೆ ಧರ್ಮವೆಂದರೆ ಯಾವ ಅರ್ಥವಾದೀತು? ಮಡಿ - ಮಡಿ ಎಂದು ಕೂಗಾಡುವ ಹಾರುವರ ಹಾರಾಟವೇ ಧರ್ಮವೆಂದು ಅವರು ತಿಳಿದಿದ್ದರೆ ಅಚ್ಚರಿಯೇನು?

ಭಾರತವು ಅಧ್ಯಾತ್ಮ ಪ್ರಧಾನವಾದ ರಾಷ್ಟ್ರ. ಆತ್ಮ ದರ್ಶನವೇ ಜೀವಿತದ ಪರಮೋದ್ದೇಶವೆಂದು ಸಾರಿದ ರಾಷ್ಟ್ರ. ಭಾರತೀಯರು ನಿರ್ಮಿಸಿದ ಸಕಲ ಗ್ರಂಥಗಳೂ ಆತ್ಮವಸ್ತುವಿನ ಕಡೆಗೆ ಕೈತೋರಿಸತಕ್ಕವು. ಕೇವಲ ಲೌಕಿಕ ಗ್ರಂಥಗಳೆಂದು ಕಾಣುವ ವ್ಯಾಕರಣ, ಕಾವ್ಯ, ಸಂಗೀತ, ನಾಟ್ಯ, ವೈದ್ಯಕ ಮುಂತಾದವೂ ಸಹ ಆತ್ಮ ದರ್ಶನಕ್ಕೆ ನೆರವಾದವೆಂಬುದು ಭಾರತೀಯರ ದೃಷ್ಟಿ. ''**ಏಕಃ ಶಬ್ದಃ ಸಮ್ಯಗ್ ಜ್ಞಾತಃ ಸುಷ್ಠು ಪ್ರಯುಕ್ತಃ ಸ್ವರ್ಗೇಲೋಕೇ ಕಾಮಧುಗ್ ಭವತಿ**'' - ''ಒಂದು ಶಬ್ದದ ಸ್ವರೂಪವನ್ನು ಸರಿಯಾಗಿ ತಿಳಿದು ವಿಧ್ಯನುಸಾರವಾಗಿ ಪ್ರಯೋಗಿಸಿದರೆ ಸ್ವರ್ಗ ಲೋಕದಲ್ಲಿ ಇಷ್ಟಾರ್ಥವನ್ನು

ಕೊಡುವ ಕಾಮಧೇನುವಾಗುತ್ತದೆ'' ಎಂದು ವ್ಯಾಕರಣ ಮಹಾಭಾಷ್ಯಕಾರರು ಹೇಳುತ್ತಾರೆ. ಭರ್ತೃಹರಿಯು **''ಇಯಂ ಸಾ ಮೋಕ್ಷಮಾಣಾನಾಮಜಿಹ್ಮಾ ರಾಜಪದ್ಧತಿಃ''** ಈ ವ್ಯಾಕರಣ ಶಾಸ್ತ್ರವು ಮುಮುಕ್ಷುಗಳಿಗೆ ನೇರವಾದ ರಾಜಮಾರ್ಗ ಎನ್ನುತ್ತಾನೆ. 'ಕಾವ್ಯಾನಂದವು ಬ್ರಹ್ಮಾನಂದ ಸೋದರ' ಎಂದು ಆಲಂಕಾರಿಕರ ಹೇಳಿಕೆ. ಶಾಂತರಸಾನುಭಾವಕ್ಕೆ ಸಜ್ಜುಗೊಳಿಸುವುದು ಕಾವ್ಯ ಸಂಹಿತೆಯ ಧ್ಯೇಯವೆಂದು ಅವರ ನಿರ್ಣಯ. ನಾದಸ್ವರೂಪನಾದ ಆತ್ಮನ ಉಪಾಸನೆ ಸಂಗೀತದಿಂದ ಲಭಿಸುತ್ತದೆ. ನಾಟ್ಯವು ವೇದಾರ್ಥವನ್ನು ಪ್ರತಿಪಾದಿಸುವ ಮನೋರಂಜನೆ. ಭರತಾಚಾರ್ಯನು ಋಗ್ವೇದದಿಂದ ಪಾಠ್ಯವನ್ನೂ, ಯಜುರ್ವೇದದಿಂದ ಅಭಿನಯವನ್ನೂ, ಸಾಮವೇದದಿಂದ ಸಂಗೀತವನ್ನೂ ತೆಗೆದುಕೊಂಡು ನಾಟ್ಯವೇದವನ್ನು ರಚಿಸಿದನೆಂದೂ, ವೇದಾರ್ಥವನ್ನು ತಿಳಿದವರಿಗಾಗಿ ನಾಟ್ಯ ಶಾಸ್ತ್ರವನ್ನು ರಚಿಸಲಾಯಿತೆಂದೂ ನಾಟ್ಯ ಗ್ರಂಥದಲ್ಲಿ ಹೇಳಿದೆ. **''ಶರೀರ ಮಾದ್ಯಂ ಖಲು ಧರ್ಮಸಾಧನಂ''** ಎಂಬುದಕ್ಕಾಗಿ ಆರೋಗ್ಯಪಾಲನೆಯನ್ನು ಮಾಡಿಕೊಳ್ಳುವ ಉದ್ದೇಶದಿಂದ ಆಯುರ್ವೇದವು ರಚಿತವಾಯಿತು. ಧನುರ್ವೇದವು ಕ್ಷತ್ರಿಯನಿಗೆ ಧರ್ಮರಕ್ಷಣೆಗಾಗಿ ಆವಶ್ಯಕ. ಲಲಿತಕಲೆಗಳೂ ಸಹ ಪರಮಾರ್ಥ ದೃಷ್ಟಿಯಿಂದಲೇ ಹೊರಟವು. 'ಕಲಾ' ಶಬ್ದದಲ್ಲಿ 'ಕ' ಕಾರವು ಬ್ರಹ್ಮವಾಚಕ. 'ಲ' ಕಾರವು ಲಯ ವಾಚಕ. 'ಕಲಾ' ಎಂಬ ಅಕ್ಷರಗಳಲ್ಲಿ ಲಲಿತಾ ತ್ರಿಪುರ ಸುಂದರಿಯ ಸ್ವರೂಪವು ನಿರ್ದಿಷ್ಟವಾಗಿದೆಯೆಂದು ಪ್ರಪಂಚಸಾರ ಮುಂತಾದ ಗ್ರಂಥಗಳು ಪ್ರತಿಪಾದಿಸಿವೆ. ವರ್ಣಮಾಲೆಯು 'ಅಆಇಈ' ಎಂದು ಆರಂಭಿಸಿ 'ಸಹ' ಎಂದು ಮುಕ್ತಾಯವಾಗುತ್ತದೆ. ಆದಿಯಾದ 'ಅ' ಕಾರವನ್ನು ಅಂತ್ಯವಾದ 'ಹ'ಕಾರವನ್ನೂ ಸೇರಿಸಿದರೆ 'ಅಹಂ' ಎಂಬ ಶಬ್ದದ ನಿಷ್ಪತ್ತಿಯಾಗುತ್ತದೆ. **'ಅಹಂ ಬ್ರಹ್ಮಾಸ್ಮಿ'** ಎಂಬ ಮಹಾ ವಾಕ್ಯದಲ್ಲಿರುವ 'ಅಹಂ' ಎಂಬುದನ್ನು ಸಕಲ ಶಬ್ದಾತ್ಮಕವಾದ 'ಅಹಂ' ಎಂಬುದು ಪ್ರತಿಪಾದಿಸುತ್ತದೆ. ಅಹಂ - ಎಂಬುದೇ ವಿಶ್ವ. ಈ ಪ್ರಕಾರವಾದ ದೃಷ್ಟಿ ಭಾರತೀಯರದು.

ಹೀಗಿರುವಾಗ ಧರ್ಮಶಾಸ್ತ್ರದ ಉದ್ದೇಶವೇನೆಂಬುದನ್ನು ಬೇರೆಯಾಗಿ ಹೇಳಬೇಕಾದ್ದಿಲ್ಲ. **' ಯತೋಽಭ್ಯುದಯ ನಿಃಶ್ರೇಯಸಸಿದ್ಧಿಃ ಸ ಧರ್ಮಃ'** ವಿಷಯಾನಂದವು ಅಭ್ಯುದಯವಾದರೆ, ಬ್ರಹ್ಮಾನಂದವು ನಿಃಶ್ರೇಯಸವೆನಿಸುತ್ತದೆ. ಎಂತಹ ಅಭ್ಯುದಯ? ದೇಹಾತ್ಮವಾದಿಗಳಾದ ನಾಸ್ತಿಕರು ಬಯಸುವ ಕೇವಲ ವಿಷಯಾನಂದವಲ್ಲ. ಬ್ರಹ್ಮಾನಂದಕ್ಕೆ ಸೋಪಾನವಾದ ಅಭ್ಯುದಯ. ಚಾತುರ್ವರ್ಣ್ಯ ವಿಭಾಗವೂ ನಿಃಶ್ರೇಯಸದ ಶಿಖರಕ್ಕೇರುವ ನಾಲ್ಕು ಸೋಪಾನಪಂಕ್ತಿಯೆಂದು ತಿಳಿಯಬೇಕು. ಇದು ಧರ್ಮಶಾಸ್ತ್ರಕಾರರ ನಂಬಿಕೆ. ನಂಬಿಕೆಯಿಲ್ಲದವರಿಗೆ ಯಾವ ಶಾಸ್ತ್ರದಿಂದ ಯಾವ ಉಪಯೋಗವೂ ಇಲ್ಲ. ವಿಧಿ ನಿಷೇಧಗಳಿಲ್ಲದ ತೋಳಗಳಂತೆ ಅವರು ಯಥೇಚ್ಛವಾಗಿ

ಸಂಚರಿಸಬಹುದು. ವಿಧಿನಿಷೇಧಗಳಿರುವುದು ಶಾಸ್ತ್ರದಲ್ಲಿ ನಂಬಿಕೆಯುಳ್ಳವರಿಗಾಗಿ. ಶ್ರದ್ಧಾಭಕ್ತಿಗಳಿಗೆ ಕಟ್ಟುಬಿದ್ದವರು ಕ್ರಮವಾಗಿ ಮೇಲೇರಬಹುದು. ವಿಶ್ವಾಮಿತ್ರ, ವಿದುರ, ಧರ್ಮವ್ಯಾಧ - ಇವರೆಲ್ಲರೂ ಕ್ರಮವಾಗಿ ಮೇಲಕ್ಕೇರಿದ ಮಹಾನುಭಾವರು.

ಧರ್ಮಾರ್ಥಕಾಮಗಳೆಂಬ ತ್ರಿವರ್ಗದಲ್ಲಿ ಕಾಮವೆಂದರೆ ಪಂಚೇಂದ್ರಿಯಗಳಿಂದಾಗುವ ಸುಖವೆಂದು ತಿಳಿಯಬೇಕು. ಅವುಗಳಲ್ಲಿ ಬ್ರಾಹ್ಮಣನಿಗೆ ಧರ್ಮವು ಪ್ರಧಾನ. ಅರ್ಥಕಾಮಗಳು ಗೌಣ. ಕ್ಷತ್ರಿಯನಿಗೆ ಧರ್ಮಾರ್ಥ ಕಾಮಗಳೆಂಬ ಮೂರೂ ಸಮಪ್ರಧಾನಗಳು. ವೈಶ್ಯನಿಗೆ ಧರ್ಮವೂ ಗೌಣ. ಅರ್ಥಕಾಮಗಳು ಪ್ರಧಾನ. ಶೂದ್ರನಿಗೆ ಧರ್ಮಾರ್ಥಗಳೆರಡೂ ಗೌಣ. ಕಾಮವು ಪ್ರಧಾನ. ಇವನ್ನೇ ಗುಣಕರ್ಮಗಳಿಗೆ ಅನುರೋಧವಾಗಿ ತಿರುಗಿಸಿ ಹೇಳಿದರೂ, ಜನ್ಮವನ್ನು ಗಣಿಸದಿದ್ದರೂ, ಈ ಕಾಲದಲ್ಲಿ ಒಪ್ಪುತ್ತದೆ. ಧರ್ಮವನ್ನೇ ಪ್ರಧಾನವಾಗಿ ನಂಬಿದವನು ಬ್ರಾಹ್ಮಣ. ತ್ರಿವರ್ಗವನ್ನೂ ಸಮಪ್ರಮಾಣದಲ್ಲಿ ಬಯಸತಕ್ಕವನು ಕ್ಷತ್ರಿಯ. ಅರ್ಥಕಾಮಗಳಿಗೆ ಪ್ರಾಶಸ್ತ್ಯವನ್ನಿತ್ತವನು ವೈಶ್ಯ. ವಿಷಯ ಸುಖ ಪ್ರಧಾನವಾದವನು ಶೂದ್ರ. ಹೀಗೆ ಒಪ್ಪಿದಾಗ ಜಾತಿಯ ಪ್ರಶ್ನೆ ಏಳುವುದಿಲ್ಲ.

ಬ್ರಾಹ್ಮಣನಿಗೆ ಅರ್ಥವು (ಧನ) ಗೌಣವೆಂಬುದನ್ನು ಶಾಸ್ತ್ರವೇ ವ್ಯವಸ್ಥೆ ಮಾಡಿದೆ. ಅಧ್ಯಾಪನ, ಯಾಜನ, ಪ್ರತಿಗ್ರಹ - ಇವು ಮೂರೇ ಆತನಿಗೆ ಸಂಪಾದನೆಯ ವೃತ್ತಿಗಳು. ಅಧ್ಯಾಪನಕ್ಕೆ ಸರ್ಕಾರದಿಂದ ಸಂಬಳ ಬರುತ್ತಿರಲಿಲ್ಲ. ಸರ್ಕಾರೀ ಶಾಲೆಗಳೇ ಹಿಂದೆ ಇರಲಿಲ್ಲ. ಶಿಷ್ಯರು ಗುರುದಕ್ಷಿಣೆಯೆಂದು ಕೊಡುವುದೇ ಅಧ್ಯಾಪನದಿಂದ ಬರುವ ಆದಾಯ. ಭಿಕ್ಷೆ ಬೇಡಿ ಜೀವಿಸಬೇಕಾದ ಶಿಷ್ಯರು ಎಷ್ಟು ಗುರುದಕ್ಷಿಣೆಯನ್ನು ಕೊಟ್ಟಾರು? ಯಾಜನವೆಂದರೆ ಪೌರೋಹಿತ್ಯ. ಪುಣ್ಯಾತ್ಮರು ಕೊಡುವ ದಾನವೇ ಈತನ ಪಾಲಿಗೆ ಪ್ರತಿಗ್ರಹ.

ಭಿಕ್ಷಾವೃತ್ತಿಗಿಂತ ಅದೇನೂ ಅಧಿಕವಾದ್ದಲ್ಲ. ಸ್ನಾನ ಸಂಧ್ಯಾದಿಷಟ್ ಕರ್ಮಗಳನ್ನೂ ವೇದಾಧ್ಯಯನ ಪ್ರವಚನಗಳನ್ನೂ ಮಾಡುತ್ತಿದ್ದರೆ ಒಂದು ದಿನವೇ ಕಳೆದುಹೋಗುತ್ತದೆ. ಸಂಪಾದನೆಯ ದಾರಿ ಯಾವುದು? ರಾಜ್ಯಪಾಲನೆ, ರಾಜನಿಂದ ವೇತನವನ್ನು ಪಡೆಯುವ ಅಧಿಕಾರದ ವೃತ್ತಿ - ಇವೆರಡೂ ಕ್ಷತ್ರಿಯನಿಗೆ ಮೀಸಲು, ಕೃಷಿ, ವಾಣಿಜ್ಯ, ಪಶುಪಾಲನೆಗಳು ವೈಶ್ಯನಿಗೆ ಸೇರಿದವು. ಶ್ರಮದಿಂದ ಮಾಡುವ ಸೇವೆ, ನೇಯ್ಗೆ ಹೊಲಿಗೆ, ಬಡಗಿಯ ಕೆಲಸ, ಒಡವೆಗಳ ನಿರ್ಮಾಣ - ಮುಂತಾದ ಕಸುಬುಗಳೆಲ್ಲವೂ ಶೂದ್ರನಿಗೆ ಸೇರಿದವು. ಹೀಗಿರುವಾಗ ಬ್ರಾಹ್ಮಣನಿಗೆ ಧನ ಸಂಪಾದನೆಯ ಮಾರ್ಗವಾದರೂ ಯಾವುದು? ಧರ್ಮಶಾಸ್ತ್ರವನ್ನು ರಚಿಸಿದವರು ಬ್ರಾಹ್ಮಣನಿಗೆ ಉಳಿಸಿಕೊಟ್ಟ ಭಾಗ್ಯ

ಯಾವುದು? ಬ್ರಾಹ್ಮಣರು ರಚಿಸಿದರೆನ್ನಲಾಗುವ ಧರ್ಮಶಾಸ್ತ್ರದಲ್ಲಿ ಬ್ರಾಹ್ಮಣರು ತಮಗಾಗಿ ಯಾವ ಸ್ವಾರ್ಥವನ್ನು ಕಲ್ಪಿಸಿಕೊಂಡರು? ಧರ್ಮ, ಧರ್ಮ, ಧರ್ಮ - ಎಂದು ಹೇಳುತ್ತಲೇ ಪ್ರಾಣವನ್ನು ಬಿಡುವ ಸೌಭಾಗ್ಯವನ್ನಾದರೂ ಗಳಿಸಿಕೊಂಡರಲ್ಲವೆ? ಅವರೇ ಬಾಯಿಬಿಟ್ಟು ಹೀಗೆ ಹೇಳಿದ್ದಾರೆ-

**''ಬ್ರಾಹ್ಮಣಸ್ಯ ತು ದೇಹೋಽಯಂ ನೇಹ ಸೌಖ್ಯಾಯ ಕಲ್ಪತೇ ।**
**ಇಹ ಕ್ಲೇಶಾಯ ಮಹತೇ ಪ್ರೇತ್ಯಾಮುತ್ರ ಸುಖಾಯ ಚ॥''**

''ಬ್ರಾಹ್ಮಣನ ದೇಹವು ಇಲ್ಲಿ ಸುಖಕ್ಕಾಗಿ ಬಂದದ್ದಲ್ಲ. ಬದುಕಿರುವಾಗ ಮಹತ್ತರವಾದ ಕಷ್ಟವನ್ನು ಅನುಭವಿಸುವುದಕ್ಕಾಗಿಯೂ, ಸತ್ತಮೇಲೆ ಸ್ವರ್ಗದಲ್ಲಿ ಸುಖವನ್ನನುಭವಿಸುವುದಕ್ಕಾಗಿಯೂ ದೇಹ ಬಂದಿದೆ !'' ಇದರ ಮೇಲೆ ವ್ಯಾಖ್ಯಾನವು ಬೇಕಿಲ್ಲ. ಅನ್ಯ ಜಾತಿಯವರನ್ನು ತುಳಿಯುವುದಕ್ಕಾಗಿ ಬ್ರಾಹ್ಮಣರು ಧರ್ಮಶಾಸ್ತ್ರವನ್ನು ರಚಿಸಿಕೊಂಡಿದ್ದಾರೆ - ಎಂದು ಗಂಟಲು ಒಣಗುವಂತೆ ಕೂಗತಕ್ಕವರೂ, ಆ ವಿಷಯವನ್ನೇ ಕೈ ಸೋತು ಹೋಗುವಷ್ಟು ಬರೆಯತಕ್ಕವರೂ ತಮ್ಮ ಎದೆಯನ್ನೊಮ್ಮೆ ಮುಟ್ಟಿ ನೋಡಿಕೊಳ್ಳಲಿ.

ಇನ್ನು ಸರ್ವರಿಗೂ ಉಪಯುಕ್ತವೆನಿಸಿರುವ ಕ್ಷತ್ರಿಯ ಧರ್ಮದ ಕಡೆಗೆ ದೃಷ್ಟಿಯನ್ನು ಹರಿಸೋಣ. ಕ್ಷತ್ರಿಯನಿಗೆ ವೇದಾಧಿಕಾರವಿರುವುದರಿಂದ ಆತನಿಗೆ ವೇದೋಕ್ತಸಂಸ್ಕಾರಗಳೂ ನಿತ್ಯ ಕರ್ಮಾನುಷ್ಠಾನವೂ ಉಂಟು. ದಶರಥ ರಾಜನು ಅಗ್ನಿಹೋತ್ರವನ್ನಿಟ್ಟಿದ್ದನೆಂದೂ ಶ್ರೀರಾಮ ಲಕ್ಷ್ಮಣರು ವನವಾಸದಲ್ಲಿದ್ದಾಗಲೂ ಸ್ನಾನ ಸಂಧ್ಯಾವಂದನಾದಿಗಳನ್ನು ಆಚರಿಸುತ್ತಿದ್ದರೆಂದೂ ವಾಲ್ಮೀಕಿ ರಾಮಾಯಣದಿಂದ ತಿಳಿದುಬರುತ್ತದೆ. ತಾರಾಪೀಡನೆಂಬ ರಾಜನು ತನ್ನ ಮಗನಾದ ಚಂದ್ರಾಪೀಡನನ್ನು ಗುರುಕುಲದಲ್ಲಿಟ್ಟು ವಿದ್ಯಾಭ್ಯಾಸ ಮಾಡಿಸುತ್ತಿದ್ದನೆಂದೂ ಆಗಾಗ ಪತ್ನೀ ಸಮೇತನಾಗಿ ಗುರುಕುಲಕ್ಕೆ ಹೋಗಿ ಮಗನನ್ನು ನೋಡಿಕೊಂಡು ಬರುತ್ತಿದ್ದನೆಂದೂ ಬಾಣಭಟ್ಟನು 'ಕಾದಂಬರೀ' ಎಂಬ ತನ್ನ ಗದ್ಯಕಾವ್ಯದಲ್ಲಿ ಬರೆದಿದ್ದಾನೆ. ಕ್ಷತ್ರಿಯರು ರಾಜಾಧಿಕಾರದಲ್ಲಿ ನಿಯುಕ್ತರಾದ್ದರಿಂದ ಯುದ್ಧಾದಿಕಾರ್ಯಗಳಲ್ಲಿ ಪ್ರಸಕ್ತರಾಗುವುದು ಅನಿವಾರ್ಯವಾಗಿತ್ತು. ಕಾಲದೇಶ ನಿಮಿತ್ತಗಳ ಭೇದದಿಂದ ಅವರಿಗೆ ಧಾರ್ಮಿಕ ವಿಧಿಯನ್ನಾಚರಿಸುವುದು ಕಠಿಣವಾದ್ದರಿಂದ ಆಚರಣೆಯ ಕಡ್ಡಾಯವು ಪರಿಮಿತವಾಗಿದ್ದಿರಬೇಕು. ಸರಿಯಾದ ಶಾಸ್ತ್ರವಚನಗಳು ದೊರೆಯುವುದಿಲ್ಲ. ಕ್ಷತ್ರಿಯರೆಲ್ಲರೂ ರಾಜರಾಗಲು ಶಕ್ಯವಿಲ್ಲವಾದ್ದರಿಂದ, ಸೇನಾಪತಿಗಳೂ ಸೈನಿಕರೂ ಸರ್ಕಾರದ ಅಧಿಕಾರಿಗಳೂ ಪ್ರಾಯಶಃ ಕ್ಷತ್ರಿಯ ಜಾತಿಯವರಾಗಿರುತ್ತಿದ್ದರೆಂದು ಊಹಿಸಬಹುದು.

ಮನುಸ್ಮೃತಿಯ ಸಪ್ತಮಾಧ್ಯಾಯದಲ್ಲಿ ರಾಜಧರ್ಮಗಳ ವಿಚಾರ ಬಂದಿದೆ. ಇದರಲ್ಲಿ ೨೨೬ ಶ್ಲೋಕಗಳಿವೆ. ಈ ಅಧ್ಯಾಯದಲ್ಲಿ ಮುಖ್ಯವಾಗಿ ರಾಜನ ಕರ್ತವ್ಯಗಳನ್ನೂ ಪರಕೀಯರ ಭಯವನ್ನೂ ತಪ್ಪಿಸಿ ತನ್ನ ರಾಜ್ಯದ ವ್ಯವಸ್ಥೆಯನ್ನು ಕಾಪಾಡಿಕೊಳ್ಳುವ ವಿಧಾನ ಬಂದಿದೆ. ಅನಂತರ ಅಷ್ಟಾಮಾಧ್ಯಾಯದಲ್ಲಿ ಪ್ರಜೆಗಳಲ್ಲಿಯೇ ಹುಟ್ಟುವ ಕಲಹಾದಿನ್ಯಾಯ ವ್ಯವಹಾರಗಳನ್ನು ಬಗೆಹರಿಸುವ ಕ್ರಮವು ಬಂದಿದೆ. ೪೨೦ ಶ್ಲೋಕಗಳಿವೆ. ಇವೆಲ್ಲವನ್ನೂ ಸೇರಿಸಿ ರಾಜನೀತಿ ಪ್ರಕರಣವೆನ್ನಬಹುದು. ಹಿಂದಿನ ರಾಜ್ಯ ಪದ್ಧತಿಗೂ, ಇಂದಿನ ರಾಜ್ಯಪದ್ಧತಿಗೂ ಹೋಲಿಕೆಯಿಲ್ಲದಷ್ಟು ವ್ಯತ್ಯಾಸಗಳಾಗಿದ್ದರೂ ಪ್ರಜೆಗಳ ಕ್ಷೇಮಾಭಿವೃದ್ಧಿಯ ದೃಷ್ಟಿಯಿಂದ ರಾಜ್ಯ ವ್ಯವಸ್ಥೆಯೂ ರಾಜ್ಯಾಧಿಕಾರವನ್ನು ನಡೆಸತಕ್ಕವರ ವರ್ತನೆಯೂ ಹೇಗಿರಬೇಕೆಂಬ ಮೂಲತತ್ತ್ವವು ಸರ್ವಕಾಲದಲ್ಲಿಯೂ ಸಮವಾಗಿರುತ್ತದೆ. ಈಗ ರಾಷ್ಟ್ರದ ಎಲ್ಲ ಪ್ರಜೆಗಳಿಗೂ ಮತವನ್ನು ಚಲಾಯಿಸುವ ಅಧಿಕಾರವಿರುವುದರಿಂದ ಪರೋಕ್ಷವಾದರೂ ಪ್ರಭಾವಶೀಲತೆ ಅಲ್ಪವಾದರೂ ಮತದಾರರು ಮನುವಿನ ವಿಸ್ಮಯಕರವಾದ ಜ್ಞಾನವನ್ನು ನೀತಿ ಸಂಹಿತೆಯನ್ನು ಗ್ರಹಿಸುವುದು ಅತ್ಯಾವಶ್ಯಕವೆನಿಸಿದ್ದರಿಂದ ಮುಂದಿನ ಲೇಖನಗಳು ಈಗ ಪ್ರಸ್ತುತವಾಗಿವೆಯೆಂದು ತಿಳಿಯಬೇಕು.

## ರಾಜನೀತಿ ಸಂಹಿತೆ

ರಾಜ್ಯವನ್ನಾಳುತ್ತ ಪ್ರಜಾಪಾಲನೆ ಮಾಡುವುದು ಕ್ಷತ್ರಿಯನ ಧರ್ಮವೆಂದು ಮನು ಹೇಳುತ್ತಾನೆ. ರಾಜತ್ವವು ವಂಶ ಪರಂಪರೆಯಿಂದ ಮುಂದುವರಿಯುವುದಕ್ಕೆ ಆತನು ಯಾವ ಆಕ್ಷೇಪವನ್ನೂ ಎತ್ತಿಲ್ಲ. ರಾಜನು ಧರ್ಮನಿಷ್ಠನಾಗಿದ್ದು ಪ್ರಜಾರಂಜನ ತತ್ಪರನಾಗಿರಬೇಕೆಂಬುದನ್ನು ಮಾತ್ರ ಆಗ್ರಹದಿಂದ ಪ್ರತಿಪಾದಿಸುತ್ತಾನೆ. ರಾಜನು ತನ್ನ ಮಗನಿಗೋ ತಮ್ಮನಿಗೋ ರಾಜ್ಯಾಧಿಕಾರವನ್ನು ಹಸ್ತಾಂತರಿಸುವಾಗ ಪ್ರಜೆಗಳ ಅಭಿಪ್ರಾಯವನ್ನು ತಿಳಿದುಕೊಳ್ಳುತ್ತಿದ್ದಾನೆಂದು ಊಹಿಸಬಹುದು. ಅಂತೆಯೇ ದಶರಥನು ತನ್ನ ವಾರ್ಧಕ್ಯದ ನಿಮಿತ್ತದಿಂದ ಶ್ರೀರಾಮನಿಗೆ ಯುವರಾಜ ಪಟ್ಟವನ್ನೀಯಲು ಸಂಕಲ್ಪಿಸಿದಾಗ ನಗರದ ಪ್ರಜೆಗಳನ್ನು ಕರೆದು ಸಭೆ ಸೇರಿಸಿ ಅವರ ಒಪ್ಪಿಗೆಯನ್ನು ಪಡೆದನೆಂದು ವಾಲ್ಮೀಕಿ ರಾಮಾಯಣದಲ್ಲಿ ವರ್ಣಿತವಾಗಿದೆ. ರಾಜನಂತೆ ಮಂತ್ರಿಯೂ ಸಹ ವಂಶಪರಂಪರೆಯಿಂದ ಆಗುತ್ತಿದ್ದನೆಂದೂ ಪಟೇಲ, ಶ್ಯಾನುಭೋಗರಂತೆ ಮಂತ್ರಿಯಾಗುವುದು ಜನ್ಮತಃ ಪ್ರಾಪ್ತವಾದ ಅಧಿಕಾರವೆಂದೂ ತಿಳಿದುಬರುತ್ತದೆ. ಯಾವಾತನು ಪ್ರಜೆಗಳನ್ನು ಪಾಲಿಸದೆ ಮನಬಂದಂತೆ ಉದ್ಧತನಾಗಿ ನಡೆಯುತ್ತಿದ್ದನೋ ಅವನನ್ನು ಪ್ರಜೆಗಳೇ ರಾಜ್ಯದಿಂದ ಚ್ಯುತಿಗೊಳಿಸುತ್ತಿದ್ದರೆಂದೂ

ಹೇಳಬಹುದು. ವೇನರಾಜನೇ ಇದಕ್ಕೆ ಉದಾಹರಣೆ. ಅವನ ದುಷ್ಟತನದಿಂದ ಕಂಗಾಲಾದ ಪೌರರು ವೇನನನ್ನು ಕೊಂದುಬಿಟ್ಟರೆಂದು ಭಾರತದಲ್ಲಿ ವರ್ಣನೆ ಇದೆ.

ರಾಜಪ್ರಭುತ್ವ ಉತ್ತಮವೆ? ಪ್ರಜಾಪ್ರಭುತ್ವವೆ? ಎಂಬ ವಿಚಾರದಲ್ಲಿ ಪ್ರಸ್ತುತವಲ್ಲದಿದ್ದರೂ ಪ್ರಾಸ್ತಾವಿಕವಾಗಿ ಎರಡು ಮಾತುಗಳನ್ನಾಡಬಹುದು. ಪೂರ್ವಕಾಲದಲ್ಲಿ ಕ್ಷತ್ರಿಯರು ಧರ್ಮಭೀರುಗಳಾಗಿದ್ದರು. ತಮ್ಮ ತಂದೆಗೆ, ತಮ್ಮ ವಂಶಕ್ಕೆ ಕೆಟ್ಟ ಹೆಸರು ಬರಬಾರದೆಂಬ ವಂಶಾಭಿಮಾನವಿತ್ತು. ಈ ಎರಡು ಭೀತಿಗಳಿಂದ ಅವರು ಪ್ರಜಾ[illegible]ಡಕರಾಗದೆ ಯಥಾಶಕ್ತಿಯಾಗಿ ಪ್ರಜೆಗಳ ಯೋಗಕ್ಷೇಮಗಳನ್ನು ಸರಿಯಾಗಿಯೇ ನೋಡಿಕೊಳ್ಳುತ್ತಿದ್ದರೆಂದು ಹೇಳಬಹುದಾಗಿದೆ. ಜರಾಸಂಧ, ಶಿಶುಪಾಲ, ದುರ್ಯೋಧನ ಮುಂತಾದವರ ದುಷ್ಟತನವೇನಿದ್ದರೂ ಪರಕೀಯರ ಮೇಲೇ ಹೊರತು ತಮ್ಮವರೇ ಆದ ಪ್ರಜೆಗಳ ಮೇಲಲ್ಲ. ದುರ್ಯೋಧನನು ತನ್ನ ಪ್ರಜೆಗಳನ್ನು ತುಂಬ ವಿಶ್ವಾಸದಿಂದ ಪಾಲಿಸುತ್ತ ಅವರೆಲ್ಲರ ಪ್ರೀತಿಗೆ ಪಾತ್ರನಾಗಿದ್ದನೆಂದು ಮಹಾಕವಿ ಭಾರವಿ ತನ್ನ ಕಿರಾತಾರ್ಜುನೀಯವೆಂಬ ಮಹಾಕಾವ್ಯದಲ್ಲಿ ವರ್ಣಿಸಿದ್ದಾನೆ. ಪ್ರಜಾಪ್ರಭುತ್ವದಿಂದಾಗುವ ಸತ್ಫಲವೋ ದುಷ್ಫಲವೋ ಎಲ್ಲವೂ ಈಗ ಅನುಭವವೇದ್ಯವಾಗಿದೆ. ಮನುಸ್ಮೃತಿಯಲ್ಲಿ ಹೇಳಿದ ರಾಜಧರ್ಮದ ಉಪದೇಶವು ರಾಜ್ಯವನ್ನಾಳುವ ಆಡಳಿತಗಾರರಿಗೆ ಸಂಬಂಧಿಸಿದ್ದು. ಆಡಳಿತಗಾರರು ರಾಜರಾಗಿರಲಿ ಅಥವಾ ಪ್ರಜೆಗಳಿಂದ ಆರಿಸಲ್ಪಟ್ಟು ಪ್ರಭುಗಳಾಗಿರಲಿ, ಉಭಯರಿಗೂ ಅನ್ವಯಿಸುವ ಉಪದೇಶಗಳಿವು. ಆದ್ದರಿಂದ ಮನುಬೋಧಿತ ರಾಜಧರ್ಮವು ಈಗಲೂ ಪ್ರಸ್ತುತ.

ದಶರಥನಿಗೆ ವಸಿಷ್ಠ, ವಾಮದೇವ ಮುಂತಾದ ಎಂಟುಮಂದಿ ಋಷಿಗಳು ರಾಜನೀತಿಯನ್ನು ಬೋಧಿಸುವ ಮಂತ್ರಿಗಳಾಗಿದ್ದರು. ಸುಮಂತ್ರ, ಅಶೋಕ ಮುಂತಾದ ಎಂಟು ಮಂದಿ ಕಾರ್ಯನಿರ್ವಾಹಕರಾದ ಮಂತ್ರಿಗಳಾಗಿದ್ದರು. ಹೀಗೆ ಮಂತ್ರಿಗಳಲ್ಲಿ ರಾಜನೀತಿಯನ್ನು ನಿರ್ಧರಿಸಿ ಸಲಹೆ ಮಾಡತಕ್ಕವರೆಂದೂ ಅನಂತರ ರಾಜಾಜ್ಞೆಯಂತೆ ಕಾರ್ಯವನ್ನು ನಿರ್ವಹಿಸತಕ್ಕವರೆಂದೂ ದ್ವೈವಿಧ್ಯ (Advisers and Executives) ಇದ್ದಿತೆಂದೂ ಗೊತ್ತಾಗುತ್ತದೆ.

ಸಕಲ ಪ್ರಜೆಗಳನ್ನೂ ಧರ್ಮಮಾರ್ಗದಿಂದ ರಕ್ಷಿಸುವುದಕ್ಕಾಗಿ ಬ್ರಹ್ಮತೇಜೋಮಯವಾದ ದಂಡನೆಯೆಂಬ ಶಕ್ತಿಯನ್ನು ಭಗವಂತನು ನಿರ್ಮಿಸಿ ರಾಜನಿಗೆ ಕೊಟ್ಟಿರುತ್ತಾನೆ. ಯಾವ ಅಪರಾಧಕ್ಕೆ ಯಾವ ದಂಡನೆಯನ್ನು ವಿಧಿಸಬೇಕೆಂಬುದನ್ನು ರಾಜನು ನಿರ್ಧರಿಸಿ, ಅದನ್ನು ಅಪರಾಧಿಗಳ ಮೇಲೆ ಪ್ರಯೋಗಿಸತಕ್ಕದ್ದು. ದಂಡವಿಧಿಯಲ್ಲಿ ಉಪೇಕ್ಷೆ ಸಲ್ಲದು. ಉಪೇಕ್ಷಿಸಿದರೆ ಅಥವಾ

ವಿವೇಚನೆ ಇಲ್ಲದೆ ದಂಡವನ್ನು ಬಳಸಿದರೆ ರಾಜನು ಆಪತ್ತಿಗೆ ಗುರಿಯಾಗುತ್ತಾನೆ.

**'ಸರ್ವೋ ದಂಡಜಿತೋ ಲೋಕೋ ದುರ್ಲಭೋ ಹಿ ಶುಚಿರ್ನರಃ'** (ಮನು ೭-೨೨) ದಂಡದ ಭಯವಿಲ್ಲದೆ ಶುದ್ಧನಾಗಿ ನಡೆಯತಕ್ಕ ಮನುಷ್ಯನು ದುರ್ಲಭ. ಆದ್ದರಿಂದ ದಂಡವಿಧಿಯಿಂದಲೇ ಜನರನ್ನು ಹದ್ದುಬಸ್ತಿನಲ್ಲಿಡಬೇಕಾಗಿದೆ. **'ದುರ್ಲಭೋ ಹಿ ಶುಚಿರ್ನರಃ'** ಎಂಬ ಒಂದೇ ಒಂದು ವಾಕ್ಯದಿಂದ ಯಾವ ಕಾಲದಲ್ಲಿಯೂ ಮನುಷ್ಯನ ಪ್ರವೃತ್ತಿಯು ಸ್ವಾರ್ಥದ ಕಡೆಗೇ ಧಾವಿಸುತ್ತದೆಯೆಂದೂ, ಅರ್ಥಕಾಮಗಳ ಸಾಧನೆಗಾಗಿ ದುರ್ಮಾರ್ಗವನ್ನು ಹಿಡಿಯಲು ಅವನು ಹೇಸುವುದಿಲ್ಲವೆಂದೂ ಗೊತ್ತಾಗುತ್ತದೆ. ದಂಡದ ಭಯದಿಂದಲೇ ಮಾನವನನ್ನು ಹತೋಟಿಯಲ್ಲಿಡಬೇಕಾಗಿದೆ. **''ಭೀಷಾಸ್ಮಾದ್ವಾತಃ ಪವತೇ। ಭೀಷೋದೇತಿ ಸೂರ್ಯಃ।''** - ಈಶ್ವರನು ದಂಡಿಸಿಯಾನೆಂಬ ಭಯದಿಂದ ಗಾಳಿ ಬೀಸುತ್ತದೆ. ಸೂರ್ಯ ಹುಟ್ಟುವುದು ಈ ಭಯದಿಂದಲೇ'' ಎಂದಾಗ ಸುಖಾಭಿಲಾಷೆಯನ್ನೇ ಮೆಲುಕು ಹಾಕುತ್ತಿರುವ ಮನುಷ್ಯನ ಪಾಡೇನು? ಅಲ್ಲಿಗೆ **'ಧರ್ಮೇಣೈವ ಪ್ರಜಾಃ ಸರ್ವಾ ರಕ್ಷಂತಿ ಸ್ಮ ಪರಸ್ಪರಂ '** ಎಂಬುದು ಬರಿಯ ಅರ್ಥವಾದವೆಂದು ಪರ್ಯವಸಿತವಾಗುತ್ತದೆ. ಅಥವಾ ಧರ್ಮ ಲೋಪವಾದೀತೆಂಬ ಭಯದಿಂದಲೇ ಜನರು ತಮ್ಮನ್ನು ತಾವು ರಕ್ಷಿಸಿಕೊಳ್ಳುತ್ತಿದ್ದರು ಎನ್ನಬಹುದು.

ರಾಜನಿಗೆ ಎಷ್ಟು ವೈಭವವಿರಲಿ, ಅವನು ಸ್ವತಃ ಪರಾಕ್ರಮಿಯಾಗಿರಲಿ, ಸೇನಾದಿಗಳ ಬಲವಿರಲಿ, ಅವನು ಧರ್ಮ ನೀತಿ ಬಾಹಿರನಾದರೆ ನಾಶವಾಗುವುದು ನಿಶ್ಚಯವೆನ್ನುತ್ತಾನೆ ಮನು. ವೇನ, ನಹುಷ, ಪೈಜವನ, ಸುಮುಖ, ನಿಮಿ ಎಂಬುವರು ನೀತಿಭ್ರಷ್ಟರಾದ್ದರಿಂದ ದುರ್ಗತಿಯನ್ನು ಪಡೆದರೆಂದು ಉದಾಹರಿಸುತ್ತಾನೆ. ರಾಜನು ದಂಡನೀತಿ (Administration of justice) ಅನ್ವೀಕ್ಷಿಕೀ (ತರ್ಕವಿದ್ಯೆ) ಅಧ್ಯಾತ್ಮ ಶಾಸ್ತ್ರ ಇವುಗಳಲ್ಲಿ ಕುಶಲನಾಗಿದ್ದು ಕೃಷಿ ವಾಣಿಜ್ಯಗಳನ್ನು ಬಲ್ಲವನಾಗಿರಬೇಕು. ರಾಜನು ಜಿತೇಂದ್ರಿಯನಾಗದಿದ್ದರೆ ಆಡಳಿತವು ವ್ಯವಸ್ಥೆಯಿಂದ ನಡೆಯುವುದಿಲ್ಲವೆಂದು ಹೇಳಿದ್ದಾನೆ. ಜಿತೇಂದ್ರಿಯನೆಂದರೆ ಸಂನ್ಯಾಸಿಯಂತೆ ವಿರಕ್ತನಲ್ಲ. ಕಾಮ ಕ್ರೋಧಾದಿಗಳಿಗೆ ವಶನಾಗದೆ ಸ್ವಜನಪಕ್ಷಪಾತವನ್ನು ಮಾಡದೇ ಇರಬೇಕೆಂದು ಅಭಿಪ್ರಾಯ.

ಈ ಪ್ರಕಾರದಲ್ಲಿ ವಿಸ್ತಾರವಾಗಿ ರಾಜನೀತಿ ಮುಂದುವರಿಯುತ್ತದೆ. ಲೋಕ ವ್ಯವಹಾರ, ಸೇನಾ ವ್ಯವಹಾರ, ಅಪರಾಧ ನಿರ್ಣಯ, ಅಪರಾಧಗಳಿಗೆ ದಂಡನೆ - ಇವೆಲ್ಲವೂ ರಾಜನೀತಿಯಲ್ಲಿ ಬರುವ ವಿಷಯಗಳು. ಈಗ ಸರಕಾರದ ಆಡಳಿತ ಬಹು ವಿಸ್ತೃತವಾಗಿದೆ. ಈಗಿರುವಷ್ಟು ಇಲಾಖೆಗಳು ಹಿಂದಿರಲಿಲ್ಲ. ಆದರೂ ಮನುವಿನಿಂದ ವಿಹಿತವಾದ ರಾಜನೀತಿ ಸಂಹಿತೆ ಈಗ ಇರುವ ಆಡಳಿತಗಾರರಿಗೂ

ಅನ್ವಿತವಾಗುತ್ತದೆ. ಇನ್ನೆಷ್ಟು ಶತಮಾನಗಳು ಕಳೆದರೂ ಈ ನೀತಿ ಸಂಹಿತೆ ಅಬಾಧಿತವಾಗಿರುತ್ತದೆ. ವಿವೇಕಿಯಾದ ಯಾವ ನೀತಿವಿದನೂ ಮನುಸಂಹಿತೆಯನ್ನು ದೂರೀಕರಿಸಲಾರ.

## ವಾಲ್ಮೀಕಿ ರಾಮಾಯಣದಲ್ಲಿ ರಾಜನೀತಿ – 1

ರಾಜನೀತಿಯು ಅರ್ಥಶಾಸ್ತ್ರದಲ್ಲಿ ಸೇರುತ್ತದೆ. ಮನುಷ್ಯರು ವಾಸಿಸುತ್ತಿರುವ ದೇಶಕ್ಕೆ ಅರ್ಥವೆಂದು ಹೆಸರು. ಅದರ ಪರಿಪಾಲನೆಗೆ ಬೇಕಾದ ಮಾರ್ಗೋಪಾಯಗಳನ್ನು ತಿಳಿಸಿಕೊಡುವ ಶಾಸ್ತ್ರಕ್ಕೆ ಅರ್ಥಶಾಸ್ತ್ರವೆಂದು ಹೆಸರು. **''ಪೃಥಿವ್ಯಾಃ ಲಾಭ ಪಾಲನೋಪಾಯಃ ಶಾಸ್ತ್ರಮರ್ಥಶಾಸ್ತ್ರಂ''** ಎಂದು ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ಹೇಳಿದ್ದಾನೆ. ಇದನ್ನು ನಾವೀಗ ರಾಜನೀತಿಯೆಂದು ಕರೆಯುತ್ತಿದ್ದೇವೆ. ವಿಶಾಲವಾದ ಅರ್ಥಶಾಸ್ತ್ರದಲ್ಲಿ ರಾಜನೀತಿಯು ಒಂದು ಭಾಗವೆನ್ನಬಹುದು.

**'ಮನುಷ್ಯವತೀ ಭೂಮಿರರ್ಥಃ'** ಎಂದು ಅರ್ಥಶಾಸ್ತ್ರವು ಹೇಳುತ್ತದೆ. ಅದನ್ನೇ ರಾಜ್ಯವೆನ್ನುತ್ತೇವೆ. **''ಮನುಷ್ಯವತೀ''**ಎಂಬ ಶಬ್ದದಿಂದಲೇ ರಾಜ್ಯದಲ್ಲಿ ಮನುಷ್ಯರು ಪ್ರಧಾನರೆಂದೂ ಅವರ ರಕ್ಷಣೆಯೇ ರಾಜನ ಪ್ರಥಮ ಕರ್ತವ್ಯವೆಂದೂ ತಿಳಿಯುತ್ತದೆ. ಮನುಷ್ಯರ ಇಷ್ಟಾರ್ಥಗಳನ್ನು ಪೂರೈಸಿ ರಕ್ಷಿಸಬೇಕು. ಮನುಷ್ಯರಿಗೆ ಇಷ್ಟವಾದದ್ದನ್ನು ಅರ್ಥ, ಕಾಮ - ಎಂಬ ಎರಡು ಶಬ್ದಗಳಿಂದ ಸಂಗ್ರಹಿಸಬಹುದು. ಮೋಕ್ಷವನ್ನು ಬಯಸತಕ್ಕ ಪ್ರಜೆಗಳೂ ಇರಬಹುದು. ಏವಂಚ ಅರ್ಥ, ಕಾಮ - ಮೋಕ್ಷ - ಈ ಮೂರನ್ನೂ ಸುಗಮವಾಗಿ ಜನರು ಸಂಪಾದಿಸಿಕೊಂಡು ಅನುಭವಿಸಬಹುದಾದ ಮಾರ್ಗ ಧರ್ಮ ಒಂದೇ - ಎಂದು ನಮ್ಮ ಪ್ರಾಚೀನರು ನಿರ್ಣಯಿಸಿಕೊಂಡಿದ್ದಾರೆ. ಆದ್ದರಿಂದ ಧರ್ಮಾರ್ಥ ಕಾಮ ಮೋಕ್ಷ ಇವು ನಾಲ್ಕೂ ಪುರುಷಾರ್ಥಗಳೆಂದು ಪ್ರಸಿದ್ಧವಾಗಿವೆ. ರಾಜನಾದವನು ಮೊದಲು ಮಾಡಬೇಕಾದದ್ದೇ ಧರ್ಮದ ರಕ್ಷಣೆ. ಪ್ರಜೆಗಳು ಧರ್ಮವನ್ನು ಪರಿಪಾಲಿಸುವಂತೆ ನೋಡಿಕೊಂಡಾಗ ಅರ್ಥ,ಕಾಮ, ಮೋಕ್ಷಗಳೆಂಬ ಮನುಷ್ಯನ ಬಯಕೆಗಳು ಹಿಂಬಾಲಿಸಿಕೊಂಡು ತಾವಾಗಿ ಬರುತ್ತವೆ. ಧರ್ಮವೆಂಬುದು ಅತ್ಯಂತ ವ್ಯಾಪಕವಾದ ಅರ್ಥವುಳ್ಳ ಶಬ್ದ. ಜನರು ಹೊಗಳುವ ಉತ್ತಮವಾದ ನೀತಿ ನಡತೆಗಳೆಲ್ಲವೂ ಧರ್ಮದ ಅರ್ಥದಲ್ಲಿ ಸೇರಿ ಹೋಗುತ್ತವೆ. ಆದ್ದರಿಂದಲೇ ಭಾರತೀಯರ ರಾಜನೀತಿಯು ಧರ್ಮಶಾಸ್ತ್ರವನ್ನನುಸರಿಸಿವೆ. ಮನುಸ್ಮೃತಿಯ ೭-೮ ನೇಯ ಅಧ್ಯಾಯಗಳು ರಾಜಧರ್ಮಕ್ಕೆ ಮೀಸಲಾಗಿವೆ.

ವಾಲ್ಮೀಕಿ ರಚಿತವಾದ ಶ್ರೀಮದ್ರಾಮಾಯಣವು ಒಂದು ಮಹಾಕಾವ್ಯ. ಇದರಲ್ಲಿ ರಾಜನೀತಿಯು ವಿವರವಾಗಿ ಬರಲು ಅವಕಾಶವಿಲ್ಲ. ಆದರೆ ಇದು

ರಾಜ ಚರಿತೆಯಾದ್ದರಿಂದ ರಾಜಧರ್ಮದ ಪ್ರಸ್ತಾವ ಅಲ್ಲಲ್ಲಿ ಬರುತ್ತದೆ. ಅದನ್ನು ಆಧರಿಸಿಕೊಂಡು ವಾಲ್ಮೀಕಿ ಸಂಮತವಾದ ರಾಜನೀತಿಯನ್ನು ಈ ಪ್ರಬಂಧದಲ್ಲಿ ವಿವರಿಸಲು ಪ್ರಯತ್ನಿಸಿದ್ದೇನೆ. ಮಹಾಭಾರತದ ವಿಷಯ ಭಿನ್ನವಾದದ್ದು. ಅದು ಶಾಸ್ತ್ರ ಕಾವ್ಯ. ಅದರಲ್ಲಿ ರಾಜನೀತಿ, ವೇದಾಂತ, ಸಾಂಖ್ಯ, ಯೋಗಗಳೂ ಸೇರಿಕೊಂಡಿವೆ.

ದಶರಥ ಮಹಾರಾಜನಿಗೆ ಎಂಟು ಜನ ಮಂತ್ರಿಗಳಿದ್ದರೆಂದು ವಾಲ್ಮೀಕಿ ಮುನಿಗಳು ಹೇಳಿದ್ದಾರೆ. ಅವರ ಹೆಸರು ದೃಷ್ಟಿ, ಜಯಂತ, ವಿಜಯ, ಸುರಾಷ್ಟ್ರ, ರಾಷ್ಟ್ರವರ್ಧನ, ಅಕೋಪ, ಧರ್ಮಪಾಲ ಮತ್ತು ಸುಮಂತ್ರ. ''**ಅಷ್ಟೌಬಭೂವುರ್ವೀರಸ್ಯ ತಸ್ಯಾಮಾತ್ಯಾಯಶಸ್ವಿನಃ ॥**'' ಎಂದು ವಾಲ್ಮೀಕಿಯ ನುಡಿ. ಮನುಸ್ಮೃತಿಯಲ್ಲಿ ರಾಜನಿಗೆ ಏಳು ಅಥವಾ ಎಂಟು ಜನ ಮಂತ್ರಿಗಳಿರಬೇಕೆಂದು ಹೇಳಿದೆ. ''**ಸಚಿವಾನ್ ಸಪ್ತಚಾಷ್ಟೌವಾ ಪ್ರಕುರ್ವೀತ ಪರೀಕ್ಷಿತಾನ್ ॥**'' (ಮನುಸ್ಮೃತಿ ೭-೫೪) ಈ ಮಂತ್ರಿಗಳು ಕೀರ್ತಿಶಾಲಿಗಳೂ ಶುದ್ಧಹಸ್ತರೂ ತಮ್ಮ ಕಾರ್ಯಗಳಲ್ಲಿ ಸದಾ ಆಸಕ್ತರೂ ಆಗಿದ್ದರು. ಇವರಲ್ಲದೆ ದಶರಥನಿಗೆ ಎಂಟು ಜನ ಬ್ರಹ್ಮರ್ಷಿಗಳು ಮಂತ್ರಿಗಳಾಗಿದ್ದರಂತೆ. '**ವಸಿಷ್ಠೋ ವಾಮದೇವಶ್ಚಮಂತ್ರಿಣಶ್ಚತಥಾ ಪರೇ**' ಎಂದು ವರ್ಣನೆ ಇದೆ. ಅವರು ಯಾರೆಂದರೆ- ವಸಿಷ್ಠ, ವಾಮದೇವ, ಸುಯಜ್ಞ, ಜಾಬಾಲಿ, ಕಾಶ್ಯಪ, ಗೌತಮ, ಮಾರ್ಕಂಡೇಯ ಮತ್ತು ಕಾತ್ಯಾಯನ. ಮೊದಲು ಹೇಳಿದ ದೃಷ್ಟಿ, ಜಯಂತ - ಮೊದಲಾದ ಎಂಟು ಜನರು ತಮ್ಮ ಇಲಾಖೆಗಳಿಗೆ ಸಂಬಂಧಿಸಿದ ಲೌಕಿಕ ಕಾರ್ಯಗಳನ್ನು ನಡೆಸತಕ್ಕವರು. ವಸಿಷ್ಠಾದಿಗಳು ನ್ಯಾಯಾಧಿಪತಿಗಳಂತೆ ನ್ಯಾಯ ನಿರ್ಣಯ ಮಾಡತಕ್ಕವರೂ, ದಶರಥನ ಋತ್ವಿಜರೂ ಆಗಿದ್ದರು. ಧಾರ್ಮಿಕ ನಿರ್ಣಯಗಳಲ್ಲಿ ಇವರು ಸಲಹೆಗಾರರು.

ಈ ಮಂತ್ರಿಗಳೆಲ್ಲರೂ ಅತ್ಯಂತ ದಕ್ಷರೆಂದೂ, ಶುದ್ಧಹಸ್ತರೆಂದೂ ಕವಿಯು ವಿಶೇಷವಾಗಿ ವರ್ಣಿಸುತ್ತಾ ಹೇಳುವ ಇನ್ನೊಂದು ಮಾತು ಗಮನಾರ್ಹವಾದದ್ದು. ಆ ಮಂತ್ರಿಗಳು ತುಂಬ ನ್ಯಾಯ ಪಕ್ಷಪಾತಿಗಳು. ತಮ್ಮ ಮಕ್ಕಳೇ ಒಂದು ವೇಳೆ ತಪ್ಪು ಮಾಡಿದರೂ ಯಾವ ದಾಕ್ಷಿಣ್ಯಕ್ಕೂ ಒಳಗಾಗದೇ ತಮ್ಮ ಮಕ್ಕಳನ್ನೂ ಕಾನೂನಿಗೆ ಅನುಗುಣವಾಗಿ ದಂಡಿಸುತ್ತಿದ್ದರು. ''**ಪ್ರಾಪ್ತಕಾಲಂ ಯಥಾದಂಡಂ ಧಾರಯೇಯುಃ ಸುತೇಷ್ವಪಿ।** '' ಆ ಕಾಲದಲ್ಲಿ ರಾಜರು ವಂಶ ಪರಂಪರೆಯಿಂದ ಬಂದವರು. ಚುನಾವಣೆಯ ಪದ್ಧತಿ ಇರಲಿಲ್ಲ. ಆ ರಾಜರು ನಿರಂಕುಶ ಪ್ರಭುಗಳಾಗಿದ್ದರೆಂದು ಹೇಳುವುದು ಯುಕ್ತವಲ್ಲ. ಅವರು ಧರ್ಮದ ಅಂಕುಶಕ್ಕೆ ತಲೆ ಬಾಗಿದವರು. ದಶರಥನಿಗೆ ವಸಿಷ್ಠ ವಾಮದೇವಾದಿ ಮಂತ್ರಿಗಳಿದ್ದರಷ್ಟೆ. ರಾಜನು ಧರ್ಮ ವಿರುದ್ಧವಾಗಿ ಅಧರ್ಮ ಮಾರ್ಗಕ್ಕೆ ಹೆಜ್ಜೆಯಿಡದಂತೆ ನೋಡಿಕೊಳ್ಳುವುದು ಅವರ ಕರ್ತವ್ಯವಾಗಿತ್ತು. ಅಲ್ಲದೆ ಆ ರಾಜವಂಶದವರಿಗೆ ತಮ್ಮ ವಂಶದ ಬಗೆಗೆ ತುಂಬ ಅಭಿಮಾನವಿದ್ದುದರಿಂದ,

ವಂಶಕ್ಕೆ ಅಪಕೀರ್ತಿ ಬರಕೂಡದೆಂದು ಬಹಳ ಎಚ್ಚರಿಕೆಯಿಂದ ನಡೆಯುತ್ತಿದ್ದರು. ಶ್ರೀರಾಮ, ಲಕ್ಷ್ಮಣ, ಭರತ - ಇವರ ಸಂಭಾಷಣೆಗಳಲ್ಲಿ ಈ ವಂಶಾಭಿಮಾನವು ಸ್ಪಷ್ಟವಾಗಿ ಎದ್ದು ಕಾಣುತ್ತದೆ. ಮಹಾಕವಿ ಕಾಳಿದಾಸನು ರಘುವಂಶ ಕಾವ್ಯದಲ್ಲಿ ಆ ವಂಶದ ಸಕಲ ರಾಜರೂ ಮಹಾಪುರುಷರೆಂದೂ, ಧರ್ಮ ನಿಷ್ಠರೆಂದೂ, ಹಿರಿಯರು ತೋರಿಸಿಕೊಟ್ಟ ಹಾದಿಯಿಂದ ಒಂದು ಹೆಜ್ಜೆ ತಪ್ಪಿ ಹೋಗತಕ್ಕವರಲ್ಲವೆಂದೂ ವರ್ಣಿಸಿದ್ದಾನೆ. ಶ್ರೀರಾಮನ ಮಗನಾದ ಕುಶನು ರಾಜ್ಯಭಾರವನ್ನು ನಡೆಸುತ್ತಿರುವಾಗ ನಡೆದ ಒಂದು ಪ್ರಸಂಗವನ್ನಿಲ್ಲಿ ಉದಾಹರಿಸಬಹುದು. ಕುಶನು ತನ್ನ ಶಯ್ಯಾಗೃಹದಲ್ಲಿ ನಿದ್ರಿಸುತ್ತಿದ್ದಾಗ ಒಂದು ಸಲ ಅರ್ಧರಾತ್ರಿಯ ಸಮಯದಲ್ಲಿ ಥಟ್ಟನೆ ಎಚ್ಚರವಾಗುತ್ತದೆ. ದೀಪದ ಮಂದಪ್ರಕಾಶದಲ್ಲಿ ಒಬ್ಬ ಸುಂದರಿಯಾದ ಯುವತಿ ಕಾಣಿಸುತ್ತಾಳೆ. ಕುಶನು ಅಚ್ಚರಿಯಿಂದ ನೀನು ಯಾರೆಂದು ಕೇಳುತ್ತಾನೆ. ''**ಕಾತ್ವಂ ಶುಭೇ ? ಆಚಕ್ಷ್ವ ಮತ್ವಾವಶಿನಾಂ ರಘೂಣಾಂ ಮನಃ ಪರಸ್ತ್ರೀವಿಮುಖಪ್ರವೃತ್ತಿ ॥**''( ರಘು , ೧೬-೮) '' ಓ ಮಹಿಳೆ, ನೀನು ಯಾರು? ರಘುವಂಶದ ರಾಜರು ಜಿತೇಂದ್ರಿಯರು. ಅವರ ಮನಸ್ಸು ಎಂದಿಗೂ ಪರಸ್ತ್ರೀಯರ ಕಡೆಗೆ ಬಾಗತಕ್ಕದ್ದಲ್ಲ. ಇದನ್ನು ಸರಿಯಾಗಿ ತಿಳಿದು ಮಾತನಾಡು !'' ಎನ್ನುತ್ತಾನೆ. ತನ್ನೊಬ್ಬನ ವಿಷಯವನ್ನು ಹೇಳಿಕೊಳ್ಳದೆ ತನ್ನ ವಂಶದವರೆಲ್ಲರೂ ಜಿತೇಂದ್ರಿಯರೆಂದೂ, ಪರಸ್ತ್ರೀಯರನ್ನು ಕಣ್ಣೆತ್ತಿ ನೋಡತಕ್ಕವರಲ್ಲವೆಂದೂ ಹೇಳುತ್ತಾನೆ. ಆ ಮಹಿಳೆ ಅಯೋಧ್ಯೆಯ ಅಧಿದೇವತೆಯಾಗಿದ್ದಳೆಂಬುದು ಮುಂದಿನ ಕಥೆ.

ದಶರಥ ರಾಜನು '**ಪೌರ ಜಾನಪದ ಪ್ರಿಯ**' ನಾಗಿದ್ದನೆಂದು ರಾಮಾಯಣದಲ್ಲಿ ಹೇಳಿದೆ. ಪೌರರಿಗೆ ಮಾತ್ರವಲ್ಲ. ಹಳ್ಳಿಗಾಡಿನವರಿಗೂ ಅವನು ಪ್ರಿಯನಾಗಿದ್ದನು. ಅವನು ದೂರದರ್ಶಿ, ಮಹರ್ಷಿಕಲ್ಪ, ರಾಜರ್ಷಿ. ರಾಜನು ತನ್ನ ಮಗನಿಗೆ ರಾಜ್ಯವನ್ನು ವಹಿಸಿಕೊಡುವಾಗ ಪ್ರಜಾಭಿಪ್ರಾಯವನ್ನು ಕೇಳುವ ಪದ್ಧತಿಯಿತ್ತು. ರಾಜಪುತ್ರನು ಪ್ರಜೆಗಳಿಗೆ ಸಂಮತನಾಗಿದ್ದಾನೆಯೆ? ಅವನಿಗೆ ಪಟ್ಟಾಭಿಷೇಕ ಮಾಡಲು ಪ್ರಜೆಗಳ ಆಕ್ಷೇಪವಿಲ್ಲವಷ್ಟೆ ? ಎಂಬುದನ್ನು ಮಹಾರಾಜನು ಮೊದಲು ತಿಳಿದುಕೊಳ್ಳುತ್ತಿದ್ದನು. ಅಂತೆಯೇ ದಶರಥನೂ ಸಹ ಶ್ರೀ ರಾಮನಿಗೆ ಯುವರಾಜ ಪಟ್ಟಾಭಿಷೇಕ ಮಾಡುವ ಮೊದಲು ಪ್ರಜೆಗಳೆಲ್ಲರನ್ನೂ ಕರೆಸಿ ಅವರ ಅಭಿಪ್ರಾಯವನ್ನು ಪಡೆಯುತ್ತಾನೆ. ಅವನು ಕರೆದಿದ್ದ ಸಭೆಗೆ ಸಾಮಂತ ರಾಜರೂ, ಪೌರರೂ, ಗ್ರಾಮಾಂತರವಾಸಿಗಳಾದ ಪ್ರಜೆಗಳೂ ಬಂದಿರುತ್ತಾರೆ. ಅವರನ್ನು ಕುರಿತು, ''ಪ್ರಜೆಗಳೇ, ನನ್ನ ಹಿರಿಯರು ಹೋದ ದಾರಿಯಲ್ಲಿಯೇ ಹೋಗುತ್ತ ನಾನು ಪ್ರಜೆಗಳನ್ನು ಎಚ್ಚರಿಕೆಯಿಂದ ಯಥಾ ಶಕ್ತಿಯಾಗಿ ರಕ್ಷಿಸುತ್ತ ಬಂದಿದ್ದೇನೆ. ಈಗ ನನಗೆ ವಯಸ್ಸಾಯಿತು. ಶರೀರವು ಜೀರ್ಣವಾಯಿತು. ಈ ಶರೀರಕ್ಕೆ ವಿಶ್ರಾಂತಿ ಬೇಕೆನಿಸಿದೆ. ಧರ್ಮಪಾಲನೆಯ ಭಾರವನ್ನು ಹೊತ್ತು ನಾನು

ಬಳಲಿ ಹೋಗಿದ್ದೇನೆ. ಈಗ ನನ್ನ ಹಿರಿಯ ಮಗನಾದ ರಾಮನಿಗೆ ಯುವರಾಜ ಪದವಿಯನ್ನು ವಹಿಸಿಕೊಡಬೇಕೆಂದಿದ್ದೇನೆ. ಆತನು ರಾಜನಾದರೆ ನಿಮಗೆ ಇನ್ನೂ ಹೆಚ್ಚಿನ ಶ್ರೇಯಸ್ಸು ಆಗುತ್ತದೆಯೆಂದು ನನ್ನ ಅಭಿಪ್ರಾಯ. ನನ್ನ ಈ ಅಭಿಪ್ರಾಯವು ನಿಮಗೆ ಯೋಗ್ಯವೆನಿಸಿದರೆ, ನನ್ನ ಆಲೋಚನೆಯು ಸರಿಯೆನಿದರೆ, ಈ ಕಾರ್ಯಕ್ಕೆ ನೀವು ಸಂಮತಿಸಬೇಕು. ಇಲ್ಲದಿದ್ದರೆ ಮುಂದೆ ಏನು ಮಾಡಬೇಕೆಂಬುದನ್ನಾದರೂ ತಿಳಿಸಿರಿ. ಏಕೆಂದರೆ, ಮಧ್ಯಸ್ಥರಾದ ನಿಮ್ಮ ಅಭಿಪ್ರಾಯವು ಪಕ್ಷಪಾತವಿಲ್ಲದೆ ಪೂರ್ವಾಪರ ವಿಮರ್ಶೆಯಿಂದ ಹೆಚ್ಚು ಗ್ರಾಹ್ಯವಾಗಿರುತ್ತದೆ'' ಎಂದು ನುಡಿಯುತ್ತಾನೆ.

## ಶಾಸ್ತ್ರೀಯ ರಾಜನೀತಿ

ಶ್ರೀ ರಾಮನು ಸಕಲ ಪ್ರಜೆಗಳಿಗೂ ಸಂಮತನಾಗಿದ್ದನೆಂದೂ, ಅವರೆಲ್ಲರೂ ಏಕಕಂಠದಿಂದ ತನ್ನ ಅಭಿಪ್ರಾಯವನ್ನು ಒಪ್ಪುತ್ತಾರೆಂದೂ ದಶರಥನಿಗೆ ತಿಳಿದೇ ಇತ್ತು. ಆದರೂ ತನ್ನ ಕರ್ತವ್ಯವೆಂದು ಪ್ರಜಾಭಿಪ್ರಾಯವನ್ನು ಕೇಳುತ್ತಾನೆ. ಇದರಿಂದ ರಾಜಪ್ರಭುತ್ವದಲ್ಲಿಯೂ ಪ್ರಜಾಭಿಪ್ರಾಯಕ್ಕೆ ವಿಶೇಷವಾದ ಮಾನ್ಯತೆ ಇತ್ತೆಂದು ಗೊತ್ತಾಗುತ್ತದೆ. ದಶರಥನು ಈ ವಿಷಯವನ್ನು ಪ್ರಸ್ತಾವಿಸುವಾಗ ಹೇಳಿದ ಒಂದು ಮಾತು ಗಮನಾರ್ಹವಾದದ್ದು .

**ರಾಜಪ್ರಭಾವಜುಷ್ಟಾಂ ಹಿ ದುರ್ವಹಾಮಜಿತೇಂದ್ರಿಯೈಃ ।**
**ಪರಿಶ್ರಾಂತೋಽಸ್ಮಿ ಲೋಕಸ್ಯ ಗುರ್ವೀಂ ಧರ್ಮಧುರಂ ವಹನ್ ॥**

(ಅಯೋ. ೨-೯)

'' ಪ್ರಜಾರಕ್ಷಣೆಯೆಂಬ ಈ ಕಾರ್ಯಭಾರವು ರಾಜರಿಗೆ ಆವಶ್ಯಕವಾದ ಶೌರ್ಯಾದಿ ಗುಣಗಳನ್ನು ಅಪೇಕ್ಷಿಸುತ್ತದೆ. ಇಂದ್ರಿಯ ಜಯವಿಲ್ಲದವರಿಗೆ ರಾಜ್ಯಪಾಲನೆ ಮಾಡುವುದು ಶಕ್ಯವಲ್ಲ.'' ರಾಜನು ಜಿತೇಂದ್ರಿಯನಾಗಿರಬೇಕೆಂದು ರಾಮಾಯಣದಲ್ಲಿ ಹಲವು ಸಾರಿ ಬಂದಿದೆ. ಇದನ್ನೇ ಮನುವೂ ಹೇಳುತ್ತಾನೆ- **''ಜಿತೇಂದ್ರಿಯೋಹಿ ಶಕ್ನೋತಿ ವಶೇ ಸ್ಥಾಪಯಿತುಂ ಪ್ರಜಾಃ॥''** ( ಮನು ೭-೪೪)

ರಾಜನು ಜಿತೇಂದ್ರಿಯನಾಗಿದ್ದರೆ ಮಾತ್ರ ಪ್ರಜೆಗಳನ್ನು ಹದ್ದುಬಸ್ತಿನಲ್ಲಿಡಲು ಸಾಧ್ಯ. ಇಂದ್ರಿಯ ಜಯವೆಂದರೆ ಸಂನ್ಯಾಸಿಗಳ ಇಂದ್ರಿಯ ಜಯವಲ್ಲ. ರಾಜನು ಕಾಮಕ್ರೋಧಲೋಭಗಳಿಗೂ, ಪಕ್ಷಪಾತಕ್ಕೂ ವಶನಾಗದೆ ತನ್ನ ಕಾರ್ಯವನ್ನು ನಿರ್ವಹಿಸತಕ್ಕದ್ದು. ದಂಡಾರ್ಹನಾದವನಿಗೆ ತಪ್ಪದೆ ದಂಡನೆಯನ್ನು ವಿಧಿಸತಕ್ಕದ್ದು.

**'ಸರ್ವೋ ದಂಡಜಿತೋ ಲೋಕೋ ದುರ್ಲಭೋ ಹಿ ಶುಚಿರ್ನರಃ'** ಎನ್ನುತ್ತಾನೆ

ಮನು. ಸರ್ವರೂ ಶಿಕ್ಷೆ ಮಾಡಿದರೆ ಬಗ್ಗುತ್ತಾರೆ. ತಪ್ಪಿಗೆ ಶಿಕ್ಷೆ ವಿಧಿಸುವುದು ಬಹಳ ಮುಖ್ಯವಾದದ್ದು. ಏಕೆಂದರೆ **'ದುರ್ಲಭೋ ಹಿ ಶುಚಿರ್ನರಃ'** ತಪ್ಪು ಮಾಡದೆ ಶುದ್ಧವಾಗಿ ನಡೆಯತಕ್ಕ ಜನರು ದುರ್ಲಭ !

ಕಾಮಜನ್ಯವಾದ ದೋಷಗಳು ಹತ್ತು, ಕ್ರೋಧ ಜನ್ಯವಾದವು ಎಂಟು. ಹೀಗೆ ಹದಿನೆಂಟು ತಪ್ಪುಗಳನ್ನು ರಾಜನು ಮಾಡಕೂಡದೆಂದೂ, ಇವನ್ನು ಮಾಡದವನೇ ಜಿತೇಂದ್ರಿಯನೆಂದೂ ಮನು ಹೇಳಿದ್ದಾನೆ. ಅವುಗಳಲ್ಲಿ ಮದ್ಯಪಾನ, ನೃತ್ಯ ಗೀತೆಗಳಲ್ಲಿ ಆಸಕ್ತಿ, ಕೆಟ್ಟ ಮಾತು, ಚಾಡಿ ಹೇಳುವುದು, ದುಂದು ವೆಚ್ಚ - ಇವೂ ಸೇರಿವೆ. ರಾಜನು ಈ ಹದಿನೆಂಟು ದೋಷಗಳಿಗೆ ಅವಕಾಶವನ್ನೀಯದೆ ಜಿತೇಂದ್ರಿಯನಾಗಿರಬೇಕೆಂದು ಮನುಸ್ಮೃತಿ ಎಚ್ಚರಿಸುತ್ತದೆ. ವಾಲ್ಮೀಕಿ ರಾಮಾಯಣದಲ್ಲಿ ಈ ವಿಷಯವು ಅಲ್ಲಲ್ಲಿ ಪ್ರಸ್ತುತವಾಗಿರುವುದನ್ನು ನೋಡಬಹುದು.

ಸತ್ಯವನ್ನೇ ನುಡಿಯುವುದು, ಕೊಟ್ಟ ಮಾತನ್ನು ಎಂತಹ ಕಷ್ಟ ಬಂದರೂ ಪಾಲಿಸುವುದು ರಾಜನ ಮುಖ್ಯ ನೀತಿಯಾಗಿರಬೇಕು ಎಂದು ರಾಮಾಯಣವು ಹೇಳುತ್ತದೆ. ಅಂತೆಯೇ ದಶರಥನು ಕೈಕೇಯಿಗೆ ಕೊಟ್ಟ ಮಾತಿನಂತೆ ಮಗನಾದ ರಾಮನನ್ನು ಅರಣ್ಯ ವಾಸಕ್ಕೆ ಕಳಿಸಲು ಒಪ್ಪಿಕೊಳ್ಳಬೇಕಾಯಿತು. ಅದೊಂದು ಧರ್ಮ ಸಂಕಟದ ಪ್ರಶ್ನೆಯಾಗಿತ್ತು. ರಾಮನು ಯಾವ ತಪ್ಪನ್ನು ಮಾಡಿದ್ದಾನೆಂದು ಅವನನ್ನು ಕಾಡಿಗೆ ಅಟ್ಟಬೇಕು? ಯಾವ ತಪ್ಪಿಗಾಗಿ ಶಿಕ್ಷೆಯನ್ನು ವಿಧಿಸಬೇಕು? ನಿರಪರಾಧಿಯನ್ನು ದಂಡಿಸುವುದು ರಾಜಧರ್ಮವಲ್ಲ. ಕೊಟ್ಟ ಮಾತಿನಂತೆ ನಡೆಯದಿದ್ದರೆ ಅದೂ ರಾಜಧರ್ಮವಾಗುವುದಿಲ್ಲ. ಆದ್ದರಿಂದ ದಶರಥನು ಶ್ರೀರಾಮನಿಗೆ ''ನೀನು ಹದಿನಾಲ್ಕು ವರ್ಷ ವನವಾಸ ಮಾಡಬೇಕು'' ಎಂದು ಬಾಯಿಬಿಟ್ಟು ಹೇಳಲೇ ಇಲ್ಲ. ಆ ಸಮಯದಲ್ಲಿ ತಾನು ಹೇಗೆ ಮಾಡಬೇಕೆಂದು ಅವನು ವಸಿಷ್ಠ ವಾಮದೇವಾದಿಗಳನ್ನು ಕೇಳಬಹುದಾಗಿತ್ತು. ದಶರಥನು ಮಂತ್ರಾಲೋಚನೆ ಮಾಡದೇ ಹೋದದ್ದು ಸರಿಯಲ್ಲವೆಂದು ತೋರುತ್ತದೆ. ದಶರಥನೇ ಇದಕ್ಕಾಗಿ ಅನಂತರ ಪಶ್ಚಾತ್ತಾಪ ಪಟ್ಟಿದ್ದಾನೆ. ರಾಮನ ವನವಾಸಕ್ಕೆ ಮೌನದಿಂದಲೇ ಸಂಮತಿಯನ್ನು ನೀಡಿದ್ದಾನೆ.

ಇತ್ತ ಶ್ರೀ ರಾಮನು ಸೀತಾಲಕ್ಷ್ಮಣರೊಡನೆ ಕಾಡಿಗೆ ಹೋದ ಮೇಲೆ ಪುತ್ರ ವಿಯೋಗ ದುಃಖದಿಂದಲೇ ದಶರಥನು ಪ್ರಾಣವನ್ನು ತ್ಯಜಿಸಿದನಷ್ಟೆ. ಆಗ ಭರತ ಶತ್ರುಘ್ನರೂ ನಗರದಲ್ಲಿರಲಿಲ್ಲ. ಕೂಡಲೇ ಭರತನನ್ನು ಕರೆಸಬೇಕೆಂದು ವಸಿಷ್ಠಾದಿಗಳು ತೀರ್ಮಾನಿಸುತ್ತಾರೆ. ರಾಜ್ಯವನ್ನಾಳುವ ಮುಖ್ಯಾಧಿಕಾರಿ ಇಲ್ಲದಿದ್ದರೆ, ರಾಜ್ಯದಲ್ಲಿ ಅಧರ್ಮವು ತಲೆಯೆತ್ತುವುದೆಂದು ಸ್ಪಷ್ಟವಾಗಿ ಇಲ್ಲಿ ಕೆಲವು ಮಾತುಗಳು ಬಂದಿವೆ.

ಕ್ರಮಬದ್ಧವಾದ ಸರ್ಕಾರದ ಅವಶ್ಯಕತೆ ಎಷ್ಟೆಂಬುದೂ, ರಾಜ್ಯವನ್ನಾಳತಕ್ಕವರ ಹೊಣೆಗಾರಿಕೆ ಎಷ್ಟೆಂಬುದೂ ಇದರಿಂದ ಗೊತ್ತಾಗುತ್ತದೆ. ವಸಿಷ್ಠರ ಅಧ್ಯಕ್ಷತೆಯಲ್ಲಿ ಹಿಂದೆ ಹೇಳಿದ ಎಲ್ಲ ಮಂತ್ರಿಗಳೂ ಸಭೆ ಸೇರಿ ಆಲೋಚಿಸುತ್ತಾರೆ. ಅವರನ್ನು **'ರಾಜಕರ್ತಾರಃ'** ಎಂದು ಕವಿ ವಿಶೇಷಿಸಿದ್ದಾನೆ. ಸಭೆಯಲ್ಲಿ ನಡೆದ ಸಮಾಲೋಚನೆಗಳ ಸಂಕ್ಷಿಪ್ತ ವರದಿ ಹೀಗೆ - 'ಒಬ್ಬ ರಾಜ್ಯಾಧಿಪತಿಯನ್ನು ನಾವು ಗೊತ್ತುಮಾಡಬೇಕು. ರಾಜನಿಲ್ಲದಿದ್ದರೆ ರಾಷ್ಟ್ರವು ಅರಾಜಕವಾಗಿ ನಾಶವಾದೀತು. ಅಧರ್ಮವು ಹೆಚ್ಚುತ್ತೆಂದರೆ ಮಳೆ ಬೆಳೆಗಳಿರುವುದಿಲ್ಲ, ತಂದೆಯ ಮಾತನ್ನು ಮಗನು ಕೇಳುವುದಿಲ್ಲ. ಗಂಡನ ಮಾತನ್ನು ಹೆಂಡತಿ ಕೇಳುವುದಿಲ್ಲ. ಕ್ರಯ ವಿಕ್ರಯಾದಿ ವ್ಯವಹಾರಗಳು ಸತ್ಯ ಮಾರ್ಗದಲ್ಲಿ ನಡೆಯುವುದಿಲ್ಲ. ರಾಜನಿಲ್ಲದಿದ್ದರೆ ದುಷ್ಟರ ಹಾವಳಿ ಆರಂಭವಾಗುತ್ತದೆ. ನಾಸ್ತಿಕರು ತಲೆಯೆತ್ತಿ ಎಲ್ಲ ನಿಯಮಗಳನ್ನು ಉಲ್ಲಂಘಿಸುತ್ತಾರೆ. ಈಗ ನಮಗೆ ಕತ್ತಲೆ ಕವಿದಂತಾಗಿದೆ. ಕೂಡಲೆ ಭರತನನ್ನು ಕರೆಸಿ ಅವನಿಗೆ ರಾಜ್ಯದ ಆಡಳಿತವನ್ನು ವಹಿಸಬೇಕು''. ಹೀಗೆ ಸಭೆಯು ನಿರ್ಣಯಿಸಿದ ಮೇಲೆ ವಸಿಷ್ಠರು ಭರತನನ್ನು ಕರೆತರಲು ರಾಜದೂತರನ್ನು ತ್ವರೆಯಿಂದ ಕಳಿಸುತ್ತಾರೆ.

ಇವಿಷ್ಟು ರಾಜನೀತಿಗೆ ಸಂಬಂಧಿಸಿದ ಸಾಮಾನ್ಯ ವಿಷಯಗಳಾದವು. ಒಂದು ಸರ್ಗದಲ್ಲಿ ಮಾತ್ರ ರಾಜನೀತಿಗೆ ಸಂಬಂಧಿಸಿದ ಪಾರಿಭಾಷಿಕ ವಿಶೇಷಗಳೆಲ್ಲವೂ ಬಂದು ಸೇರಿಕೊಂಡಿವೆ. ರಾಮಾಯಣ ಮಹಾಕಾವ್ಯದಲ್ಲಿ ಇದೊಂದು ವಿಚಿತ್ರವಾದ ಸತ್ಯವಾಗಿದೆ. ಶ್ರೀರಾಮನು ಸೀತಾಲಕ್ಷ್ಮಣರೊಡನೆ ಚಿತ್ರಕೂಟ ಪರ್ವತದಲ್ಲಿ ನೆಲೆಸಿದ್ದಾಗ ಭರತನು ಪರಿವಾರ ಸಮೇತನಾಗಿ ಬರುತ್ತಾನೆ. ಶ್ರೀರಾಮನು ಭರತನನ್ನು ಸ್ವಾಗತಿಸಿ, ಬಳಿಯಲ್ಲಿ ಕುಳ್ಳಿರಿಸಿಕೊಂಡು ಅವನ ಯೋಗಕ್ಷೇಮವನ್ನು ವಿಚಾರಿಸುತ್ತಾನೆ. ಭರತನು ಈಗ ಅಯೋಧ್ಯೆಯ ರಾಜನಾಗಿದ್ದಾನೆಂಬ ಭಾವನೆಯಿಂದ 'ರಾಜನೀತಿ ರಾಜ ಧರ್ಮಗಳನ್ನು ಪಾಲಿಸುತ್ತಿರುವೆಯಾ ? ಎಂದು ಪ್ರೀತ್ಯಾದರಗಳಿಂದ ಕೇಳುತ್ತಾನೆ. ಒಂದು ಸರ್ಗ ಪೂರ್ತಿಯಾಗಿ ಈ ವಿಚಾರವೇ ಬರುತ್ತದೆ. ಇದಕ್ಕೆ (ಕಚ್ಚಿತ್) ಸರ್ಗವೆಂದೇ ಹೆಸರು.

ಆ ಪ್ರಶ್ನೆಗಳಿಂದ ಹೊಮ್ಮುವ ರಾಜನೀತಿಗಳನ್ನು ಇಲ್ಲಿ ಹೀಗೆ ಸಂಗ್ರಹಿಸಬಹುದು- ಶೂರರೂ, ವಿದ್ಯಾವಂತರೂ, ಜಿತೇಂದ್ರಿಯರೂ ಎಂದರೆ ಯಾವ ದುರ್ವ್ಯಸನವೂ ಇಲ್ಲದವರೂ - ಉತ್ತಮ ವಂಶದಲ್ಲಿ ಹುಟ್ಟಿದವರೂ, ಇನ್ನೊಬ್ಬರ ಮನೋಗತವನ್ನು ಅರಿಯಬಲ್ಲ ಸೂಕ್ಷ್ಮದೃಷ್ಟಿಯವರೂ ಆದವರನ್ನು ಮಂತ್ರಿಗಳನ್ನಾಗಿ ನೇಮಿಸಿಕೊಳ್ಳಬೇಕು. ರಾಜನ ಸರ್ವತೋಮುಖವಾದ ಜಯಕ್ಕೆ ಮಂತ್ರಾಲೋಚನೆಯೇ ಮುಖ್ಯವಾದ ಕಾರಣವಾಗಿರುತ್ತದೆ. ಅಮಾತ್ಯರು

ಆ ಮಂತ್ರಾಲೋಚನೆಯ ಸಂಗತಿಯನ್ನು ಯಾರಿಗೂ ತಿಳಿಸದೆ ಗೋಪ್ಯವಾಗಿಟ್ಟಿರಬೇಕು. ರಾಜನು ರಾತ್ರಿಯ ಕಡೆಯ ಜಾವದಲ್ಲೆದ್ದು ಅಂದಿನ ಕರ್ತವ್ಯಗಳೇನೆಂಬುದನ್ನು ಶಾಂತವಾಗಿ ಪರ್ಯಾಲೋಚಿಸಬೇಕು. ಮಂತ್ರಿಗಳೊಡನೆ ಪರ್ಯಾಲೋಚಿಸದೆ ಯಾವ ನಿರ್ಧಾರಕ್ಕೂ ಬರಬಾರದು. ಅತ್ಯುಚ್ಚವಾದ ಸ್ಥಾನದಲ್ಲಿ ಅಧಿಕಾರಿಗಳನ್ನು ನೇಮಿಸುವಾಗ ಮತ್ತೆ ಮತ್ತೆ ಅವರ ಅರ್ಹತೆಯನ್ನು ಪರೀಕ್ಷಿಸಬೇಕು. ದಕ್ಷರಾದ ಸೇನಾಪತಿಗಳಿಗೆ ಪಾರಿತೋಷಿಕಾದಿಗಳನ್ನಿತ್ತು ಸಂಮಾನಿಸಬೇಕು. ಸೈನಿಕರಿಗೆ ವೇತನವನ್ನು ಕಾಲ ಕಾಲಕ್ಕೆ ಸಲ್ಲಿಸಿಬಿಡಬೇಕು, ವಿಲಂಬಿಸಬಾರದು.

ಮಂತ್ರಿ, ಪುರೋಹಿತ, ಯುವರಾಜ, ಸೇನಾಪತಿ, ದ್ವಾರಪಾಲ, ಅಂತಃಪುರದ ಅಧಿಕಾರಿ, ಸೆರೆಮನೆಯ ಅಧಿಕಾರಿ, ಕೋಶಾಧ್ಯಕ್ಷ, ರಾಜಾಜ್ಞೆಯನ್ನು ಪ್ರಕಟಿಸುವ ಕಾರ್ಯನಿಯೋಜಕನೆಂಬ ಅಧಿಕಾರಿ, ನ್ಯಾಯಾಧೀಶ, ಧರ್ಮಾಧ್ಯಕ್ಷ, ಸೇನಾಪತಿ, ಸಂಬಳವನ್ನು ಸಲ್ಲಿಸುವ ವೇತನಾಧಿಕಾರಿ, ಸಭ್ಯ - ಎಂದರೆ ದರ್ಬಾರ್ ಭಕ್ಷಿ - ಈ ಹದಿನೆಂಟು ಜನರಿಗೆ ರಾಜನೀತಿ ಶಾಸ್ತ್ರದಲ್ಲಿ 'ತೀರ್ಥ'ರೆಂದು ಹೆಸರು. ಶತ್ರು ಪಕ್ಷದಲ್ಲಿರುವ ಈ ಹದಿನೆಂಟು ಅಧಿಕಾರಿಗಳನ್ನು ಗೂಢಚಾರರ ಮೂಲಕ ಪರೀಕ್ಷಿಸುತ್ತಿರಬೇಕು. ರಾಜನಾದವನು ಸ್ವಪಕ್ಷದಲ್ಲಿ ಮಂತ್ರಿ, ಪುರೋಹಿತ, ಯುವರಾಜ ಈ ಮೂರು ಜನರನ್ನು ತಾನೇ ಸೂಕ್ಷ್ಮವಾಗಿ ಪರೀಕ್ಷಿಸುತ್ತಿದ್ದು, ಉಳಿದವರ ಮೇಲೆ ಗೂಢಚಾರರನ್ನಿಟ್ಟು ಪರೀಕ್ಷಿಸಬೇಕು.

ಲೋಭ, ಕ್ರೋಧ, ಆಲಸ್ಯ, ಅಸತ್ಯ, ಅಜಾಗರೂಕತೆ, ಹೇಡಿತನ, ಚಾಂಚಲ್ಯ, ಮೌಢ್ಯ, ದೌರ್ಜನ್ಯ, ಪರರನ್ನು ಅವಮಾನಗೊಳಿಸುವುದು - ಈ ಹತ್ತು ದೋಷಗಳು ರಾಜನಲ್ಲಿ ಇರಬಾರದೆಂದು ಕಾಮಂದಕನು ಹೇಳಿದ್ದಾನೆ.

ವೈರಿಗೊಳಡನೆ ವ್ಯವಹರಿಸುವಾಗ ಸಾಮ, ದಾನ, ಭೇದ, ದಂಡ ಎಂಬ ನಾಲ್ಕು ಉಪಾಯಗಳನ್ನು ಬಳಸಬೇಕು. ಸಾಮ, ದಾನ, ಭೇದಗಳಿಗೆ ಶತ್ರುವು ಮಣಿಯದಿದ್ದರೆ ಕಡೆಯಲ್ಲಿ ದಂಡವನ್ನು ಪ್ರಯೋಗಿಸಬೇಕು. ನ್ಯಾಯಮಾರ್ಗದಿಂದ ಧನ ಸಂಪಾದನೆ, ಧನದ ರಕ್ಷಣೆ, ಧನದ ಅಭಿವೃದ್ಧಿ, ಅನಂತರ ಪ್ರಜಾಹಿತಕಾರ್ಯಗಳಲ್ಲಿ ವಿನಿಯೋಗ - ಇವು ರಾಜನ ಕರ್ತವ್ಯಗಳು. ವ್ಯವಸಾಯ, ವಾಣಿಜ್ಯ, ಕೋಟೆಗಳನ್ನು ಕಟ್ಟಿ ರಾಜಧಾನಿಯ ರಕ್ಷಣೆ, ನದಿಗಳಿಗೆ ಆಣೆಕಟ್ಟು, ಗಣಿಗಳ ಉದ್ಯಮ, ಕಪ್ಪ - ಕಂದಾಯಗಳ ವಸೂಲಿ, ಸೈನ್ಯದ ಅಭಿವೃದ್ಧಿ, ಹಾಳು ಬಿದ್ದ ಜಾಗಗಳನ್ನು ವಾಸ ಯೋಗ್ಯವಾಗಿ ಮಾಡುವುದು - ಇವು ಅಷ್ಟ ವರ್ಗಗಳು. ಇವುಗಳಿಗೆ ಲೋಪವಾಗದಂತೆ ರಾಜನು ದಕ್ಷತೆಯಿಂದ ವ್ಯವಹರಿಸುವುದು ಆವಶ್ಯಕ. ಪ್ರಭುಶಕ್ತಿ, ಮಂತ್ರಾಲೋಚನಾ ಶಕ್ತಿ,

ಉತ್ಸಾಹಶಕ್ತಿ ಈ ತ್ರಿವರ್ಗಗಳು ಉತ್ತಮ ಸ್ಥಿತಿಯಲ್ಲಿರಬೇಕು.

ಅಗ್ನಿಭಯ, ಅತಿವೃಷ್ಟಿ, ಅನಾವೃಷ್ಟಿ, ರೋಗ, ಮರಣ ಇವು ಐದು ಪ್ರಜೆಗಳಿಗೆ ಪ್ರಾಪ್ತವಾಗುವ ದೈವ ವ್ಯಸನಗಳು. ಇವುಗಳಲ್ಲಿ ಮರಣವನ್ನು ತಪ್ಪಿಸಲಾಗದಿದ್ದರೂ ಅಗ್ನಿ ಭಯವೇ ಮೊದಲಾದ ಉಳಿದ ಕಷ್ಟಗಳನ್ನು ರಾಜನು ನಿವಾರಿಸಬಹುದು. ಅವುಗಳ ನಿವಾರಣೆಗೆ ತಕ್ಕ ಏರ್ಪಾಡುಗಳನ್ನು ರಾಜನು ಮಾಡತಕ್ಕದ್ದು. ಇನ್ನು ಮನುಷ್ಯರಿಂದ ಜನರಿಗೆ ಪ್ರಾಪ್ತವಾಗುವ ಆರು ಬಗೆಯ ವಿಪತ್ತುಗಳುಂಟು. ಯಾವುವೆಂದರೆ, ಅಧಿಕಾರಿಗಳಿಂದ, ಕಳ್ಳಕಾಕರಿಂದ, ವಂಚಕರಿಂದ, ಶತ್ರುಗಳಿಂದ, ರಾಜನ ವಿಶ್ವಾಸವನ್ನು ಗಳಿಸಿಕೊಂಡಿರುವ ರಾಜಕೀಯ ಪುಢಾರಿಗಳಿಂದ ಮತ್ತು ಸ್ವತಃ ರಾಜನ ದುರಾಸೆಯಿಂದ ಬರುವ ವಿಪತ್ತುಗಳು. ಇವಿಷ್ಟು ವಿಪತ್ತುಗಳು ಪ್ರಜೆಗಳಿಗೆ ಪ್ರಾಪ್ತವಾಗದಂತೆ ನೋಡಿಕೊಳ್ಳಬೇಕಾದ್ದು ರಾಜನ ಕರ್ತವ್ಯವಾಗಿದೆ.

ವ್ಯವಹಾರನಿರತನಾದ ರಾಜನು ಹಲವು ಕಾರಣಗಳಿಂದ ಅನ್ಯ ರಾಜರೊಡನೆ ರಾಜಕೀಯ ಒಪ್ಪಂದವನ್ನು ಮಾಡಿಕೊಳ್ಳಬೇಕಾಗಿ ಬರುತ್ತದೆ. ಆದರೆ ಕೆಲವರೊಡನೆ ಯಾವ ಒಪ್ಪಂದವನ್ನೂ ಮಾಡಿಕೊಳ್ಳಬಾರದು. ಅಂತಹವರು ಯಾರೆಂದರೆ - ಬಾಲಕನಾದ ರಾಜ, ವೃದ್ಧ, ಹೇಡಿ, ಲೋಭಿ, ದೇವ ಬ್ರಾಹ್ಮಣ ನಿಂದಕ, ಅನೇಕ ಶತ್ರುಗಳುಳ್ಳವನು, ಸ್ವಧರ್ಮಗಳನ್ನು ಬಿಟ್ಟವನು - ಈ ರೀತಿಯಾಗಿ ಇಪ್ಪತ್ತು ಬಗೆಯವರನ್ನು ಹೇಳಲಾಗಿದೆ.

ಲಂಚವನ್ನು ತೆಗೆದುಕೊಳ್ಳುವ ನೌಕರರನ್ನು ಕೂಡಲೇ ವಜಾ ಮಾಡಬೇಕು. ಮಂತ್ರಿಗಳು ವಂಶ ಪರಂಪರೆಯಿಂದ ಬಂದವರಾದರೆ ಉತ್ತಮ. ಇದನ್ನು ಮನುವೂ ಹೇಳಿದ್ದಾನೆ. ಮಂತ್ರಿಗಳು ಮೌಲರಾಗಿರಬೇಕು ಎಂದು ಮನು ವಚನ. ಮೌಲರೆಂದರೆ ವಂಶಪರಂಪರೆಯಿಂದ ಬಂದವರು. ಅವರಿಗೆ ರಾಜ್ಯ ಕಾರ್ಯವು ರಕ್ತಗತವಾಗಿ ಬಂದಿರುತ್ತದೆ. ಅವರ ತಂದೆಯರೂ ಮಂತ್ರಿಗಳಾಗಿ ಕೆಲಸ ಮಾಡುತ್ತಿದ್ದುದರಿಂದ, ಮನೆಯಲ್ಲಿ ಕೇಳುತ್ತ ನೋಡುತ್ತಲೇ ಮಂತ್ರಿಯ ಜವಾಬ್ದಾರಿಯನ್ನು ಕಾರ್ಯಕೌಶಲ್ಯವನ್ನು ಅವರ ಮಕ್ಕಳು ತಿಳಿದಿರುತ್ತಾರೆ.

ಶ್ರೀರಾಮನು ಭರತನಿಗೆ ಹೇಳುವ ಇನ್ನೂ ಕೆಲವು ಮಾತುಗಳು ಅರ್ಥವತ್ತಾಗಿವೆ. ''ಭರತ, ಬ್ರಾಹ್ಮಣರಲ್ಲಿಯೂ ಕೆಲವರು ನಾಸ್ತಿಕರಾಗಿರುತ್ತಾರೆ. ಅವರು ಅವಿವೇಕಿಗಳು. ಅಂಥವರನ್ನು ಹತ್ತಿರಕ್ಕೆ ಸೇರಿಸಬೇಡ. ಅವರು ಅನರ್ಥವನ್ನೇ ತಂದೊಡ್ಡುವರು. ವಾಣಿಜ್ಯದಿಂದ ದೇಶವು ಅಭಿವೃದ್ಧಿಯನ್ನು ಹೊಂದುತ್ತದೆ. ಆದ್ದರಿಂದ ವಾಣಿಜ್ಯ ವೃತ್ತಿಯವರ ಕೊರತೆಗಳನ್ನು ಹೋಗಲಾಡಿಸಿ ಅವರ ಯೋಗಕ್ಷೇಮಗಳನ್ನು ವಿಶೇಷವಾಗಿ

ನೋಡಿಕೊಳ್ಳಬೇಕು. ಪ್ರತಿದಿನವೂ ಪ್ರಾತಃಕಾಲದಲ್ಲಿ ರಾಜಯೋಗ್ಯವಾದ ಉಡುಪನ್ನು ಧರಿಸಿ ಸಭಾಮಂಟಪದಲ್ಲಿ ಪ್ರಜೆಗಳಿಗೆ ದರ್ಶನವನ್ನು ಕೊಟ್ಟು ಅವರ ಪ್ರಾರ್ಥನೆಗಳನ್ನು ಆಲಿಸಬೇಕು.

ಶ್ರೀಮಂತರಿಗೂ ಬಡವರಿಗೂ ಯಾವುದಾದರೊಂದು ವಿಷಯದಲ್ಲಿ ವಿವಾದವು ಉದ್ಭವಿಸುವುದುಂಟು. ಅಂತಹ ಸಂದರ್ಭದಲ್ಲಿ ನ್ಯಾಯಾಲಯದ ತೀರ್ಪು ಏನೆಂಬುದನ್ನು ರಾಜನು ಸೂಕ್ಷ್ಮವಾಗಿ ಗಮನಿಸುತ್ತಿರಬೇಕು. ಶ್ರೀಮಂತರು ಕೊಡುವ ಲಂಚದ ಆಸೆಗೆ ಸಿಕ್ಕಿದ ನ್ಯಾಯಾಧಿಪತಿಗಳೂ ಸಹ ಬಡವರಿಗೆ ನ್ಯಾಯವನ್ನೊದಗಿಸದೇ ಇರಬಹುದು. ಪ್ರಜೆಗಳ ಬಿಸಿಯಾದ ಕಣ್ಣೀರು ರಾಜನ ಸಂತತಿಯನ್ನೂ, ಸಂಪತ್ತನ್ನೂ ಸುಟ್ಟು ಬಿಡುತ್ತದೆ. ಇವೇ ಮೊದಲಾದ ಉಪದೇಶಗಳು ಸರ್ವಕಾಲದಲ್ಲಿಯೂ ಅರ್ಥವತ್ತಾದವು. ಇಂದಿನ ಆಡಳಿತಗಾರರಿಗೂ ಎಚ್ಚರಿಕೆಯನ್ನು ನೀಡುತ್ತವೆ.

ಶ್ರೀರಾಮನ ಈ ರಾಜಧರ್ಮದ ಉಪನ್ಯಾಸವನ್ನು ಕೇಳಿದ ಮೇಲೆ ಭರತನು ಹೇಳುತ್ತಾನೆ -

**‘‘ ಕಿಂ ಮೇ ಧರ್ಮಾದ್ವಿಹೀನಸ್ಯ ರಾಜಧರ್ಮಃ ಕರಿಷ್ಯತಿ ।**
**ಶಾಶ್ವತೋ ಽಯಂ ಸದಾಧರ್ಮಃ ಸ್ಥಿತೋಽಸ್ಮಾಸು ನರರ್ಷಭ ।**
**ಜ್ಯೇಷ್ಠೇ ಪುತ್ರೇ ಸ್ಥಿತೇ ರಾಜನ್ ಕನೀಯಾನ್ ನ ಭವೇನ್ನೃಪಃ ॥’’**

‘‘ಸಾಮಾನ್ಯ ಧರ್ಮದಿಂದಲೇ ಭ್ರಷ್ಟನಾದ ನನಗೆ ಈ ರಾಜಧರ್ಮದಿಂದ ಏನಾಗಬೇಕು? ಅಣ್ಣ, ಹಿರಿಯ ಮಗನಿರುವಾಗ ಕಿರಿಯನು ರಾಜನಾಗಬಾರದೆಂಬುದು ನಮ್ಮ ಇಕ್ಷ್ವಾಕುವಂಶದಲ್ಲಿ ಶಾಶ್ವತವಾಗಿ ನಡೆದು ಬಂದ ಧರ್ಮ. ಆದ್ದರಿಂದ ನೀನೇ ಅಯೋಧ್ಯೆಯ ರಾಜ’’ಎಂದು ಹೇಳುತ್ತಾನೆ. ಶ್ರೀರಾಮನ ವನವಾಸಕ್ಕೆ ಕಾರಣನಾದ್ದರಿಂದ ತಾನು ಧರ್ಮಭ್ರಷ್ಟನೆಂದು ಭರತನ ಅಭಿಪ್ರಾಯ.

ಬ್ರಾಹ್ಮಣ ಧರ್ಮ, ಕ್ಷತ್ರಿಯ ಧರ್ಮ ಮುಂತಾದವು ಮನುಷ್ಯನಿಗೆ ಹೇಳಿದ ವಿಶೇಷ ಧರ್ಮಗಳು. ಮನುಷ್ಯನೆಂಬವನಿಗೆ ಮೊದಲು ಮನುಷ್ಯತ್ವವನ್ನು ಕೊಡುವ ಸಾಮಾನ್ಯ ಧರ್ಮವೊಂದುಂಟು. ಅದನ್ನು ಪಾಲಿಸಿ ಮನುಷ್ಯತ್ವವನ್ನು ಉಳಿಸಿಕೊಂಡವರಿಗೆ ವಿಶೇಷ ಧರ್ಮದಲ್ಲಿ ಅಧಿಕಾರ ಬರುತ್ತದೆ. ಮನುಷ್ಯತ್ವವೇ ಇಲ್ಲದವರಿಗೆ ರಾಜನೀತಿಯಿಂದ ಏನೂ ಪ್ರಯೋಜನವಾಗದು.

ಇನ್ನು ರಾವಣನ ಲಂಕೆಯ ಕಡೆಗೆ ತಿರುಗಿದರೂ ರಾಜನೀತಿಗೆ ಸಂಬಂಧಿಸಿದ ಕೆಲವು ಅಂಶಗಳು ಗೋಚರಿಸುತ್ತವೆ. ರಾಜಧಾನಿಗೆ ಐದು ಬಗೆಯ ದುರ್ಗಗಳು -

ಎಂದರೆ ಕೋಟೆಗಳು ಇರುತ್ತವೆಯೆಂದು ವ್ಯಾಖ್ಯಾನಕಾರರು ಬರೆದಿದ್ದಾರೆ. ಮನುಸ್ಮೃತಿಯಲ್ಲಿ ಆರು ಬಗೆಯ ದುರ್ಗಗಳ ವರ್ಣನೆ ಇದೆ. ಅವುಗಳಲ್ಲಿ **ಮಹೀದುರ್ಗ, ಜಲದುರ್ಗ, ನರದುರ್ಗ**ಗಳು ಮುಖ್ಯವಾದವು. ಮಹೀದುರ್ಗವೆಂದರೆ ಕಲ್ಲು ಇಟ್ಟಿಗೆಗಳಿಂದ ಕಟ್ಟಿದ ಭದ್ರವಾದ ಕೋಟೆ. ನಗರದ ಸುತ್ತಲೂ ಇರುವ ನೀರು ತುಂಬಿದ ಕಂದಕವೇ ಜಲದುರ್ಗ. ಅಹೋರಾತ್ರವೂ ಎಚ್ಚರದಿಂದ ಕಾಯುತ್ತಿರುವ ಕಾವಲು ಪಡೆಯೇ ನರದುರ್ಗ. ಲಂಕೆಗೆ ಸುತ್ತಲೂ ಸಮುದ್ರವೇ ಇದ್ದುದರಿಂದ ಜಲದುರ್ಗವು ಸಹಜವಾಗಿ ಒದಗಿತ್ತು. ರಾವಣನು ನಗರಕ್ಕೆ ಪ್ರಬಲವಾದ ಪ್ರಾಕಾರವನ್ನು ಕಟ್ಟಿ ಮಹೀದುರ್ಗವನ್ನೂ ಮಾಡಿಕೊಂಡಿದ್ದನು. ಪೂರ್ವ, ಪಶ್ಚಿಮ, ದಕ್ಷಿಣಗಳಲ್ಲಿ ಮಹಾಸಾಗರವೇ ಇದ್ದುದರಿಂದ ಆ ದಿಕ್ಕುಗಳಲ್ಲಿ ಹೆಚ್ಚಿನ ರಕ್ಷಣೆ ಬೇಕಾಗಿರಲಿಲ್ಲ. ಅವನಿಗೆ ಭಯವಿದ್ದುದು ಲಂಕೆಗೆ ಉತ್ತರದಲ್ಲಿದ್ದ ಭರತಖಂಡದ ರಾಜರಿಂದ. ಈ ನಿಮಿತ್ತದಿಂದ ರಾವಣನು ದಂಡಕಾರಣ್ಯದ ಜನಸ್ಥಾನದಲ್ಲಿ **ಖರ, ದೂಷಣ,** ತ್ರಿಶಿರರ ಸೇನಾಪತ್ಯದಲ್ಲಿ ರಾಕ್ಷಸ ಸೇನೆಯನ್ನು ಕಾವಲಾಗಿಟ್ಟಿದ್ದನು. ಇದೇ ರಾವಣನ **ನರದುರ್ಗ - ನರರಾಕ್ಷಸ ದುರ್ಗ.** ಶ್ರೀ ರಾಮನು ಆ ರಾಕ್ಷಸರನ್ನೆಲ್ಲ ಸಂಹರಿಸಿದ ಮೇಲೆ ಶೂರ್ಪಣಖಿ ಲಂಕೆಗೆ ಧಾವಿಸಿ ರಾವಣನನ್ನು ಗದರಿಸುತ್ತಾಳೆ, ''ಎಲೈ ರಾವಣ, ನೀನು ಕಾಮಭೋಗದಲ್ಲಿ ಮೈ ಮರೆತಿದ್ದೀಯೆ. ಸುಖಲೋಲುಪನಾದ ರಾಜನನ್ನು ಪ್ರಜೆಗಳು ಶ್ಮಶಾನದ ಬೆಂಕಿಯನ್ನು ಕಂಡಂತೆ ಅಲಕ್ಷಿಸುತ್ತಾರೆ. ನೀನು ಗೂಢಚಾರರನ್ನಿಟ್ಟುಕೊಂಡಿಲ್ಲ. ನೀನೆಂತಹ ರಾಜ? ಖರನೇ ಮೊದಲಾದ ಎಲ್ಲ ರಾಕ್ಷಸರನ್ನೂ ರಾಮನೆಂಬ ಒಬ್ಬ ಕ್ಷತ್ರಿಯನು ಸಂಹರಿಸಿದ್ದಾನೆ. ಈ ವಿಚಾರ ನಿನಗೆ ಇನ್ನೂ ತಿಳಿದಿಲ್ಲ. ನೀನು ಗರ್ವದಿಂದ ಮೈಮರೆತಿದ್ದೀಯೆ'' - ಎಂದು ಮೂದಲಿಸುತ್ತಾಳೆ. ಗೂಢಚರ್ಯೆ ಹಿಂದಿನಿಂದಲೂ ಇದ್ದ ರಾಜನೀತಿಯೇ.

ರಾಮಾಯಣದಲ್ಲಿ ವಾಲ್ಮೀಕಿ ಮುನಿಗಳು ಪ್ರತಿಪಾದಿಸಿರುವುದು ಧರ್ಮ ಪ್ರಧಾನವಾದ ರಾಜನೀತಿ. ರಾವಣ, ಇಂದ್ರಜಿತು ಮೊದಲಾದವರು ಕೂಟ ನೀತಿಯನ್ನು ಅನುಸರಿಸಿದರೂ ಅದು ವಾಲ್ಮೀಕಿ ಸಂಮತವಲ್ಲ. ಕೂಟ ನೀತಿಯನ್ನು ರಾಮಾಯಣದಲ್ಲಿಯೇ ನಿಂದಿಸಿದ್ದಾರೆ. ರಾಜನೂ, ಮಂತ್ರಿಗಳೂ ಧರ್ಮನಿಷ್ಠರಾಗಿದ್ದರೆ ಸಮಸ್ತ ಪ್ರಜಾ ವರ್ಗವನ್ನೂ ಧರ್ಮ ಮಾರ್ಗದಲ್ಲಿಯೇ ನಡೆಸಿಕೊಂಡು ಹೋಗಲು ಸಾಧ್ಯ. ಅಂತಹ ಧರ್ಮಮಯವಾದ ರಾಷ್ಟ್ರಕ್ಕೆ ಎಂದಿಗೂ ಚ್ಯುತಿ ಇಲ್ಲ. ರಾಜನಿಗೆ ಪರಾಜಯವೂ ಇಲ್ಲ. ಧರ್ಮನಿಷ್ಠೆ ಬರಬೇಕಾದರೆ ಇಂದ್ರಿಯಗಳ ಮೇಲೆ ಹತೋಟಿ ಬೇಕು. ಇಂದ್ರಿಯ ಜಯವಿಲ್ಲದೆ ಧರ್ಮನಿಷ್ಠೆ ಬರದು. ಈ ಕಾರಣದಿಂದಲೇ ರಾಜನೂ, ಮಂತ್ರಿಗಳೂ ಜಿತೇಂದ್ರಿಯರಾಗಿರಬೇಕೆಂದು ರಾಮಾಯಣವೂ,

ಮನುಸ್ಮೃತಿಯೂ ಒತ್ತಿ ಒತ್ತಿ ಹೇಳುತ್ತವೆ. ಇದಕ್ಕೊಂದು ಚಮತ್ಕಾರಿಯಾದ ಶ್ಲೋಕವನ್ನು ರಾಮಾಯಣದಿಂದಲೇ ಉದಾಹರಿಸಬಹುದು.

ರಾವಣನು ಯುದ್ಧದಲ್ಲಿ ಹತನಾಗಿ ಮಲಗಿರುತ್ತಾನೆ. ಅವನ ರಾಣಿಯಾದ ಮಂಡೋದರಿ ಅಲ್ಲಿಗೆ ಬಂದು ಬಹುವಿಧವಾಗಿ ಶೋಕಿಸುತ್ತಾಳೆ. ಆಗ ಅವಳು ಹೇಳುವ ಒಂದು ನುಡಿ ಇದು -''ಮಹಾರಾಜ, ನಿನ್ನನ್ನು ಜಯಿಸಿದವನು ರಾಮನಲ್ಲ, ಹಿಂದೆ ನೀನು ಇಂದ್ರಿಯಗಳನ್ನು ಗೆದ್ದು ಅದರ ಬಲದಿಂದ ಮೂರು ಲೋಕಗಳನ್ನೂ ಜಯಿಸಿದೆ. ಪೂರ್ವವೈರವನ್ನು ಸ್ಮರಿಸಿಕೊಂಡವೋ ಎಂಬಂತೆ ಆ ಇಂದ್ರಿಯಗಳೇ ನಿನ್ನನ್ನು ಗೆದ್ದು ಸೇಡು ತೀರಿಸಿಕೊಂಡವು''

**''ಇಂದ್ರಿಯಾಣಿ ಪುರಾಜಿತ್ವಾ ಜಿತಂ ತ್ರಿಭುವನಂ ತ್ವಯಾ ।**
**ಸ್ಮರದ್ಭಿರಿವ ತದ್ವೈರಮಿಂದ್ರಿಯೈರೇವನಿರ್ಜಿತಃ॥''** (ಯುದ್ಧ ೧೧೪-೧೮)

ತಾತ್ಪರ್ಯವಿಷ್ಟು - ರಾಜನೀತಿಯನ್ನನುಸರಿಸಿ ಧರ್ಮ ಮಾರ್ಗದಲ್ಲಿಯೇ ಮಂತ್ರಾಲೋಚನೆಯನ್ನು ಹೇಳುವ ಬ್ರಾಹ್ಮಣ್ಯ, ಆ ನೀತಿಯನ್ನು ಧರ್ಮ ಮಾರ್ಗದಲ್ಲಿಯೇ ಅನುಷ್ಠಾನಕ್ಕೆ ತರುವ ಸಾಮರ್ಥ್ಯವಿರುವ ಕ್ಷಾತ್ರ - ಇವು ಸುರಕ್ಷಿತವಾಗಿದ್ದರೆ ಕೇವಲ ಒಂದು ರಾಜ್ಯವನ್ನಲ್ಲ ಸಮಸ್ತ ಜಗತ್ತನ್ನೂ ಇವೆರಡೇ ಪರಿಪಾಲಿಸಬಲ್ಲವು ಎಂದು ಶ್ರೀ ಶಂಕರಾಚಾರ್ಯರು ಗೀತಾಭಾಷ್ಯದಲ್ಲಿ ಹೇಳಿದ್ದಾರೆ. **'ಬ್ರಹ್ಮಕ್ಷತ್ರೇ ಹಿ ಸಮ್ಯಕ್ ಪರಿಪಾಲಿತೇ ಜಗತ್ ಪರಿಪಾಲಯಿತು ಮಲಂ'** ಎಂಬುದೇ ಆ ಸೂಕ್ತಿ. (ಗೀತಾ ಭಾ. ೪-೧) ವಾಲ್ಮೀಕಿ ಮುನಿಗಳು ಪ್ರತಿಪಾದಿಸಿದ ರಾಜನೀತಿಯೇ ಅದು. ಈ ನೀತಿಗಳೆಲ್ಲವೂ ಮನುಸ್ಮೃತಿಗೆ ಅನುರೋಧವಾಗಿವೆ.

# ೮ - ಆಧ್ಯಾತ್ಮ ವಿಚಾರ

ಇನ್ನೊಂದು ಕುತೂಹಲಕರವಾದ ಪ್ರಶ್ನೆ ಹುಟ್ಟುತ್ತದೆ. ಪುರುಷಾರ್ಥಗಳಲ್ಲಿ ಮನುಸಂಮತವಾದ ಮೋಕ್ಷ ಸ್ವರೂಪವಾವುದು? ಅದ್ವೈತಾದಿ ದರ್ಶನಗಳಲ್ಲಿ ಮನುಸಂಮತವಾದ ದರ್ಶನ ಯಾವುದು? ಈ ಪ್ರಶ್ನೆ ಅಸಂಬದ್ಧವಲ್ಲ. ಮನು ಹೇಳಿದ ಧರ್ಮಾನುಷ್ಠಾನದ ಪರಮ ಫಲವೇ ಮೋಕ್ಷವಾಗಿರುತ್ತದೆ. ಅಲ್ಲದೆ ಆತ್ಮಜ್ಞಾನವೂ ಧರ್ಮವೇ ಆಗಿರುವುದರಿಂದ ಈ ಧರ್ಮಶಾಸ್ತ್ರದಲ್ಲಿ ಆತ್ಮಜ್ಞಾನದ ವಿಷಯವು ಪ್ರಸ್ತುತವಾಗಿರಲೇಬೇಕು.

**''ಧೃತಿಃ ಕ್ಷಮಾದಮೋಽಸಕ್ತೇಯಂ ಶೌಚಮಿಂದ್ರಿಯನಿಗ್ರಹಃ ।**
**ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಮ್ ॥''** (೬-೯೨)

ಎಂಬ ದಶಧರ್ಮಲಕ್ಷಣಗಳಲ್ಲಿ ವಿದ್ಯೆ ಸೇರಿದೆ. ವಿದ್ಯೆ ಎಂದರೆ ಇಲ್ಲಿ ಆತ್ಮಜ್ಞಾನವೆಂದು ಸರ್ವಸಂಮತವಾದ ಅರ್ಥ. ಮಹಾಭಾರತದಲ್ಲಿ **''ಆತ್ಮಜ್ಞಾನಂ ತಿತಿಕ್ಷಾಚ ಧರ್ಮಃ ಸಾಧಾರಣೋ ನೃಪ''** ಎಂಬ ಶ್ಲೋಕದಲ್ಲಿ ಆತ್ಮಜ್ಞಾನವನ್ನು ಧರ್ಮವೆಂದು ಸ್ಪಷ್ಟವಾಗಿ ನಿರ್ದೇಶಿಸಿದೆ. ಯಾಜ್ಞವಲ್ಕ್ಯ ಸ್ಮೃತಿಯಲ್ಲಿ **''ಅಯಂ ತು ಪರಮೋಧರ್ಮೋ ಯದ್ಯೋಗೇನಾತ್ಮದರ್ಶನಮ್''** (೧-೮) ಎಂದು ಹೇಳಿದೆ. ಆದರೆ ಪೂರ್ವ ಮೀಮಾಂಸಾ ಶಾಸ್ತ್ರದಲ್ಲಿ ನಿರೂಪಿತವಾದ ಚೋದನಾ ಲಕ್ಷಣ ಧರ್ಮವನ್ನು ಮನುಸ್ಮೃತಿಕಾರನು

ಪ್ರಧಾನವಾಗಿ ಈ ಸ್ಮೃತಿಯಲ್ಲಿ ನಿರೂಪಿಸಿದ್ದಾನೆ. ಚೋದನೆ ಎಂದರೆ ಪ್ರೇರಣೆ, ಸ್ನಾನ, ಸಂಧ್ಯಾವಂದನೆ ಮುಂತಾದವು ಪ್ರೇರಣೆಗೆ ಒಳಪಟ್ಟ ಕರ್ಮಗಳು. ಕರ್ಮಗಳ ಆಚರಣೆ ಕ್ರಿಯಾರೂಪವಾದದ್ದು. ಕ್ರಿಯೆಯು ಕರ್ತೃವಾದ ಪುರುಷನಿಗೆ ಅಧೀನವಾದದ್ದು. ಇದನ್ನು ಪುರುಷತಂತ್ರವೆನ್ನುತ್ತಾರೆ. ಆತ್ಮಜ್ಞಾನವಾದರೋ ವಸ್ತುತಂತ್ರ. ವಸ್ತು ಹೇಗಿದೆಯೋ ಹಾಗೆ ಜ್ಞಾನವು ಬರುತ್ತದೆ. ಅದನ್ನು 'ಮಾಡಲು' ಬರುವುದಿಲ್ಲ. ಮನುವಾದರೋ ಪುರುಷ ತಂತ್ರವಾದ ಕರ್ಮವನ್ನು ವಿಸ್ತರಿಸಿ ಹೇಳಿದ್ದಾನೆ. ವಸ್ತು ತಂತ್ರವಾದ ಅಧ್ಯಾತ್ಮಜ್ಞಾನವನ್ನು ಒತ್ತಿ ಹೇಳಲಿಲ್ಲ. ಅದಕ್ಕೆ ಪ್ರತ್ಯೇಕವಾಗಿ ಶಾರೀರಕ ಸೂತ್ರಾದಿ ಗ್ರಂಥಗಳಿರುವುದರಿಂದಲೂ ಕರ್ಮಕಾಂಡ ಪ್ರತಿಪಾದ್ಯವಾದ ಕರ್ಮನಿಷ್ಠೆಗೆ ಒತ್ತು ಕೊಡುವುದು ಉದ್ದಿಷ್ಟವಾದ್ದರಿಂದಲೂ ಆತ್ಮಜ್ಞಾನದ ವಿಷಯವನ್ನು ವಿಸ್ತರಿಸಲಿಲ್ಲ. ಕರ್ಮವು ಸಾಧನ. ಆತ್ಮಜ್ಞಾನವು ಸಾಧ್ಯ. ಕರ್ಮಾಚರಣೆಯಿಂದ ಚಿತ್ತಶುದ್ಧಿಯಾದ ಮೇಲೆ ಆತ್ಮಜ್ಞಾನದ ಉದಯ. ಆದ್ದರಿಂದ ಮನು ಮಹಾತ್ಮನು ಆತ್ಮಜ್ಞಾನದ ಕಡೆಗೆ ಕೈತೋರಿಸಿ ವಿರಮಿಸಿದ್ದಾನೆ.

ಆತನು ತೋರಿಸಿದ ಆತ್ಮಜ್ಞಾನದ ಸ್ವರೂಪವಾವುದು? ಅದು ಸಂಕ್ಷಿಪ್ತವಾಗಿದ್ದರೂ ಪರಿಶೀಲನೆಗೆ ಯೋಗ್ಯವಾದದ್ದು. ಮಹರ್ಷಿಗಳು ಮನುವಿನ ಬಳಿಗೆ ಬಂದು 'ಭಗವನ್, ಚತುರ್ವರ್ಣದವರು ಮತ್ತು ಸಂಕೀರ್ಣ ಜಾತಿಯವರು ಆಚರಿಸಬೇಕಾದ ಧರ್ಮಗಳು ಯಾವುವು?'' ಎಂದಿಷ್ಟೇ ಕೇಳಿದ್ದಾರೆ. ಆಗ ಮನು ಆರಂಭದಲ್ಲಿ ಹೇಳಿದ್ದೇನೆಂದರೆ -

**''ಆಸೀದಿದಂ ತಮೋಭೂತಮಪ್ರಜ್ಞಾತಮಲಕ್ಷಣಂ ।**
**ಅಪ್ರತರ್ಕ್ಯಮವಿಜ್ಞೇಯಂ ಪ್ರಸುಪ್ತಮಿವ ಸರ್ವತಃ ॥''**

ಅರ್ಥ :- ಆರಂಭದಲ್ಲಿ ಈ ಜಗತ್ತು ಕತ್ತಲೆಯಂತಹ ಪ್ರಕೃತಿಯಲ್ಲಿ ಅಡಗಿಹೋಗಿತ್ತು. ಇಂದ್ರಿಯಗಳಿಗೆ ಗೋಚರಿಸದೇ ಅಪ್ರತ್ಯಕ್ಷವಾಗಿತ್ತು. ಅದು ಹೇಗಿದೆಯೆಂದು ಅನುಮಾನದಿಂದ ತಿಳಿಯಲೂ ಸಾಧ್ಯವಿರಲಿಲ್ಲ. ಶಬ್ದಗಳಿಂದ ವರ್ಣಿಸಲೂ ಶಕ್ಯವಿರಲಿಲ್ಲ. ಎಲ್ಲವೂ ಗಾಢ ನಿದ್ರೆಯಲ್ಲಿದೆಯೋ ಎಂಬಂತಿತ್ತು.

ಋಷಿಗಳಿಗೆ ಧರ್ಮ ಶಾಸ್ತ್ರವನ್ನು ಬೋಧಿಸುವಾಗ ಮನು ಆರಂಭದಲ್ಲಿ **''ಆಸೀದಿದಂ ತಮೋಭೂತಂ...,.''** ಎಂದು ಹೇಳಿದನಷ್ಟೆ. ಋಗ್ವೇದದ ನಾಸದೀಯ ಸೂಕ್ತದಲ್ಲಿ **'ತಮ ಆಸೀತ್ ತಮಸಾ ಗೂಢಮಗ್ರೇ'** ಇತ್ಯಾದಿ ಮಂತ್ರಗಳಿಂದ ವರ್ಣಿತವಾದದ್ದೇ ಇದು.**'ತಮೋ ವಾ ಇದಮಗ್ರ ಆಸೀತ್'** ಇತ್ಯಾದಿ ಉಪನಿಷದ್ವಚನಗಳೂ ಹೀಗೆಯೇ ಹೇಳಿವೆ. ನಾಮ ರೂಪಗಳಾವವೂ ಇಲ್ಲದ ಕಾರಣ

ಸೃಷ್ಟಿಗೆ ಮೊದಲು ಯಾವುದಿತ್ತೆಂದು ಹೇಳುವುದು ಕಠಿಣವಾಗಿ ಪರಿಣಮಿಸಿದೆ. ಸತ್ ಎಂಬ ಒಂದೇ ವಸ್ತುವಿತ್ತೆಂದು ಕಡೆಯ ನಿರ್ಣಯ. ಮನುಮಹಾತ್ಮನ ಮುಂದಿನ ವಚನ ಹೀಗಿದೆ -

**''ತತಃ ಸ್ವಯಂ ಭೂರ್ಭಗವಾನವ್ಯಕ್ತೋ ವ್ಯಂಜಯನ್ನಿದಮ್ ।**
**ಮಹಾಭೂತಾದಿ ವೃತೌಜಾಃ ಪ್ರಾದುರಾಸೀತ್ತಮೋನುದಃ॥''**

ಅನಂತರ ಭಗವಾನ್ ಸ್ವಯಂಭುವಾದ ಹಿರಣ್ಯಗರ್ಭನು ಪ್ರಾದುರ್ಭವಿಸಿದನು. ಆತನು ಅವ್ಯಕ್ತನಾಗಿದ್ದು ಬಾಹ್ಯೇಂದ್ರಿಯಗಳಿಗೆ ಅಗೋಚರನಾಗಿದ್ದನು. ಅಪ್ರತಿಹತವಾದ ಸಾಮರ್ಥ್ಯವುಳ್ಳ ಆತನು ಪ್ರಕೃತಿಯನ್ನು ಪ್ರೇರಿಸತಕ್ಕವನಾಗಿ ಪಂಚಭೂತಾದಿಗಳನ್ನು ಪ್ರಕಟಿಸುತ್ತ ಪ್ರಾದುರ್ಭವಿಸಿದನು ಎಂದರ್ಥ. **ಸ್ವಯಂಭೂಃ** = ತನ್ನ ಇಚ್ಛೆಯಂತೆ ಶರೀರವನ್ನು ಧರಿಸತಕ್ಕವನು. **ತಮೋನುದಃ** ಎಂಬ ಶಬ್ದವು ಅಕಾರಾಂತವೆಂದು ತಿಳಿದು ಪ್ರಕೃತಿಯನ್ನು ಪ್ರೇರಿಸತಕ್ಕವನು ಎಂಬ ಅರ್ಥವನ್ನು ಕುಲ್ಲೂಕ ಭಟ್ಟರು ವ್ಯಾಖ್ಯಾನದಲ್ಲಿ ಬರೆದಿದ್ದಾರೆ. ಆದರೆ ಅಪ್ಪಯ್ಯ ದೀಕ್ಷಿತರು ಶಿವತತ್ವ ವಿವೇಕದ ೪೮ ನೇ ಶ್ಲೋಕದ ವ್ಯಾಖ್ಯಾನದಲ್ಲಿ ಈ ಶಬ್ದವು 'ದ'ಕಾರಾಂತವಾದ ಪಂಚಮ್ಯಂತವೆಂದು ಬರೆದಿದ್ದಾರೆ. ತಮೋಗುಣಕ್ಕೆ ಪ್ರಭುವಾದ ಪರಮಶಿವನಿಂದ ಹಿರಣ್ಯಗರ್ಭನು ಆವಿರ್ಭವಿಸಿದನು ಎಂದು ಅವರ ಅಭಿಪ್ರಾಯವಿದೆ. ಪರಮಶಿವನೆಂದರೆ ಪರಬ್ರಹ್ಮ. ಹೇಗಿದ್ದರೂ ಈ ಅರ್ಥವು ಅದ್ವೈತ ಪ್ರಕ್ರಿಯೆಗೆ ಅನುಗುಣವಾಗಿದೆ.

ಪರಬ್ರಹ್ಮವೇ ತನ್ನ ಮಾಯಾಶಕ್ತಿಯಿಂದ ಸಗುಣವಾಗಿ ಸ್ವಯಂಭುವಾಯಿತು. ಇದನ್ನೇ ಮನುವು **''ಸ ಏವ ಸ್ವಯಮುದ್ಬಭೌ''** ಎಂಬ ಮಾತಿನಿಂದ ಸ್ಪಷ್ಟವಾಗಿ ತಿಳಿಸಿದ್ದಾನೆ. ಅನಂತರ **''ಸೋಽಭಿಧ್ಯಾಯ ಅಪ ಏವ ಸಸರ್ಜಾದೌ''** ಎಂದು ಮನು ಹೇಳಿದ್ದಾನೆ. ಜಗತ್ತನ್ನು ಸೃಷ್ಟಿಸುವುದಕ್ಕೆ ಮೊದಲು ಹಿರಣ್ಯ ಗರ್ಭನಾದ ಪರಮಾತ್ಮನು ಅಭಿಧ್ಯಾನ ಪೂರ್ವಕವಾಗಿ ಮೊದಲು ಜಲವನ್ನು ಸೃಷ್ಟಿಸಿದನು ಎಂದು ತಾತ್ಪರ್ಯ. ಶ್ರುತಿಯಲ್ಲಿ **'ಸ ಐಕ್ಷತ ಲೋಕಾನ್ ನು ಸೃಜಾ ಇತಿ'** ಎಂದಿದೆ. ಐಕ್ಷತ ಎಂದರೆ ಆಲೋಚಿಸಿದನು ಎಂದರ್ಥ. ಇದನ್ನೇ ಮನು **'ಅಭಿಧ್ಯಾಯ'** ಎಂದು ಸೂಚಿಸಿದ್ದಾನೆ. ಪರಮಾತ್ಮನ ಇಚ್ಛಾಪೂರ್ವಕವಾಗಿ ಸೃಷ್ಟಿಯಾಯಿತು ಎಂದು ಅಭಿಪ್ರಾಯ. 'ಪ್ರಕೃತಿಯೇ ಸ್ವತಂತ್ರವಾಗಿ ಜಗತ್ತನ್ನು ಸೃಜಿಸುತ್ತದೆ' ಎಂಬ ಸಾಂಖ್ಯಮತವು ಮನುವಿಗೆ ಸಂಮತವಲ್ಲ. ಅಲ್ಲದೆ ಪರಮಾತ್ಮನ ಕೇವಲ ಅಭಿಧ್ಯಾನದಿಂದ ಜಗತ್ತಿನ ಸೃಷ್ಟಿಯಾಯಿತೆಂದು ಮನು ಹೇಳಿದ್ದಾನೆ. **'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ'** ಎಂದು ಅದ್ವೈತ ಸಿದ್ಧಾಂತವಿದೆ. ಛಾಂದೋಗ್ಯೋಪನಿಷತ್ತಿನಲ್ಲಿ **'ಬಹು ಸ್ಯಾಂ ಪ್ರಜಾಯೇಯ'** ನಾನು

ಬಹುರೂಪನಾಗಬೇಕು - ಎಂದು ಪರಬ್ರಹ್ಮವು ಆಲೋಚಿಸಿತು ಎಂದಿದೆ. ಸೃಷ್ಟಿಗೆ ಉಪಾದಾನ ಕಾರಣ ಪರಬ್ರಹ್ಮವೇ ಹೊರತು ಬೇರೆ ಇಲ್ಲ. ಆದಿಯಲ್ಲಿ 'ಆತ್ಮನಿಂದ ಆಕಾಶ ಹುಟ್ಟಿತು' ಎಂದು ತೈತ್ತಿರೀಯದಲ್ಲಿದೆ. ಆದ್ದರಿಂದ ಆಕಾಶಾದಿ ಸೃಷ್ಟಿಪೂರ್ವಕವಾಗಿ ಜಲದ ಸೃಷ್ಟಿಯಾಯಿತು ಎಂದು ತಿಳಿಯಬೇಕು. ಗಡಿಗೆ ಮುಂತಾದ್ದರ ಸೃಷ್ಟಿಗೆ ಮಣ್ಣು ಮುಂತಾದ ಉಪಾದಾನ ಕಾರಣವಿರುತ್ತದೆ. ಇಲ್ಲಿ ಯಾವ ಉಪಾದಾನವೂ ಇಲ್ಲ. ಇಚ್ಛಾಮಾತ್ರದಿಂದ ಸೃಷ್ಟಿಯಾದ ಪ್ರಯುಕ್ತ ಪರಬ್ರಹ್ಮವೇ ಉಪಾದಾನ. ಅದೇ ನಿಮಿತ್ತ ಕಾರಣ ಎಂದು ತಿಳಿಯಬಹುದು.

ಮನುಸ್ಮೃತಿಯ ವ್ಯಾಖ್ಯಾನಕಾರರಾದ ಕುಲ್ಲೂಕ ಭಟ್ಟರು ಭೇದವಾದಿಗಳಾದ ಭಾಸ್ಕರಾಚಾರ್ಯರ ಪಂಥದವರು. ಅವರು 'ತ್ರಿದಂಡಿ ವೇದಾಂತ ಸಿದ್ಧಾಂತವೇ (ಶ್ರೀ ಶಂಕರಾಚಾರ್ಯರ ಅದ್ವೈತ ಸಿದ್ಧಾಂತ) ಮನುವಿಗೆ ಸಂಮತವಾದಂತೆ ಕಾಣುತ್ತದೆ! ' ಎಂದು ಬರೆದು ಮನುವಚನವನ್ನು ಹೇಗೋ ತಮ್ಮ ಮಾರ್ಗಕ್ಕೆ ಎಳೆದು ಅರ್ಥವನ್ನು ಹೇಳಿದ್ದಾರೆ. ದ್ವೈತ ಮತವಂತೂ ಮನುವಿಗೆ ಸಂಮತವಾದದ್ದೇ ಅಲ್ಲ.

ಇನ್ನು ನಮ್ಮ ಮಾತುಗಳನ್ನು ಬೆಳೆಸುವುದಕ್ಕೆ ಬದಲಾಗಿ ಮಾನವ ಧರ್ಮಶಾಸ್ತ್ರದ ಮುಕ್ತಾಯದಲ್ಲಿ ಬರುವ ಕೆಲವು ಮನು ವಚನಗಳನ್ನೇ ಉದಾಹರಿಸಿ ಮನು ಮಹಾತ್ಮನಿಗೆ ಕೈಮುಗಿದು ವಿರಮಿಸುವುದು ಉತ್ತಮವೆನಿಸುತ್ತದೆ.

**೧. ''ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯ ನಿಗ್ರಹಃ ।**
**ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಮ್ ॥''**

(೬-೯೨)

ತೃಪ್ತಿ, ತಾಳ್ಮೆ, ಮನೋನಿಗ್ರಹ, ಅನ್ಯಾಯವಾಗಿ ಪರಸ್ವವನ್ನು ಸ್ವೀಕರಿಸಬಾರದೆಂಬ ಆಸ್ತೇಯ, ದೇಹವಸ್ತ್ರಗಳ ಶುಚಿತ್ವ, ಮೋಹಕ ವಸ್ತುಗಳ ಕಡೆ ಕಣ್ಣೆತ್ತಿ ನೋಡದ ಇಂದ್ರಿಯ ನಿಗ್ರಹ, ಶಾಸ್ತ್ರಜ್ಞಾನ, ಆತ್ಮ ಜ್ಞಾನ, ಸತ್ಯ ಕೋಪಗೊಳ್ಳದೆ ಶಾಂತನಾಗಿರುವುದು - ಇಷ್ಟು ದಶವಿಧವಾದ ಧರ್ಮದ ಸ್ವರೂಪ.

**ತಾಳ್ಮೆ** = ಅನ್ಯರು ಅಪಕಾರಮಾಡಿದರೂ ಪ್ರತೀಕಾರ ಮಾಡದಿರುವುದು. ಆಸ್ತೇಯವೆಂದರೆ ಕಳ್ಳತನ ಮಾಡದಿರುವುದು ಎಂದಿಷ್ಟೇ ಅರ್ಥವಲ್ಲ. ನ್ಯಾಯ ವಿರುದ್ಧವಾಗಿ ಪರಸ್ವವನ್ನು ಸ್ವೀಕರಿಸುವುದು ಸ್ತೇಯ. ಅದನ್ನು ದೂರಮಾಡುವುದು ಆಸ್ತೇಯ. ಈ ಹತ್ತು ಧರ್ಮಗಳನ್ನು ಎಲ್ಲ ಆಶ್ರಮದವರೂ ಪಾಲಿಸಬೇಕು. ವಿಶೇಷವಾಗಿ ಸಂನ್ಯಾಸಿಯು ಪಾಲಿಸಬೇಕಾದದ್ದು.

**೨. ''ಯೋಽಸ್ಯಾತ್ಮನಃ ಕಾರಯಿತಾ ತಂ ಕ್ಷೇತ್ರಜ್ಞಂ ಪ್ರಚಕ್ಷತೇ ।**
**ಯಃ ಕರೋತಿ ತು ಕರ್ಮಾಣಿ ಸ ಭೂತಾತ್ಮೋಚ್ಯತೇ ಬುಧೈಃ ॥''**

(೧೨-೧೨)

ಇಲ್ಲಿ ಆತ್ಮವೆಂದರೆ ದೇಹ. ಈ ದೇಹದಿಂದ ಕೆಲಸವನ್ನು ಮಾಡಿಸತಕ್ಕ ಜೀವಾತ್ಮನನ್ನು ಕ್ಷೇತ್ರಜ್ಞನೆಂದು ವಿದ್ವಾಂಸರು ಹೇಳುತ್ತಾರೆ. ಕೆಲಸವನ್ನು ಮಾಡತಕ್ಕ ಈ ದೇಹಕ್ಕೆ ಭೂತಾತ್ಮನೆಂದು ಹೆಸರು. (ಕುಲ್ಲೂಕ ಭಟ್ಟರು ಹೀಗೆಯೇ ವ್ಯಾಖ್ಯಾನ ಮಾಡಿದ್ದಾರೆ.)

ಪುರಾಣಾದಿಗಳಲ್ಲಿ ಜೀವಾತ್ಮನನ್ನೇ ಕ್ಷೇತ್ರಜ್ಞನೆಂದು ಬಹಳ ಕಡೆ ಹೇಳಿದ್ದಾರೆ. ಭಗವದ್ಗೀತೆಯಲ್ಲಿ **''ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ''** ಎಂಬ ವಾಕ್ಯವಿದೆಯಷ್ಟೆ. ಅಲ್ಲಿಯೂ 'ಜೀವಾತ್ಮನೇ ನಾನೆಂದು ತಿಳಿ' ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಜೀವಾತ್ಮ ಪರಮಾತ್ಮರಿಗೆ ಅಭೇದವೇ ಅಲ್ಲಿ ಪ್ರತಿಪಾದಿತವಾಗಿದೆ. ಈ ಶರೀರವು ಪಾಪಪುಣ್ಯಗಳನ್ನು ಬೆಳೆಸುವ ಕ್ಷೇತ್ರ(ಹೊಲ). ಕ್ಷೇತ್ರವನ್ನು ರಕ್ಷಿಸುತ್ತ ಬೆಳೆಯನ್ನು ಬೆಳೆಸತಕ್ಕವನು ಜೀವ. ಅವನೇ ಹೊಲವನ್ನು ಬಲ್ಲ ಕ್ಷೇತ್ರಜ್ಞ. ದೇಹವು ಪಂಚಭೂತಗಳ ಮಿಶ್ರಣವಾದ್ದರಿಂದ ಭೂತಾತ್ಮ. ಆತ್ಮ ಶಬ್ದಕ್ಕೆ ಶರೀರವೆಂಬ ಅರ್ಥವೂ ಇದೆ.

**೩. ''ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಸಮಂ ಪಶ್ಯನ್ನಾತ್ಮಯಾಜೀ ಸ್ವಾರಾಜ್ಯಮಧಿಗಚ್ಛತಿ॥''** (೧೨-೯೧)

ಸ್ಥಾವರ ಜಂಗಮಾದಿ ಸರ್ವಭೂತಗಳಲ್ಲಿಯೂ ನಾನೇ ಆತ್ಮ ರೂಪದಲ್ಲಿದ್ದೇನೆ. ಸರ್ವಭೂತಗಳೂ ಪರಮಾತ್ಮನಲ್ಲಿ ಇವೆ ಎಂದು ಸಾಮಾನ್ಯರೂಪದಲ್ಲಿ ತಿಳಿದು, **ಆತ್ಮಯಾಜೀ = ಬ್ರಹ್ಮಾರ್ಪಣಂ ಬ್ರಹ್ಮಹವಿಃ** ಎಂಬ ಬ್ರಹ್ಮಾರ್ಪಣ ನ್ಯಾಯದಿಂದ ಆತ್ಮ ಯಜ್ಞ ಮಾಡತಕ್ಕವನು ಸ್ವಾರಾಜ್ಯ = ಬ್ರಹ್ಮತ್ವವನ್ನು ಪಡೆಯುತ್ತಾನೆ. ಮೋಕ್ಷವನ್ನೈದುತ್ತಾನೆ ಎಂದು ಅಭಿಪ್ರಾಯ.

ವಿವರಣೆ:

**''ಸ್ವೇನ ರಾಜತೇ ಇತಿ ಸ್ವರಾಟ್ ''**- ಸ್ವಯಂ ಪ್ರಕಾಶನೆಂದರ್ಥ.

**''ತಸ್ಯ ಭಾವಃ ಸ್ವಾರಾಜ್ಯಂ. ಬ್ರಹ್ಮತ್ವಂ''** - ಮೋಕ್ಷ ಎಂದರ್ಥ.

ಭಗವದ್ಗೀತೆಯಲ್ಲಿ ಈ ಶ್ಲೋಕವಿದೆ -

**''ಬ್ರಹ್ಮಾರ್ಪಣಂ ಬ್ರಹ್ಮಹವಿಃ ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।**
**ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥''**

**ಅರ್ಥ :-**

ಬ್ರಹ್ಮಜ್ಞಾನಿಯು ಯಜ್ಞದಲ್ಲಿ ಅರ್ಪಣ ಮಾಡುವ ಸ್ರುಕ್, ಸ್ರುವ ಮೊದಲಾದ ಸಾಧನವು ಬ್ರಹ್ಮವೇ. ಹವಿಸ್ಸೂ ಬ್ರಹ್ಮವೇ. ಬ್ರಹ್ಮವೆಂಬ ಅಗ್ನಿಯಲ್ಲಿ ಬ್ರಹ್ಮದಿಂದ ನಡೆದ ಹೋಮವೂ ಬ್ರಹ್ಮವೇ. ಬ್ರಹ್ಮವೆಂಬ ಕರ್ಮದಲ್ಲಿ ನೆಟ್ಟ ಬುದ್ಧಿಯುಳ್ಳವನಾಗಿ ಅವನು ಸೇರಬೇಕಾದದ್ದೂ ಬ್ರಹ್ಮವೇ.

ಸರ್ವವೂ ಬ್ರಹ್ಮವೆಂಬ ನಿಶ್ಚಯವೇ ಬ್ರಹ್ಮಾರ್ಪಣ ನ್ಯಾಯ. ಜ್ಞಾನ ನಿಷ್ಠನಾದವನು ಮಾಡುವ ಕರ್ಮವು ಯಾವ ಲೌಕಿಕ ಫಲವನ್ನೂ ನೀಡದೆ ಬ್ರಹ್ಮದಲ್ಲಿ ಅಡಗಿ ಹೋಗುವುದು.

**೪. ''ಪಿತೃದೇವಮನುಷ್ಯಾಣಾಂ ವೇದಶ್ಚಕ್ಷುಃ ಸನಾತನಮ್ ।**
**ಅಶಕ್ಯಂ ಚಾಪ್ರಮೇಯಂ ಚ ವೇದಶಾಸ್ತ್ರಮಿತಿ ಸ್ಥಿತಿ಼ ॥''** (೧೨-೯೪)

ಪಿತೃಗಳಿಗೂ, ದೇವತೆಗಳಿಗೂ, ಮನುಷ್ಯರಿಗೂ ಸಹ ವೇದವು ಶಾಶ್ವತವಾದ ನೇತ್ರವಾಗಿದೆ. (ಉಳಿದವು ಗೌಣಶಾಸ್ತ್ರಗಳು) ಇದು ಯಾರಿಗೂ ನಿರ್ಮಿಸಲು ಅಶಕ್ಯವಾದದ್ದು. ಇದರಲ್ಲಿರುವ ಪ್ರಮೇಯವು ಬೇರೆ ಯಾವ ಶಾಸ್ತ್ರದಿಂದಲೂ ತಿಳಿಯಲು ಸಾಧ್ಯವಿಲ್ಲದ್ದು. ಇದಿಷ್ಟು ಸಿದ್ಧವಾದ ಸ್ಥಿತಿಯಾಗಿದೆ.

ವೇದವು ಮನುಷ್ಯ ನಿರ್ಮಿತವಲ್ಲ. ಇದು ಅಪೌರುಷೇಯ. ಪರಮಾತ್ಮನ ಮುಖದಿಂದ ಉಸಿರಿನಿಂದೆ ಹೊರಬಂದದ್ದು. ವೇದ ಒಂದೇ ಪ್ರಮಾಣಭೂತವಾದ ಗ್ರಂಥ. ವೇದ ವಿರುದ್ಧವಾಗಿರುವ ಗ್ರಂಥಗಳು ಕುತ್ಸಿತ ದೃಷ್ಟಿಯುಳ್ಳವು. ಅವು **''ನಿಷ್ಫಲಾನಿ ಅನೃತಾನಿ ಚ ''**ಎಂಬುದು ಮನುಸ್ಮೃತಿಯ ಸಿದ್ಧಾಂತ.

**೫. '' ಆತ್ಮೈವ ದೇವತಾಃ ಸರ್ವಾಃ ಸರ್ವಮಾತ್ಮನ್ಯವಸ್ಥಿತಮ್ ।**
**ಆತ್ಮಾ ಹಿ ಜನಯತ್ಯೇಷಾಂ ಕರ್ಮಯೋಗಂ ಶರೀರಿಣಾಮ್ ॥''**
(೧೨-೧೧೯)

ಇಂದ್ರಾದಿ ಸಮಸ್ತ ದೇವತೆಗಳೂ ಪರಮಾತ್ಮನೇ. ಸರ್ವಜಗತ್ತೂ ಆತ್ಮನಲ್ಲಿಯೇ ಇದೆ. ಪರಮಾತ್ಮನೇ ಈ ಜೀವರಿಗೆ ಕರ್ಮ ಸಂಬಂಧವನ್ನು ಉಂಟು ಮಾಡಿದ್ದಾನೆ.

ಪರಮಾತ್ಮನೇ ಸಮಸ್ತ ದೇವತೆಗಳ ರೂಪದಲ್ಲಿಯೂ, ಮನುಷ್ಯಾದಿ ಪ್ರಾಣಿಗಳ ರೂಪದಲ್ಲಿಯೂ ಇದ್ದಾನೆ. ''**ಸರ್ವಂ ಖಲ್ವಿದಂ ಬ್ರಹ್ಮ**'' ಎಂದು ಅಭಿಪ್ರಾಯ. ಆತ್ಮನು ಕರ್ಮವನ್ನು ತಾನೇ ವಿಧಿಸಿಕೊಂಡು ತಾನೇ ಆಚರಿಸುತ್ತಿದ್ದಾನೆ.

**೬. ''ಏತಮೇಕಂ ವದಂತ್ಯಾಗ್ನಿಂ ಮನುಮನ್ಯೇ ಪ್ರಜಾಪತಿಮ್ ।**
**ಇಂದ್ರಮೇಕೇ ಪರೇ ಪ್ರಾಣಂ ಅಪರೇ ಬ್ರಹ್ಮಶಾಶ್ವತಮ್ ॥'**

(೧೨-೧೨೩)

ಈ ಪರಮಾತ್ಮನನ್ನು ಕೆಲವರು ಅಗ್ನಿಯೆಂದು ಉಪಾಸನೆ ಮಾಡುತ್ತಾರೆ. ಕೆಲವರು ಮನುವೆಂಬ ಪ್ರಜಾಪತಿಯೆಂದೂ, ಕೆಲವರು ಇಂದ್ರನೆಂದೂ, ಇನ್ನು ಕೆಲವರು ಪ್ರಾಣವೆಂದೂ, ಮತ್ತೆ ಕೆಲವರು ಶಾಶ್ವತವಾದ ಪರಬ್ರಹ್ಮವೆಂದೂ ಉಪಾಸನೆ ಮಾಡುತ್ತಾರೆ.

''**ಏಕಂಸದ್ ವಿಪ್ರಾ ಬಹುಧಾ ವದಂತಿ** '' ಎಂಬ ಉಪನಿಷದ್ವಚನದ ಅಭಿಪ್ರಾಯವಿದು.

**೭. ''ಏವಂ ಯಃ ಸರ್ವಭೂತೇಷು ಪಶ್ಯತ್ಯಾತ್ಮಾನಮಾತ್ಮನಾ ।**
**ಸ ಸರ್ವಸಮತಾಮೇತ್ಯ ಬ್ರಹ್ಮಾಭ್ಯೇತಿ ಪರಂ ಪದಮ್ ॥''**

(೧೨- ೧೨೫)

ಈ ಪ್ರಕಾರವಾಗಿ ಯಾವಾತನು ಸರ್ವಭೂತಗಳಲ್ಲಿಯೂ ಇರುವ ಆತ್ಮನನ್ನು ತನ್ನ ಆತ್ಮವೆಂದು ತಿಳಿಯುತ್ತಾನೋ ಆತನು ಸರ್ವತ್ರ ಸಮಬುದ್ಧಿಯುಳ್ಳವನಾಗಿ ಪರಮೋತ್ತಮಸ್ಥಾನವಾದ ಬ್ರಹ್ಮದಲ್ಲಿ ಸೇರಿ ಹೋಗುತ್ತಾನೆ. ಮುಕ್ತನಾಗುತ್ತಾನೆ ಎಂದು ಆಶಯ.

ಈ ಪ್ರಕಾರವಾಗಿ ಮನುಸ್ಮೃತಿಯ ಹೃದಯವೇನೆಂಬುದನ್ನು ಯಥಾಶಕ್ತಿಯಾಗಿ ನಿರೂಪಿಸಲಾಯಿತು. ವೇದಗಳಿಗೆ ಪರಮಪ್ರಾಮಾಣ್ಯವನ್ನಿತ್ತು, ಮಾನವಜಾತಿಯ ಶ್ರೇಯೋಽಭಿವೃದ್ಧಿಗಾಗಿ ಒಬ್ಬ ಮಹಾತ್ಮನು ರಚಿಸಿದ ಧರ್ಮಗ್ರಂಥವಿದು. ಮನುಷ್ಯನ ಮಾನಸ ಪ್ರವೃತ್ತಿಗಳಲ್ಲಿ ರಾಜಸ ತಾಮಸ ಭಾವಗಳು ತರತಮಸ್ವರೂಪದಿಂದ ಸೇರಿಕೊಂಡಿರುತ್ತವೆ. ಅವುಗಳಿಗೆ ಪೂರ್ವಸಂಸ್ಕಾರ, ಸಹವಾಸಗಳು ಕಾಮನೆಗಳು ವಿವಿಧವಾಗಿರುತ್ತವೆ. ಅವುಗಳನ್ನನುಸರಿಸಿ ಧರ್ಮಾಚರಣೆಗಳನ್ನೂ ವಿಧಿ ನಿಷೇಧಗಳನ್ನೂ ಧರ್ಮಶಾಸ್ತ್ರವು ಗೊತ್ತು ಮಾಡಿರುತ್ತದೆ. ಸರಕಾರದ ಕಾನೂನುಗಳು ದೇಹಕ್ಕೆ ಸಂಬಂಧಿಸಿದವು. ವೇದೋಕ್ತ ಧಾರ್ಮಿಕ ವಿಧಿಗಳು ಆತ್ಮಕ್ಕೆ ಸಂಬಂಧಿಸಿದವು. ಪಾಪಪುಣ್ಯ ಸಂಸ್ಕಾರಗಳನ್ನು ನಂಬಿದವರಿಗೆ ಧರ್ಮಶಾಸ್ತ್ರ, ನಂಬದವರು ಯಥೇಚ್ಛವಾಗಿ ತಮ್ಮ ಪಾಡಿಗೆ ಇದ್ದುಕೊಂಡಿರಲಿ. ಆದರೆ ಅವರು ಮನುಸ್ಮೃತಿಯನ್ನು ನಿಂದಿಸಿ ಗೇಲಿಮಾಡುವುದು ಅಧಿಕ ಪ್ರಸಂಗತನ. ಅಜ್ಞರೂ, ಅಲ್ಪಶ್ರುತರೂ ದುಡುಕದೆ ದೂರವಿರುವುದರಿಂದ ಅವರಿಗೂ ಕ್ಷೇಮ, ದೇಶಕ್ಕೂ ಕ್ಷೇಮ.





"ಮನುಸ್ಮೃತಿ, ಧರ್ಮಶಾಸ್ತ್ರ ಎಂದೊಡನೆ ಬುದ್ಧಿಜೀವಿಗಳೆಂದು ಹೆಸರಿಟ್ಟುಕೊಂಡಿರುವ ವಾಚಾಟರಿಗೆ ಮೊದಲು ತೋರತಕ್ಕದ್ದು ಚಾತುರ್ವರ್ಣ್ಯವೇ. - 'ಜಾತಿಭೇದವನ್ನು ಹುಟ್ಟು ಹಾಕಿ ಮೇಲು ಕೀಳೆಂದು ಸಮಾಜವನ್ನೊಡೆದು, ಅನ್ಯರನ್ನು ತುಳಿಯುವುದಕ್ಕಾಗಿ ಧರ್ಮಶಾಸ್ತ್ರವನ್ನು ಬರೆದರು. ಮನುಸ್ಮೃತಿ ಧರ್ಮಶಾಸ್ತ್ರವಲ್ಲ. ಅಧರ್ಮ ಸಂಹಿತೆ. *ನ ಸ್ತ್ರೀ ಸ್ವಾತಂತ್ರ್ಯಮರ್ಹತಿ* ಇತ್ಯಾದಿ ಘೋಷಣೆಗಳಿಂದ ಸ್ತ್ರೀಯರನ್ನು ಮೂಲೆಗೆ ತಳ್ಳಿ ತಮ್ಮ ಊಳಿಗದವರನ್ನಾಗಿ ಮಾಡಿಕೊಂಡರು' - ಇತ್ಯಾದಿ ಘೋಷಣೆಗಳನ್ನು ಈ ವಿಚಾರವಾದಿಗಳೆಂದುಕೊಳ್ಳುವವರು ಹೇಳುತ್ತಾ ಈಗಲೂ ಬ್ರಹ್ಮದ್ವೇಷಿಗಳಾಗಿಯೇ ನಡೆದುಕೊಳ್ಳುತ್ತಿದ್ದಾರೆ. ಇದನ್ನೀಗ ಪರಿಶೀಲಿಸಬೇಕಾಗಿದೆ."

"ದುರಾಗ್ರಹವೂ ಬೇಡ, ಛಲವಾದವೂ ಬೇಡ. ಇದ್ದದ್ದನ್ನು ಎದ್ದು ತೋರಿಸೋಣ. ಬಿದ್ದುದನ್ನು ಎತ್ತಿ ತೋರಿಸೋಣ."

"ಜಾತಿ ನಿಮಿತ್ತಿಕವಾದ ವರ್ಣ ವಿಭಾಗವು ತೊಡೆದು ಹೋದರೂ ಗುಣವೃತ್ತಿ ನಿಮಿತ್ತಿಕವಾಗಿ ಅದು ಎಂದೆಂದಿಗೂ ಇರತಕ್ಕದ್ದೇ. ಧರ್ಮ ಶಾಸ್ತ್ರಗಳ ಮೇಲೆ ಬುದ್ಧಿ ಜೀವಿಗಳು ದಾಳಿ ಮಾಡಿ ಹಾವಳಿ ಎಬ್ಬಿಸಿದಾಗ ಧರ್ಮ ಶ್ರದ್ಧೆಯೇ ಅಳಿಸಿ ಹೋದೀತು."

ಈ ರೀತಿಯಾಗಿ ಈ ದಿಸೆಯ ಉನ್ನತ ಮಟ್ಟದ ಚರ್ಚೆಯನ್ನೊಳಗೊಂಡು ಧರ್ಮ ಮಾರ್ಗವೂ, ಅದರ ನಿಯಮವೂ ಯಾವೊಂದು ಜಾತಿ, ಮತ, ಪಂಥ, ಪ್ರದೇಶಕ್ಕೆ ಸೀಮಿತವಾದುದಲ್ಲ. ಇಡೀ ಮಾನವ ಕುಲಕ್ಕೇ ಅನ್ವಯವಾಗುವಂತಹದು - ಎಂಬುದನ್ನು ಉನ್ನತ ವೈಚಾರಿಕ ಜಿಜ್ಞಾಸೆಯೊಂದಿಗೆ ಶಾಸ್ತ್ರೀಯ ಮತ್ತು ಸಮಕಾಲೀನ ಸಮಾಜದ ದೃಷ್ಟಿಯನ್ನಿರಿಸಿಕೊಂಡು ಚಿಂತಿಸಿ ಹದ ಪಾಕಗೊಳಿಸಿ ಕಟ್ಟಿಕೊಡುವ ಕುತೂಹಲಕಾರಿ, ಜ್ಞಾನದಾಯಕ ಗ್ರಂಥವಿದು.

ಕನ್ನಡವು ಕಂಡ ಅಪರೂಪದ ಸಂಸ್ಕೃತ ವಿದ್ವಾಂಸರು, ಬಹುಭಾಷಾ ಪ್ರಾಜ್ಞರು , ಬಹುಶ್ರುತರು, ಪಳಗಿದ ಗ್ರಂಥಕಾರರು ಈ ಎಲ್ಲಾ ಸಾಮರ್ಥ್ಯದ ಮಹಾಮಹೋಪಾಧ್ಯಾಯ ಶ್ರೀ ಎನ್. ರಂಗನಾಥ ಶರ್ಮಾ ಅವರಿಂದ ಸತ್ವಪೂರ್ಣ ವಿಶ್ಲೇಷಣೆಯೊಂದಿಗೆ ಮೂಡಿ ಬಂದ ಈ ಕೃತಿಯು ಕನ್ನಡಿಗರಿಗೆ ಅಸದೃಶ ಅರಿವಿನ ಆಗರವಾಗಿದೆ.

'ನಾ. ಸು.'

Printed At : Chetana Co-Op. Offset Press, Sirsi. ☎: 227002